ಆಚಾರ್ಯ 'ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ'ವನ್ನು ಕಟ್ಟಿ ಬೆಳೆಸಿದವರಲ್ಲಿ ಪ್ರೊ॥ ಎಂ.ವಿ. ಸೀತಾರಾಮಯ್ಯನವರು ಮುಖ್ಯರು. ಅವರು ಅದನ್ನು ೦೬ ಮೇ, ೧೯೭೯ರಲ್ಲಿ ಸ್ಥಾಪಿಸಿದರು. ಈ ಪ್ರತಿಷ್ಠಾನವನ್ನು ರಾಷ್ಟ್ರಕವಿ ಕುವೆಂಪು ಅವರು ೧೦ ಮಾರ್ಚ್, ೧೯೮೦ರಂದು ಉದ್ಘಾಟಿಸಿದರು. ಕರ್ನಾಟಕ ಸರ್ಕಾರ, ಬೃಹತ್ ಬೆಂಗಳೂರು ನಗರ ಪಾಲಿಕೆ ಮತ್ತು ಸಾರ್ವಜನಿಕರ ಸಹಕಾರ, ಸಹಾಯಗಳಿಂದ ಬೆಂಗಳೂರಿನ ನರಸಿಂಹರಾಜ ಕಾಲೋನಿಯಲ್ಲಿ 'ಬಿ.ಎಂ.ಶ್ರೀ. ಕಲಾ ಭವನ' ನಿರ್ಮಾಣವಾಗಿದೆ. ಪ್ರತಿಷ್ಠಾನದ 'ಪ್ರೊ॥ ಎಂ.ವಿ. ಸೀತಾರಾಮಯ್ಯ ಸಂಶೋಧನಾ ಕೇಂದ್ರ'ದಲ್ಲಿ, ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆಯನ್ನು ಪಡೆದ ಪಿಎಚ್.ಡಿ., ಹಾಗೂ ಎಂ.ಫಿಲ್ ಅಧ್ಯಯನಗಳು ನಡೆಯುತ್ತಿವೆ. ಪ್ರತಿಷ್ಠಾನ ಅಪರೂಪದ ಹಸ್ತಪ್ರತಿ ಸಂಗ್ರಹಾಲಯವನ್ನು ಹಾಗೂ ಉತ್ತಮ ಗ್ರಂಥ ಭಂಡಾರವನ್ನು ಹೊಂದಿದೆ. ಹಸ್ತಪ್ರತಿ ಅಧ್ಯಯನ ಮತ್ತು ಹಳಗನ್ನಡ ಅಧ್ಯಯನ ತರಗತಿಗಳನ್ನು ಪ್ರತಿಷ್ಠಾನ ನಡೆಸುತ್ತಿದೆ. ಪ್ರತಿಷ್ಠಾನ ತ್ರೈಮಾಸಿಕ 'ವಾರ್ತಾಪತ್ರ'ವನ್ನು ಹಾಗೂ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಕರ್ನಾಟಕ 'ಲೋಚನ'ವನ್ನು ಪ್ರಕಟಿಸುತ್ತಿದೆ. ಕಾಲಕಾಲಕ್ಕೆ ಉತ್ತಮ ವಿದ್ವತ್‌ಪೂರ್ಣ ಗ್ರಂಥಗಳನ್ನು ಪ್ರಕಟಿಸುತ್ತಿದೆ. ನಿರಂತರವಾಗಿ ಸಂಶೋಧನಾತ್ಮಕ ಮತ್ತು ಸಾಂಸ್ಕೃತಿಕ ಕಾರ್ಯಗಳನ್ನು ಪ್ರತಿಷ್ಠಾನ ನಡೆಸಿಕೊಂಡು ಬರುತ್ತಿದೆ. ೨೦೦೪ರಲ್ಲಿ ಪ್ರತಿಷ್ಠಾನ ರಜತಮಹೋತ್ಸವವನ್ನು ಆಚರಿಸಿತು. ಬಿ.ಎಂ.ಶ್ರೀ. ಊರಾದ ಮಂಡ್ಯ ಜಿಲ್ಲೆಯ ಬೆಳ್ಳೂರಿನಲ್ಲೂ ಪ್ರತಿಷ್ಠಾನದ ಶಾಖೆಯಿದೆ. ಅವರ ಮನೆಯಿದ್ದ ಸ್ಥಳದಲ್ಲಿ ನಿರ್ಮಿಸಿರುವ 'ಆಚಾರ್ಯ ಬಿ.ಎಂ.ಶ್ರೀ. ಶತಮಾನ ಭವನ'ದಲ್ಲಿ ಮತ್ತು ಬೆಂಗಳೂರಿನ ಬಿ.ಎಂ.ಶ್ರೀ. ಕಲಾಭವನದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುತ್ತಿರುತ್ತವೆ.

# ಕುಂತಿಯ ಅಂತರಾಳ

ತಾರಾಮೂರ್ತಿ



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ
ಬೆಂಗಳೂರು – ೫೬೦ ೦೧೯

**KUNTHIYA ANTHARAALA** (Critical essay on Mahabharatha) Written by Smt. Taramurthy, Published by B.M.Sri Smaraka Prathistana, M.V.Si Reaserch Center, B.M.Sri. Kalabhavan, N.R. Colony, Bangalore-560019, India.

First print : 2008



Copies : 1000

Pages : xvi + 96

Prices : **Rs. 50-00**

ಬೆಲೆ : ಐವತ್ತು ರೂಪಾಯಿ



ಮುದ್ರಣ :

ಇಳಾ ಮುದ್ರಣ

ಬೆಂಗಳೂರು-೫೬೦ ೦೨೬

## ಅರ್ಪಣೆ

ನನ್ನನ್ನು ರೂಪಿಸಿದ ತಾಯಿ

**ಶ್ರೀಮತಿ ಎಂ.ಆರ್.ಸೀತಮ್ಮ**

ಮತ್ತು

ತಂದೆ

ಶ್ರೀಮಾನ್ **ಎಂ.ಆರ್.ರಾಮಸ್ವಾಮಿಯವರ**

ಚರಣಗಳಿಗೆ ಈ ಕೃತಿ ಅರ್ಪಿತ.

# ಮುನ್ನುಡಿ

'ಕುಂತಿಯ ಅಂತರಾಳ' ಎಂಬ ಹೆಸರಿನ ಈ ಪುಟ್ಟ ಪುಸ್ತಕಕ್ಕೆ ಒಂದು ಇನ್ನೂ ಪುಟ್ಟದಾದ ಮುನ್ನುಡಿ ಬೇಕೆಂದು, ನಾನು ಗೌರವಿಸುವ ಶ್ರೀ ಬೆಳಗೆರೆ ಕೃಷ್ಣ ಶಾಸ್ತ್ರಿಗಳು ಕೋರಿದ್ದಾರೆ. ಈ ಕೋರಿಕೆ ತಮ್ಮ ವಿಶ್ವಾಸಿಗಳಿಗೆ ಅವರು ತೋರುವ ಗೌರವ ಎಂಬುದು ನನಗೆ ಗೊತ್ತು. ಹಾಗಾಗಿ ಈ ಬರಹವನ್ನು ನಾನು ಪ್ರೀತಿಯಿಂದಲೇ ಬರೆದಿದ್ದೇನೆ. ಪ್ರೀತಿಯಿಂದ ಎಂದರೆ ಲೇಖನದ ಸತ್ವವನ್ನು ಅರಿಯದ ಪ್ರೀತಿ ಎಂದು ಅರ್ಥ ಮಾಡಬೇಡಿ; ಈ ಪುಸ್ತಕ ನಿಜವಾಗಿ ಎಲ್ಲರೂ ಓದಿ ಸಂತೋಷ ಪಡಬಹುದಾದ ರಚನೆ.

ಈಚೆಗೆ ಕನ್ನಡದಲ್ಲಿ ಮಹಿಳೆಯರು ಪುಸ್ತಕಗಳನ್ನು ರಚಿಸುವುದು ಹೆಚ್ಚಾಗಿದೆ. ಸಂತೋಷದ ವಿಷಯವೆಂದರೆ, ಬರಹಗಳಲ್ಲಿ ನಿಜವಾದ ಹೊಸ ಆಲೋಚನೆಗಳು ಭಾಷೆಯ ಸೊಗಸು ಕೂಡಿಕೊಂಡಿರುವ ಅನೇಕ ಬರಹಗಾರ್ತಿಯರು ಇರುವುದು. ಸೃಷ್ಟಿಶೀಲ ರಚನೆಯಲ್ಲಿ, ವಿಮರ್ಶೆಯಲ್ಲಿ ಆಳವಾದ ವಿಶ್ಲೇಷಣೆಯಲ್ಲಿ, ಭಾಷೆಯ ಪ್ರಯೋಗದಲ್ಲಿ ಈ ಹೊಸತನ ಕಾಣಬರುತ್ತಿದೆ. ಈ ಪ್ರಯತ್ನಗಳು ಕನ್ನಡಕ್ಕೆ ಅನೇಕ ಒಳ್ಳೆಯ ಪುಸ್ತಕಗಳನ್ನು ತಂದಿದೆ. ನಾನು ಮುನ್ನುಡಿಯೆಂದು ಬರೆಯುತ್ತಿರುವ ಈ ಪುಸ್ತಕವೂ ಕೂಡ ಆ ಬಗೆಯ ಪರಿಶೀಲನೆಗೆ ತನ್ನನ್ನು ಒಡ್ಡಿಕೊಳ್ಳುವ ಸತ್ವವುಳ್ಳದ್ದು.

ವ್ಯಾಸ ರಚಿತ ಮಹಾಭಾರತದಲ್ಲಿ ಓದುಗರ ಮೇಲೆ ಅಧಿಕವಾದ ಪ್ರಭಾವವನ್ನು ಬೀರುವ ಅನೇಕ ಸ್ತ್ರೀ ಪಾತ್ರಗಳಿವೆ. ದ್ರೌಪದಿ ಅಂಥವರಲ್ಲಿ ಪ್ರಥಮಳು. ಗಾಂಧಾರಿ, ಕುಂತಿ, ಮಾದ್ರಿ, ಭಾನುಮತಿ ಮುಂತಾದ ಇತರರು ಆ ಬಳಿಕ ಬರುತ್ತಾರೆ. ಮಾದ್ರಿ ಸತ್ತು ಬದುಕಿದಳು. ಮಿಕ್ಕ ಮೂವರು ಬದುಕಿದ್ದರೂ ಸತ್ತಂತೆ ಕಷ್ಟವನ್ನು ಅನಿಭವಿಸಿದವರು. ಅವರ ದೃಷ್ಟಿಯಿಂದ ಭಾರತದ ಕಥೆಯನ್ನು ಬೇರೆಯಾಗಿಯೇ ಬರೆಯಬೇಕಾಗುತ್ತದೆ. ಹೀಗೆ ಮಾಡಿರುವ ಕೆಲವು ಇತರ ಪುಟ್ಟ ಪುಟ್ಟ ಗ್ರಂಥಗಳಿವೆ. ಶ್ರೀಮತಿ ತಾರಾ ಅವರು ರಚಿಸಿರುವ ಈ ಪುಸ್ತಕ 'ಕುಂತಿಯ ಅಂತರಾಳ' ಆ ಬಗೆಯಲ್ಲಿ ರಚಿತವಾಗಿರುವ, ಗಾಢವಾದ ಒಂದು ಅನುಭವವನ್ನು ನೀಡುವ ಪುಟ್ಟ ಪುಸ್ತಕ.

ಪುಸ್ತಕವೇನೋ ಪುಟ್ಟದೇ! ಆದರೆ ಅದನ್ನು ಓದಿದರೆ ಮಹಾಭಾರತವನ್ನೇ ಮತ್ತೆ ಬೇರೆಯ ದೃಷ್ಟಿಯಿಂದ ಓದಿದ ಅನುಭವವುಂಟಾಗುತ್ತದೆ. "ಕುಂತಿಯ ಮೂಲಕ ಭಾರತದ ಕಥೆಯನ್ನು

ಪುನರಪಿ ನೋಡುವ ಒಂದು ಪ್ರಯತ್ನ ಈ ದೀರ್ಘ ಲೇಖನ–" ಈ ಅರ್ಥ ಬರುವ ಲೇಖಕಿಯ ಮಾತುಗಳಿಂದ ನನ್ನ ಬರಹವನ್ನು ಮೊದಲು ಮಾಡುತ್ತೇನೆ.

ಕೃಷ್ಣನು ಕುಂತಿಗೆ ಸೋದರಳಿಯ, ಕುಂತಿಯ ಆಶೀರ್ವಾದ ಪಡೆದು ಕೃಷ್ಣನು ತನ್ನ ಕಾರ್ಯಗಳಲ್ಲಿ ಮುಂದುವರೆಯುತ್ತಿದ್ದುದು ಸತ್ಯ, ಆದರೆ ಅವನು ಎಂದಿಗೂ ತನ್ನ ಉದ್ದೇಶವೇನೆಂಬುದನ್ನು ಬಿಡಿಬಿಡಿಯಾಗಿ ಯಾರಿಗೂ ವಿವರಿಸಿದವನಲ್ಲ.

ಈ ಪುಸ್ತಕದಲ್ಲಿ ಕೃಷ್ಣನ ಬಗ್ಗೆ ಕುಂತಿಯ ಅಭಿಪ್ರಾಯವೇನು ಎಂಬುದನ್ನು ಲೇಖಕಿ ಹೀಗೆ ತಿಳಿಸಿದ್ದಾರೆ:– "ವಾವೆಯಲ್ಲಿ ಸೋದರಳಿಯ ಅರ್ಜುನನ ವಯಸ್ಸಿನವ. ಆದರೆ ವಿವೇಕ ವಾತ್ಸಲ್ಯ ಕರುಣೆಯ ಕಡಲು, ಎಲ್ಲರಂತಿಲ್ಲ ಇವ. ಹೀಗೇ ಎಂದು ಹೇಳಲಾಗದ ಆಕರ್ಷಣೆ ಅವನಲ್ಲಿ, ಮನಸ್ಸಿನಲ್ಲಿರುವುದನ್ನೆಲ್ಲ ಹೇಳಿಕೊಳ್ಳಬಹುದಾದ ನಂಬಿಕೆಯ ವ್ಯಕ್ತಿ. ಮದುವೆಯಾಗಿ ಬಂದ ದಿನದಿಂದ ಸಾಕುತಂದೆಯ ಅಥವಾ ಹತ್ತಿರದ ಯಾವ ನಂಟೂ ಉಳಿದಿರದವಳನ್ನು ಹುಡುಕಿಬಂದ, ವಿಚಾರಿಸಿಕೊಂಡ. ಕಷ್ಟಕ್ಕಾಗುತ್ತಿರುವ ತವರಿನ ಏಕೈಕ ಕೊಂಡಿ ಅದರೊಂದು– ಅವನು ಯೋಜಿಸುವ ಜಾಡೇ ಬೇರೆ, ಸಮಸ್ಯೆಗಳಿಗೆ ಪರಿಹಾರ ಹುಡುಕುವ ವಿಧಾನವೇ ಬೇರೆ. ಲೋಕರೂಢಿಯಂತಲ್ಲ. ಧರ್ಮವು ಜನಹಿತಕ್ಕಾಗಿಯೇ ಹೊರತು ಜೀವನಕ್ಕೆ ಸಂಕಟ ತರುವುದಕ್ಕಲ್ಲ ಎನ್ನುವ ಎದೆಗಾರಿಕೆ. ಅವನ ಯೋಚನೆ ಯಾವ ದಾರಿ ಹಿಡಿಯುವುದೆಂದು ಯಾರೂ ಊಹಿಸಲಾರರು. ಒಟ್ಟಾರೆ ಎಲ್ಲರಹಿತ ಬಯಸುವ ಪ್ರೀತಿಯ ಹುಡುಗ."

ಕುಂತಿಯ ಜೀವನವೆಲ್ಲ ಇಂಥ ವ್ಯಕ್ತಿಯ ಮಾರ್ಗದರ್ಶನದಲ್ಲಿ ನಡೆಯಿತು. ಕುಂತಿ ಕರ್ಣನನ್ನು ಹೆತ್ತು ಗಂಗೆಯಲ್ಲಿ ತೇಲಿಬಿಟ್ಟದ್ದು ಯಾರಿಗೂ ತಿಳಿಯದ ವಿಷಯ. ಅಂಥದ್ದು ಕೂಡ ಕೃಷ್ಣನಿಗೆ ಗೊತ್ತಲ್ಲ ಎಂದು ಅವಳಿಗೆ ಆಶ್ಚರ್ಯವಾಗುವ ಹಾಗೆ ಅವಳು ಮಾಡಬೇಕಾದ ಕಾರ್ಯವನ್ನು ಅವನು ತಿಳಿಸುತ್ತಾನೆ. ಅಲ್ಲಿಂದ ಹಿಡಿದು ಕುಂತಿಯು ವಾನಪ್ರಸ್ಥಕ್ಕೆ ಧೃತರಾಷ್ಟ್ರ ಗಾಂಧಾರಿಯರೊಡನೆ ಹೊರಡುವ ತನಕ ಕೃಷ್ಣನೇ ಮಾರ್ಗದರ್ಶಿ. ಈ ನಂಬಿಕೆಯಿಂದ ರಚಿತವಾಗಿರುವ 'ಕುಂತಿಯ ಅಂತರಾಳ' ಒಂದು ಹೊಸ ಅನುಭವವನ್ನು ನೀಡುತ್ತದೆ. ಕುಂತಿಗೆ ಬಂದ ಆತಂಕಗಳನ್ನು ಕೃಷ್ಣನು ಹೇಗೆ ಪರಿಹರಿಸಿ ಬಾಳನ್ನು ಸಹ್ಯವಾಗಿ ಮಾಡಿದ ಎಂಬುದು ಈ ರಚನೆಯ ವಿಶ್ಲೇಷಣೆ, ಇದನ್ನು ಸಮರ್ಥವಾಗಿ ನಿರ್ವಹಿಸಿದ್ದಾರೆ ಈ ಪುಸ್ತಕದ ಕರ್ತೃ ಶ್ರೀಮತಿ ತಾರಾಮೂರ್ತಿ.

ರಾಮಾಯಣ ಮಹಾಭಾರತಗಳಲ್ಲಿ ವೀರಾವೇಶದ ಅನೇಕ ಸನ್ನಿವೇಶಗಳಿದ್ದರೂ ಆ ಎರಡೂ ಮಹಾಗ್ರಂಥಗಳ ಮೂಲರಸ ಕರುಣೆ ಎಂಬುದು ಸ್ಪಷ್ಟವಾಗುತ್ತದೆ. ಆಳವಾಗಿ ವ್ಯಾಸಂಗ ಮಾಡಿದರೆ ಈ ಎರಡು ಗ್ರಂಥಗಳ ಸತ್ವ ಉಳಿದಿರುವುದೇ ಈ ಕರುಣರಸದ ಸತ್ವದಿಂದ ಎಂದೆನಿಸುತ್ತದೆ. ಈ ಬಗ್ಗೆ ನಾನು ಸಂಪಾದಿಸಿರುವ 'ಬಾಳಿಗೊಂದು ಬೆಳಕು– ರಾಮಾಯಣದ ದೃಷ್ಟಿ' ಎಂಬ ಗ್ರಂಥದಲ್ಲಿ ದೀರ್ಘವಾಗಿ ವಿವರಿಸಿದ್ದೇನೆ. ಪ್ರಸಿದ್ಧ ಇಂಗ್ಲೀಷ್ ಕವಿಯಾದ ಪಿ.ಬಿ.ಷೆಲ್ಲಿ ಹೇಳಿರುವ ಮಾತುಗಳು ನೆನಪಿಗೆ ಬರುತ್ತವೆ.

*We look before and after*
*And pine for what is not*
*Our sincerert laughter*
*With some pain is fraught*
*Our sweetest songs are those that tell of saddest thoughts.*

ಈ ಪದ್ಯವನ್ನು ಬಿ.ಎಂ.ಶ್ರೀ ಅವರು ಹೀಗೆ ಅನುವಾದಿಸಿದ್ದಾರೆ:

ಹಿಂದು ಮೂದನು ನೋಡಿ ನಮೆವೆವು
ನೆನೆಯುತ್ತಿಲ್ಲದ ಸುಖವನು,
ಕುಂದು ಸೋಕದ ನಮ್ಮ ನಗೆಯೊಳು
ಕೊನೆಗು ನೋವೆನಿಸಿರುವುದು
ನೊಂದ ಗೋಳನು ಹೇಳಿ ಕೊರೆವುವೆ ಇನಿಯ ಕವನಗಳೆಮ್ಮೊಳು.

ಸಂಸ್ಕೃತ ಕಾವ್ಯಗಳ ಬಗ್ಗೆಯೂ ವಿಮರ್ಶಕರು ಈ ಬಗೆಯ ಉತ್ತಿಗಳನ್ನು ರಚಿಸಿದ್ದಾರೆ. ಭಾರತದ ಕಥೆಯ ಸಾರವನ್ನೆಲ್ಲ ಸಂಗ್ರಹವಾಗಿ ನಿರೂಪಿಸಿ ಕೊನೆಗೆ ತನ್ನ ತೀರ್ಮಾನವನ್ನು ತಿಳಿಸಿರುವ ಕ್ಷೇಮೇಂದ್ರನ ವೃತ್ತವನ್ನು ಅರ್ಥ ಮಾಡಿಕೊಂಡರೆ ನನ್ನ ಅಭಿಪ್ರಾಯಕ್ಕೆ ಪುಷ್ಟಿ ದೊರೆಯುತ್ತದೆ. ಆ ವೃತ್ತ ಹೀಗಿದೆ:–

ರತ್ನೋದರ ಚತುಸ್ಸಮುದ್ರರಶನಾಂ ಭುಕ್ತ್ವಾಭುವಂ ಕೌರವೋ
ಭಗ್ನೋರುಃ ಪತಿತಃ ಸನಿಷ್ಪರಿಜನೋ ಜೀವಸೃಷ್ಟಿ ಭಕ್ಷಿತಃ
ಗೋಪೈರ್ವಿಶ್ವಜಯೀ ಜಿತಃ ಸವಿಜಯಃ ಕಕ್ಷ್ಯೈಃಕ್ಷಿಕಾ ವೃಷ್ಣಯಃ
ತಸ್ಮಾತ್ಸರ್ವವಿದು ವಿಚಾರ್ಯ ಶಾಂತ್ಯೈ ಮನೋದೀಯತಾಂ ॥

ಕುಂತಿಯ ಬಾಳನ್ನು ಕುರಿತು ವಿಶ್ಲೇಷಣೆ ಮಾಡಿರುವ ಶ್ರೀಮತಿ ತಾರಾಮೂರ್ತಿಯವರ ಬರವಣಿಗೆಯಲ್ಲಿ ಈ ಅಂಶವಿರುವುದು ಸ್ವವಿದಿತ. ಈ ಪುಸ್ತಕದ ಭಾಷೆಯಲ್ಲಿ ಪ್ರೌಢಿಮೆಯಿದೆ, ಸತ್ವವಿದೆ, ಓದಿಸಿಕೊಂಡು ಹೋಗುವ ಸ್ವಾರಸ್ಯವಿದೆ. ಇದು ಓದುಗರಿಗೆ ಸಂತೋಷವನ್ನು ತಂದು ಅವರನ್ನು ಚಿಂತನೆಗೆ ಹಚ್ಚುತ್ತದೆ ಎಂಬ ನನ್ನ ಅಭಿಪ್ರಾಯವು ಸುಳ್ಳಲ್ಲವೆಂಬುದು ಓದುಗರಿಗೆ ತಿಳಿಯಬರುವುದರಲ್ಲಿ ನನಗೆ ಸಂದೇಹವಿಲ್ಲ.

ಈ ಪುಸ್ತಕಕ್ಕೆ ಹೆಚ್ಚು ಪ್ರಚಾರ ದೊರಕಲಿ ಎಂದು ನಾನು ಹಾರೈಸುತ್ತೇನೆ.

೨೫–೧೦–೦೮. ಜಿ. ವೆಂಕಟಸುಬ್ಬಯ್ಯ

೫೮, ೩೧ನೇ ಕ್ರಾಸು
೭ನೇ ಬ್ಲಾಕು, ಜಯನಗರ
ಬೆಂಗಳೂರು

# ಅಧ್ಯಕ್ಷರ ಮಾತು

ಸಂಶೋಧನೆ ಎಂದರೆ ಹುಡುಕಾಟ. ಕಣ್ಣ ಮುಂದಿಲ್ಲದಿರುವುದರ ಸುಳುಹು ಹಿಡಿದು ಅದನ್ನು ಹೊರತೆಗೆಯುವುದು, ಅದರ ಒಳಗನ್ನು ಬಗೆಯುವುದು, ಬಗೆದದ್ದು ಎಷ್ಟರ ಮಟ್ಟಿಗೆ ಸಮಕಾಲೀನತೆಗೆ ಪ್ರಸ್ತುತವೆಂಬುದರ ಬಗ್ಗೆ ವಿವೇಚಿಸುವುದು ಇವು ಸಂಶೋಧನೆಯ ವಿವಿಧ ಆಯಾಮಗಳು. ಕಾಲದ ಮಹಿಮೆಗೆ ಒಳಗಾಗಿ ಎದ್ದು ಕಾಣುವುದು, ಅಡಗುವುದು, ಹೊಸತೆನಿಸುವುದು, ಪ್ರಾಮುಖ್ಯಕ್ಕೆ ಬರುವುದು ನಡೆಯುತ್ತಲೇ ಇರುತ್ತದೆ. ಹಿಂದೆ ಪ್ರಸ್ತುತವಾದದ್ದು ಹೊಸ ಸಮಕಾಲೀನತೆಗೆ ಅಪ್ರಸ್ತುತವೆನಿಸಬಹುದು. ಅಂತೆಯೇ ಅಪ್ರಸ್ತುತವೆನಿಸಿದ್ದು ಅಥವಾ ನಮ್ಮ ಊಹೆಗೆ ಬಾರದ್ದು ಬಹು ಪ್ರಮುಖವೆನಿಸಬಹುದು. ಹೀಗಾಗಿ ಮೂಲದ್ರವ್ಯ ಒಂದೇ ಆದರೂ ಬದುಕಿನ ಸ್ವರೂಪ ಬದಲಾಗುತ್ತಲೇ ಹೋಗುತ್ತದೆ. ಅದನ್ನು ನಮ್ಮ ಕಣ್ಣ ಕನ್ನಡಿಯಲ್ಲಿ ಹಿಡಿದಿಡುವ ಪ್ರಯತ್ನವೇ ಸಂಶೋಧನೆ.

ಇದು ಸಾಹಿತ್ಯಕ್ಕೂ ಅನ್ವಯಿಸುವ ಮಾತು. ಸಾಹಿತ್ಯದ ಮೂಲಕ ವ್ಯಕ್ತವಾಗುವ ಬದುಕಿನ ಅಸಂಖ್ಯ ಮಗ್ಗುಲುಗಳನ್ನು ಅನಾವರಣಗೊಳಿಸುವ ಪ್ರಯತ್ನದಲ್ಲಿ ಅಧ್ಯಯನಶೀಲವ್ಯಕ್ತಿ ತೊಡಗಿಕೊಳ್ಳುತ್ತಾನೆ. ಸಾಹಿತ್ಯದ ಹೊರರೂಪ ಬದಲಾಗುವುದೂ ಜೀವಂತ ಬದುಕಿನ ಚಲನಶೀಲತೆಗೆ ಅನುಗುಣವಾಗಿ ಅಲ್ಲಿ ಎದ್ದು ತೋರುವ ಪ್ರವೃತ್ತಿಗಳು ವ್ಯತ್ಯಾಸಗೊಳ್ಳುವುದೂ ಸಹಜ. ಆದರೆ ಇವೆಲ್ಲದರ ಹಿಂದಿನ ಅನುಭವದ್ರವ್ಯ ಒಂದೇ. ಅಂದರೆ ಸಾಹಿತ್ಯ ನಿರಂತರ. ಅದರ ಹೊರರೂಪ ಬದಲಾಗುವಂಥದು. ಸಂಶೋಧನೆ ಮಾಡಬಯಸುವವನಿಗೆ ಒಳಗೇನಿದೆ ಎಂಬ ಸಹಜಕುತೂಹಲ, ಅದರ ಆಂತರ್ಯವನ್ನು ವಿಶ್ಲೇಷಿಸುವ ಸೂಕ್ಷ್ಮತೆ ಹಾಗೂ ಬದುಕಿನೊಂದಿಗೆ ಅದು ಪಡೆಯುವ ಸಂಬಂಧ ಇವುಗಳನ್ನು ಅನ್ವೇಷಿಸುವ ಬುದ್ಧಿ ಇವುಗಳು ಆವಶ್ಯಕ.

ಈ ಕಾರಣದಿಂದಲೇ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಸಂಶೋಧನೆಯನ್ನು ತನ್ನ ಮುಖ್ಯ ಚಟುವಟಿಕೆಯನ್ನಾಗಿ ಹೊಂದಿರುವುದು. ಕಂಡುಕೊಂಡ ವಾಸ್ತವದ ಹೊಸ ಮಗ್ಗುಲನ್ನು ಪುಸ್ತಕರೂಪದಲ್ಲಿ ಪ್ರಕಟಿಸುವ, ಅಂಥವುಗಳ ಬಗ್ಗೆ ಚರ್ಚೆ-ಸಂವಾದಗಳನ್ನೇರ್ಪಡಿಸುವ ಕಾರ್ಯವನ್ನು ಪ್ರತಿಷ್ಠಾನವು ಮೊದಲಿನಿಂದ ಮಾಡುತ್ತ ಬಂದಿದೆ. ಯುವಜನತೆಯನ್ನು ಸಂಶೋಧನೆಯ ಕ್ಷೇತ್ರಕ್ಕೆ ಸಿದ್ಧಗೊಳಿಸುವ ಸಲುವಾಗಿ ಹಳಗನ್ನಡ ತರಗತಿಗಳು, ಹಸ್ತಪ್ರತಿ

ಅಧ್ಯಯನದಂತಹ ಕಾರ್ಯಗಳ ಜೊತೆಗೆ, ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆಯನ್ನು ಪಡೆದು ಎಂ.ಫಿಲ್. ಮತ್ತು ಪಿಎಚ್.ಡಿ. ಪದವಿಗಳಿಗೆ ಅಭ್ಯರ್ಥಿಗಳನ್ನು ಸಿದ್ಧಗೊಳಿಸುವ ಮೂಲಕ ಯುವ ಸಂಶೋಧಕರ ಪಡೆಯನ್ನು ಕಟ್ಟುವ ಕಾರ್ಯಕ್ಕೂ ಈಗ ತೊಡಗಿದೆ.

ಪ್ರಸ್ತುತ, 'ಕುಂತಿಯ ಅಂತರಾಳ' ಎಂಬ ಈ ಕೃತಿಯ ಬಗ್ಗೆ. ನೂರಾರು ಸೃಜನಶೀಲ ಪ್ರತಿಭೆಗಳು ಮಹಾಭಾರತವನ್ನು ತಮ್ಮ ಸೃಷ್ಟಿಕಾರ್ಯಕ್ಕೆ ಬಳಸಿಕೊಂಡಿವೆ; ಅಂತೆಯೇ ವಿಚಾರಶೀಲ ಮನಸ್ಸುಗಳು ತಮ್ಮ ಚರ್ಚೆಗಳಿಗೆ ಭೂಮಿಕೆಯಾಗಿಸಿಕೊಂಡಿವೆ. ಈ ಕೃತಿಯ ಲೇಖಕಿಯಾದ ಶ್ರೀಮತಿ ತಾರಾ ಅವರು ಈ ಎರಡೂ ಒಗ್ಗೂಡಿದ ದೃಷ್ಟಿಕೋನದಿಂದಲೂ, ಸ್ತ್ರೀವಾದಿ ನೆಲೆಯಿಂದಲೂ ಇಡೀ ಭಾರತವನ್ನು ಕುಂತಿಯ ಮನೋಭೂಮಿಕೆಯ, ಅದೂ ವಿಶೇಷವಾಗಿ ಕನ್ಯೆಯಾಗಿ ಕರ್ಣನನ್ನು ಹೆತ್ತ, ಹಾಗೂ ಗಂಡನ ಇಷ್ಟದಂತೆ ನಿಯೋಗಕ್ಕೆ ಒಳಗಾಗಿ ಇತರ ಮೂವರನ್ನು ಹೆತ್ತ ತಾಯಾಗಿ ಪಟ್ಟಿರಬಹುದಾದ ಅನುಭಗಳ ಮೂಲಕ, ಕಟ್ಟಿಕೊಡುವ ಹೊಸ ಪ್ರಯತ್ನವನ್ನು ಈ ಕೃತಿಯಲ್ಲಿ ಮಾಡಿದ್ದಾರೆ. ಕೃತಿಯು ಕೇವಲ ಒಂದು ನೂರು ಪುಟಗಳಷ್ಟಿದ್ದರೂ, ಓದುಗರನ್ನು ಆವರಿಸುವಷ್ಟು ಪ್ರಭಾವಶಾಲಿಯಾಗಿದೆ. ಇದರ ಮುದ್ರಣ ವೆಚ್ಚವನ್ನು ತಾವೇ ಭರಿಸುತ್ತೇವೆಂದೂ, ಇದನ್ನು ಪ್ರತಿಷ್ಠಾನವು ಪ್ರಕಟಿಸಿ ಅದರಿಂದ ಬರುವ ಹಣವನ್ನು ಟಿ.ಎಸ್. ವೆಂಕಣ್ಣಯ್ಯ ದತ್ತಿಯ ಮೂಲಧನಕ್ಕೆ ಸೇರಿಸಬೇಕೆಂದೂ ಹಿರಿಯರಾದ ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಯವರು ಸೂಚಿಸಿದರು. ಈ ಸೂಚನೆಯನ್ನು ನಮ್ಮ ಪ್ರಕಟಣ ಸಮಿತಿಯ ಸದಸ್ಯರ ಗಮನಕ್ಕೆ ತಂದು ಅವರ ಒಪ್ಪಿಗೆಯ ನಂತರ ಈಗ ಪ್ರಕಟಣೆಗೆ ಕೈಗೆತ್ತಿಕೊಳ್ಳಲಾಗಿದೆ. ಈ ಔದಾರ್ಯಕ್ಕಾಗಿ ಶ್ರೀ ಕೃಷ್ಣಶಾಸ್ತ್ರಿಗಳಿಗೂ ಶ್ರೀಮತಿ ತಾರಾ ಅವರಿಗೂ ಪ್ರತಿಷ್ಠಾನವು ಆಭಾರಿಯಾಗಿದೆ.

೪-೧೧-೨೦೦೮ ಡಾ॥ ಪಿ.ವಿ. ನಾರಾಯಣ

ಅಧ್ಯಕ್ಷ

# ಅರಿಕೆ

ಉಬ್ಬರದಲ್ಲಿರುವ ಸಮುದ್ರದ ದಡದಲ್ಲಿ ನಿಂತವ ಅದರ ಗಭೀರತೆಯನ್ನು ವರ್ಣಿಸ ಹೊರಟಂತೆ. 'ಮಹಾಭಾರತ'ದ ಬಗೆಗೆ ಬರೆಯುವ ಸಾಹಸ. ಆದರೆ ಸಮುದ್ರವನ್ನು ಕಂಡವ ತನ್ನ ಇತಿಮಿತಿಯಲ್ಲೇ ವರ್ಣಿಸದೆ ಇರಲಾರ. ಮಹಾಭಾರತದ ಬಗೆಗಿನ ಹಲವಾರು ಅನಿಸಿಕೆಗಳನ್ನು ಪದಗಳಲ್ಲಿ ಹಿಡಿದಿಡುವ ಸಾಹಸಕ್ಕೆಳಸಿದೆ. ಈ ಸಾಹಸದಲ್ಲಿ ಮುಂದುವರೆಯಲು ಬೆನ್ನು ತಟ್ಟಿ ಪ್ರೋತ್ಸಾಹಿಸಿದವರು ನನ್ನ ಗುರುಗಳಾದ ಡಾ॥ ಸುಬ್ರಹ್ಮಣ್ಯ (ಕನ್ನಡ ಪ್ರಾಧ್ಯಾಪಕರು) ಬರೆದುದನ್ನು ತಿದ್ದಿ ತೀಡಿ ಅನುಗೊಳಿಸಿದರು. ಶಂಖದಿಂದ ಬಂದ ನೀರು ತೀರ್ಥವಾಗುವಂತೆ ಡಾ॥ ಸುಬ್ರಹ್ಮಣ್ಯರಿಂದ 'ಅಸ್ತು' ಎನಿಸಿಕೊಂಡ ಈ ದೀರ್ಘಲೇಖನದ ಮೊದಲ ಓದುಗ ಪ್ರೊಫೆಸರ್ ಎಚ್.ಬಿ.ಸತ್ಯಮೂರ್ತಿ, ಓದಿದ ನಂತರ ಅತ್ಯುತ್ಸಾಹದಿಂದ ತಾವೇ ಕಂಪ್ಯೂಟರ್‌ನಲ್ಲಿ ಮುದ್ರಿಸಿಕೊಟ್ಟರು. ವರ್ಷಗಳ ಹಿಂದೆ ಈ ಲೇಖನದ ಬಗ್ಗೆ ಹೇಳಿಕೊಂಡಿದ್ದಂತೆ, ಹಿರಿಯರು–ಅನುಭವಿ ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಯವರ ಸಮಕ್ಷಮ ಲೇಖನವನ್ನೋದಿದೆ. ಸಂತೋಷ ಪಟ್ಟರು. ನನ್ನ ಕೋರಿಕೆಯಂತೆ ಲೇಖನವನ್ನು ಕಿರುಹೊತ್ತಿಗೆಯಾಗಿಸುವ ಜೊತೆಗೆ ಪ್ರಕಾಶನದ ಹೊಣೆಯನ್ನೂ ಹೊತ್ತರು. ಅಚ್ಚರಿಯಾಗುವಂತೆ ಅತ್ಯಲ್ಪ ಸಮಯದಲ್ಲಿ ಎರಡೂ ಕಾರ್ಯ ಮುಗಿಸಿಕೊಟ್ಟರು. ಈ ಮೂವರೂ ಕನ್ನಡಾಭಿಮಾನಿಗಳ ಸಮಯೋಚಿತ ಸಹಾಯದಿಂದ ಈ ಲೇಖನ ಸಜ್ಜಾಗಿ ಪುಟ್ಟ ಪುಸ್ತಕ ರೂಪದಲ್ಲಿ ಹೊರಬರುವುದು ಸಾಧ್ಯವಾಯಿತು. ಈ ಮೂವರಿಗೂ ನಾನು ಚಿರಋಣಿ.

ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಗಳು ನನ್ನ ಪರವಾಗಿ ಖ್ಯಾತ ವಿದ್ವಾಂಸರಾದ ಪ್ರೊ. ಜಿ.ವೆಂಕಟಸುಬ್ಬಯ್ಯನವರಲ್ಲಿ ಮಾತನಾಡಿ ಲೇಖನಕ್ಕೊಂದು ಮುನ್ನುಡಿ ಬರೆದುಕೊಡಲು ಕೇಳಿದಾಗ ಒಪ್ಪಿ ಚೊಕ್ಕವಾಗಿ ಮುನ್ನುಡಿ ಬರೆದುಕೊಟ್ಟರು. ಇವರಿಗೆ ನನ್ನ ಅನಂತ ವಂದನೆಗಳು. 'ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ'ದಿಂದ ಪ್ರಕಾಶನ ಸಾಧ್ಯವಾಗಿಸಿದವರು ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಡಾ॥ ನಾ.ಗೀತಾಚಾರ್ಯ. ಇವರಿಗೆ ಮತ್ತು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಿಗೆ ಹಾಗೂ ಪ್ರಕಟನ ಸಮಿತಿಯವರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ಪುಸ್ತಕವನ್ನು ಸುಂದರ ವಿನ್ಯಾಸದಲ್ಲಿ ಶೀಘ್ರದಲ್ಲಿ ಮುದ್ರಿಸಿಕೊಟ್ಟ ಇಳಾ ಮುದ್ರಣದ ಶ್ರೀ ಬಿ. ಗುರುಮೂರ್ತಿ ಅವರಿಗೆ ನನ್ನ ಕೃತಜ್ಞತೆಗಳು.

ಲೇಖನವು ಬರಹಕ್ಕಿಳಿಯುವುದರಿಂದ ಹಿಡಿದು ಬಿಡುಗಡೆ ಯಾಗುವವರೆಗಿನ ಎಲ್ಲ ಹಂತಗಳಲ್ಲೂ ನನ್ನ ಬೆನ್ನಿಗಿದ್ದು ಎಲ್ಲ ರೀತಿಯ ಸಹಾಯ ಕೊಟ್ಟವರು ನನ್ನ ಪತಿ ಶ್ರೀಮಾನ್ ಎಚ್.ಎಸ್.ಮೂರ್ತಿ. ಇವರಿಗೆ ನನ್ನ ಅನಂತ ನಮಸ್ಕಾರಗಳೊಂದಿಗಿನ ಕೃತಜ್ಞತೆಗಳು.

**ತಾರಾಮೂರ್ತಿ**

# ಮೊದಲ ಮಾತು

ವೇದವ್ಯಾಸರು ರಚಿಸಿದ 'ಮಹಾಭಾರತ' ಕಥೆಯ ಹಂದರದಲ್ಲಿ ಒಂದರೊಳಗೊಂದು ನುಸುಳಿ ಹೆಣೆದು ಹಬ್ಬಿ ಹರಡಿಕೊಂಡ ಬಳ್ಳಿಗಳು ಹಲವಾರು. ಅನುಭವದ ಪುಷ್ಪಗಳು ಅರಳಿ, ಜ್ಞಾನಫಲ ನೀಡಿದ ಬಳ್ಳಿಗಳು ಇವು. ಇಂತಹ ಒಂದು ಬಳ್ಳಿಯೇ ಕುಂತಿ. ಹೆಚ್ಚು ಮಾತಿಲ್ಲದೆ ಅಲ್ಲಲ್ಲಿ ಕಾಣಿಸಿಕೊಳ್ಳುತ್ತಾ, ಪರಿವಾರದ ಮೇಲೆ ಸಮಾಜದ ಮೇಲೆ ಪರೋಕ್ಷ ಪ್ರಭಾವ ಬೀರುವ ಸ್ತ್ರೀಶಕ್ತಿಯಾಗಿ-ತಾಯಿಯಾಗಿ ಕುಂತಿಯನ್ನು ಕಂಡರಿಸಿದ್ದಾರೆ ವ್ಯಾಸರು.

ಕುಂತಿಯು ಮಗಳಾಗಿ ತಂಗಿಯಾಗಿ ಪತ್ನಿಯಾಗಿ ಸೊಸೆಯಾಗಿ ಸವತಿಯಾಗಿ ಬಾಳನ್ನು ಅನುಭವಿಸಿದುದಕ್ಕಿಂತಲೂ ತಾಯಿಯಾಗಿ ಅನುಭವಿಸಿದ್ದು ತೀವ್ರತರ ಹಾಗೂ ದೀರ್ಘಕಾಲ. ಹೆತ್ತ ಮೊದಲ ಮಗುವನ್ನು ತ್ಯಜಿಸಿದ ಕನ್ನೆ ತಾಯಿ; ಪತಿಯೇ ನಿಯೋಗಕ್ಕೆ ಸಮರ್ಥಿಸಿ ಮೂರು ಮಕ್ಕಳನ್ನು ಹೆತ್ತ ತಾಯಿ; ಮತ್ತೆರಡು ಮಕ್ಕಳಿಗೆ ಸಾಕುತಾಯಿ; ಕುರುಕುಲದ ರಾಜಪರಿವಾರಕ್ಕೆ ಸೇರಿದವಳಾಗಿ ಅಂದಿನ ರೂಢಿಯಂತೆ ಧಾರ್ತ್ಯರಾಷ್ಟ್ರರಿಗೂ ತಾಯಿ! ಈ ಎಲ್ಲ ಮಕ್ಕಳಿಂದ ಪಟ್ಟ ಪಾಡೇ ಕುಂತಿಯ ಬಾಳು. ಈ ತಾಯಿಯ ಬಾಳಿನುದ್ದಕ್ಕೂ ಚಿಂತೆಯ ಉರಿಯನ್ನಿಡುತ್ತ ಬಂದವರು ಮುಖ್ಯವಾಗಿ ಕರ್ಣ ಮತ್ತು ಧರ್ಮಜ. ಕುಂತಿಯ ಬಾಳಿನ ಘಟನೆಗಳಿಗೆ ಇವರಿಬ್ಬರೇ ನೇರ ಕಾರಣರು! ಕರ್ಣನನ್ನು ದೈಹಿಕವಾಗಿ ದೂರಮಾಡಿದರೂ ಮನಸ್ಸಿನಿಂದ ತೆಗೆಯಲಾರದೆ, ಅವನು ಸತ್ತ ಮೇಲೂ ಅವನ 'ಅಸ್ತಿತ್ವ'ವನ್ನು ಅನುಭವಿಸಿದವಳು. ಧರ್ಮಜನನ್ನು ತಾನೇ ಹೆತ್ತು ಬೆಳೆಸಿದರೂ ಮಾನಸಿಕವಾಗಿ ಹತ್ತಿರ ಮಾಡಿಕೊಳ್ಳಲಾರದೆ ತನ್ನ ಕರ್ತವ್ಯಮಾಡಿ ತೀರಿದೊಡನೆಯೇ ಅವನನ್ನು ತ್ಯಜಿಸಿ ಗಾಂಧಾರಿ ಧೃತರಾಷ್ಟ್ರರೊಡನೆ ಕಾಡಿಗೆ ನಡೆದವಳು. ಬಾಳಿನುದ್ದಕ್ಕೂ ಇವರಿಂದಾಗಿ, ಇವರಿಗಾಗಿ ಮಾನಸಿಕವಾಗಿ ಹೋರಾಟ ನಡೆಸಿದವಳು ಈ ಮಹಾತಾಯಿ. ವೈವಿಧ್ಯಮಯ, ಪ್ರಭಾವಶಾಲೀ ಹಾಗೂ ಸಾಫಲ್ಯದ ತುಂಬು ಜೀವನ ನಡೆಸಿದ ಕುಂತಿಯ ಪಾತ್ರ ಹೃದಯಂಗಮ; ಅಂತೆಯೇ ಅನೇಕ ರೀತಿಯಲ್ಲಿ ಬೋಧಪ್ರದ ಈ ತಾಯಿಯ ಅಂತರಂಗದಲ್ಲಿ ಹುಟ್ಟಿದ ಚಿಂತೆ-ಗೊಂದಲಗಳು; ನಡೆದ ವಿಮರ್ಶೆ-ಚಿಂತನೆಗಳು; ತೆಗೆದುಕೊಂಡ ತೀರ್ಮಾನಗಳು; ಕೈಗೊಂಡ ಕಾರ್ಯಗಳು, ಆದ ಪರಿಣಾಮಗಳು-ಎಲ್ಲವೂ ಮನನೀಯ.

ಎಂದೋ ಎಲ್ಲೋ ನಡೆದ ಇತಿಹಾಸವನ್ನು ಕತೆಗಾರನಿಂದ ಕತೆಯಾಗಿ ಕೇಳುವ ಬದಲಿಗೆ

ಸನಿಹದಿಂದ ಕುಂತಿಯ ಮೂಲಕ ಅನುಭವಿಸುವ ಪ್ರಯತ್ನವೇ ಈ ದೀರ್ಘಲೇಖನ. ಮಹಾಭಾರತ ಕತೆಯ ಅಂಗವೇ ಆದ ಕುಂತಿಯ ಅಂತರಂಗದಿಂದ ಚಿಮ್ಮಿ ಹರಿದ ಭಾವನೆಗಳನ್ನು, ಯೋಚನೆಗಳನ್ನು ಅವಳಿಂದಲೇ ಕೇಳುತ್ತ, ಅನುಭವಿಸುತ್ತ ಸಕಾರಾತ್ಮಕ ಅಂಶಗಳನ್ನು ಹೆಕ್ಕಿಕೊಳ್ಳುವ ಪ್ರಯತ್ನವಿದು.

ಇಲ್ಲಿ ಕುಂತಿಯದು ಕಾಲಾನುಕ್ರಮದಲ್ಲಿ ಹೇಳುವ ಕಥೆಯಲ್ಲ. ಒಬ್ಬರ ಹೇಳಿಕೆ ಅಥವಾ ಕ್ರಿಯೆಗೆ ಪ್ರತಿಕ್ರಿಯೆಯಾಗಿ ಮಾತಿನ ರೂಪದಲ್ಲಿ ಹೊರಹೊಮ್ಮಿದ ನೆನಪುಗಳು–ಕಲ್ಪನೆಗಳು – ಭಾವನೆಗಳು–ವಿಚಾರಗಳು–ಕಡೆಗೆ ನಿರ್ಣಯಗಳು. ಅವಳ ಯೋಚನೆ–ಭಾವನೆಗಳ ಹರಿವು ತೈಲಧಾರೆಯಂತೆ ಅವಿಚ್ಛಿನ್ನವಾದುದಲ್ಲ; ಜಲಧಾರೆಯಂತೆ ಪುಟಿಪುಟಿದು, ಬುಗ್ಗೆಯಾಗಿ ಚಿಮ್ಮಿ ಬರುವಂತಹುದು. ಒಮ್ಮೊಮ್ಮೆ ಒಂದು ಯೋಚನೆಯಿಂದ ಮತ್ತೊಂದಕ್ಕೆ ಜಿಗಿದುಬಿಡುವ ಮಾನವ ಸಹಜ ಮನೋವ್ಯಾಪಾರ.

ಕುಂತಿಯ ಬಾಳಿನ ಪ್ರಮುಖ ತಿರುವುಗಳಲ್ಲಿನ ಐದು ಬಿಡಿ ಸಂಜೆಗಳೇ ಈ ಲೇಖನದ ಐದು ಅಧ್ಯಾಯಗಳು. ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಹಿಂದೆ ನಡೆದ ಘಟನೆಗಳನ್ನು ಅವಲೋಕಿಸುತ್ತ, ತನ್ನ ಮತ್ತಿತರರ ಸ್ವಭಾವವನ್ನು ಮತ್ತೆ ಮತ್ತೆ ಪರೀಕ್ಷಿಸುತ್ತ, ಹಿರಿಯರ ನಡೆನುಡಿಗಳನ್ನು ಮಥಿಸುತ್ತ, ಅದರ ಬೆಳಕಿನಲ್ಲಿ ಮುಂದಿನದನ್ನು ನಿರ್ಧರಿಸುತ್ತ, ಅವಶ್ಯವಿದ್ದಲ್ಲಿ ತನ್ನ ನಿಲುವನ್ನು ಬದಲಿಸಿಕೊಳ್ಳುತ್ತ, ಆತ್ಮಶೋಧನೆ ಮಾಡಿಕೊಳ್ಳುತ್ತ, ಆಧ್ಯಾತ್ಮಿಕವಾಗಿ ಬೆಳೆಯುವ ಸಂಜೆಗಳು– 'ತತ್ವ'ದ ಕಡೆಗೆ ಸಾಗುವ ಸಂಜೆಗಳು.

ಇಲ್ಲಿ ಕಂಡರಿಸಿರುವ ಕುಂತಿಯ ಬಗೆಗೆ ಮೂರು ಅಂಶಗಳು ಗಮನೀಯ. ಮೊದಲಿಗೆ, ಮಹಾಭಾರತ ಇತಿಹಾಸದ ಭಾಗವೇ ಆಗಿರುವುದರಿಂದ ಅನೇಕ ಸಂಗತಿಗಳು ಅವಳಿಗೆ ಗೊತ್ತಿಲ್ಲದಿರುವುದು ಸಹಜ. ಇದರಿಂದಾಗಿ ಅವಳ ಯೋಚನೆ, ಭಾವನೆಗಳ ರೀತಿ ಇಂದು ನಮಗೆ, ಸಂಪೂರ್ಣಕತೆ ತಿಳಿದವರಿಗೆ ಅನೇಕ ವೇಳೆ ಅತಿರೇಕವೆನಿಸಬಹುದು. ಆದರೆ ಅಂದಿನ ಅವಳ ಪ್ರತಿಕ್ರಿಯೆ ಮಾನವ ಸಹಜವಾದುದು. ಉದಾಹರಣೆಗೆ ಕರ್ಣನಿಗೆ ಪರಶುರಾಮರಿತ್ತ ಶಾಪದ ಸಂಗತಿ ಅವಳಿಗೆ ತಿಳಿಯದಿರುವುದು ಸಹಜ. ಹೀಗಾಗಿ ಕರ್ಣಾರ್ಜುನ ಕಾಳಗದ ಬಗ್ಗೆ ಅತೀವ ಆತಂಕ ಸಹಜ.

ಎರಡನೆಯದಾಗಿ, ಅಂದಿನ ಜನರು 'ವಿಧಿ'ಯನ್ನು ಮಾನ್ಯಮಾಡುತ್ತಿದ್ದ ರೀತಿ. ಇಂದು ನಮ್ಮಲ್ಲಿರುವ 'ದೇವರು' ಕಲ್ಪನೆಗೆ ಹತ್ತಿರ ಹತ್ತಿರವಾಗಿ ತಮ್ಮ 'ವಿಧಿ'ಯನ್ನು ಭಾವಿಸುತ್ತಿದ್ದುದು. ತಮ್ಮ ಕರ್ಮಗಳನುಸಾರ ಫಲವನ್ನು ಸ್ವೀಕರಿಸಿ ಅನುಭವಿಸುವ ಕರ್ಮವಾದಿಗಳಾಗಿದ್ದುದು. ವಿಧಿ ನಿಯಂತ್ರಣಕ್ಕೆ ತಲೆಬಾಗುತ್ತಿದ್ದುದು. ಇಂದಿನ 'ಭಕ್ತಿ' ಭಾವ ಏನಿದೆಯೋ ಅದಕ್ಕಿಂತ ಭಿನ್ನವಾದ, ಕಠಿಣವೆನಿಸುವ 'ಪ್ರಾರಬ್ಧ'ಕ್ಕೆ ಅದರ ಅಂತಿಮತೆಗೆ ಮಣಿಯುತ್ತಿದ್ದುದು. ಸಾಮಾಜಿಕ ರೂಢಿಯಲ್ಲಿದ್ದ, ಪರಿವಾರದ ಸದಸ್ಯರಲ್ಲಿನ ನಡತೆಯಲ್ಲಿ, ನೀತಿ ನಿಯಮಗಳ ಕಟ್ಟಾಚರಣೆ, ಸಂಪ್ರದಾಯದ ಅನುಸರಣೆಗೆ ಮಹತ್ವ ಕೊಡುತ್ತಿದ್ದುದು. ವೈದಿಕ ವಿಧಿ ವಿಧಾನಗಳಿಗೆ, ನಿತ್ಯ ಕರ್ಮಾನುಷ್ಠಾನಕ್ಕೆ, ಆಯಾ ವರ್ಣಗಳನ್ವಯ ಷೋಡಶ ಸಂಸ್ಕಾರಗಳಿಗೆ ಆದ್ಯತೆ ಕೊಡುತ್ತಿದ್ದುದು.

ಮೂರನೆಯದಾಗಿ, ವಾಸುದೇವನ ಸೋದರತ್ತೆಯಾಗಿ ಹಿರಿಯಳೆನಿಸಿ ಅವನನ್ನು ಆಶೀರ್ವದಿಸುತ್ತಿದ್ದ ಕುಂತಿಯಲ್ಲಿ ವಾಸುದೇವನ ಬಗೆಗೆ ವಿಶೇಷ ಪ್ರೀತಿ ವಾತ್ಸಲ್ಯದ ಜೊತೆಗೆ ಅಸಾಮಾನ್ಯ ವ್ಯಕ್ತಿಯೆಂದು, ಸಮಾಜದಲ್ಲಿ ಗಣ್ಯವ್ಯಕ್ತಿಯೆಂದು ಅತಿ ಹೆಮ್ಮೆಯಿದ್ದಿರಬಹುದೇ ಹೊರತು ಅವನನ್ನು ದೇವರೆಂದು, ವಿಷ್ಣುವಿನ ಅವತಾರವೆಂದು ಪೂಜಿಸುವ ಮನೋಭಾವವಿರಲಿಲ್ಲ. ವಿದುರ ವ್ಯಾಸರಿಂದಾಗಿ ಜೀವನದ ಕಡೆಗಾಲಕ್ಕೆ ಅವನಲ್ಲಿಯ 'ಸಿದ್ಧ' ದೈವೀಶಕಿಯನ್ನು ಗುರುತಿಸಿದರೂ ಅದೇ ದೈವೀಶಕ್ತಿ ತನ್ನಲ್ಲೂ-ಎಲ್ಲರಲ್ಲೂ 'ಸಾಧ್ಯ' ರೂಪದಲ್ಲಿ ಇರಬಹುದೆಂಬ ವಿಶ್ವಾಸ ಪಡೆದ ಯೋಗಿನಿ ಕುಂತಿ. ಈ ವಿಶ್ವಾಸವೇ ಅವಳ ಪಾತ್ರದಲ್ಲಿಯ ಹಿರಿಮೆ. 'ಪ್ರಾರಬ್ಧ'ದಲ್ಲಿನ ನಿರ್ಧಾರಕ್ಕೆ ತಲೆಬಾಗಿದರೂ ಆ ಪ್ರಾರಬ್ಧವು ತನ್ನದೇ ಹಿಂದಿನ ಕರ್ಮಗಳಿಂದಾದುದು; ಈಗಿನ ನಿರ್ಧಾರ ಕರ್ಮಗಳಾನುಸಾರ ಮುಂದಿನ 'ಪ್ರಾರಬ್ಧ'ವಾಗುವ ವಿಶ್ವಾಸವಿದ್ದಿತಾಗಿ ಅದೃಷ್ಟವಾದಿಯಾದರೂ ಮನುಷ್ಯಪ್ರಯತ್ನಕ್ಕೆ ಬೆಲೆ ಕೊಡುತ್ತಿದ್ದಳು. ಮಾನವನ ಸಾಧ್ಯತೆಗಳನ್ನು ಅರಿತುಕೊಂಡ ಮಾನವನಲ್ಲಿಯ ದೈವೀಕತೆಯನ್ನು ಅನುಭವಿಸಿದ 'ಮಾನವತಾವಾದಿ'ಯಾಗಿ ಮಿಂಚಿದ ಕುಂತಿ ಬಹು ಹತ್ತಿರದ ಸೋದರತ್ತೆಯಾಗಿ-ತಾಯಿಯಾಗಿ ನಮ್ಮ ಹೃದಯದೊಳಗಿಳಿದು ನಿಲ್ಲುವ ಬಂಧುವಾಗುವಳು.



# ಅಧ್ಯಾಯ ೧

"ನೀನಿನ್ನೂ ಕರ್ಣನನ್ನು ಹೆತ್ತೇ ಇಲ್ಲವಲ್ಲ,"

ವಾಸದೇವನ ಮಾತಿಗೆ ಕುಸಿದು ಕುಳಿತದ್ದೇ,; ಅವನು ಸನಿಹ ಓಡಿ ಬಂದು ಬೆನ್ನನಾತುಕೊಂಡ. ಸಿಡಲೊಂದು ಬಡಿದು ಬೆಳ್ಳಂಬೆಳಕಾಗಿ ಮಿದುಳಿನಲ್ಲಿ ಹಾದು ಕಣ್ಣಿಗೆ ಕತ್ತಲೆ ಕವಿದಿತ್ತು.

"ಅತ್ತೇ...ಅತ್ತೇ"

ಜಗಲಿಯಾಚೆ ಆಳೆತ್ತರದ ಬೆಂಕಿಜ್ವಾಲೆಯಿಂದ ಸಿಡಿದು ಹಾರುತ್ತಿದ್ದ ಕಿಡಿಗಳು. ಬಚ್ಚಿಟ್ಟುಕೊಂಡಿದ್ದೆಲ್ಲವೂ ಸಿಡಿದು ಹೊರಹಾರಿದಂತೆ.

"ಅತ್ತೆ..ಅತ್ತೆ... ಎಚ್ಚರಾಗು," ಕೈ ಹಿಡಿದು ಒಳಕೋಣೆಗೆ ಕರೆತಂದು ಕೂರಿಸಿದ. ನಲವತ್ತೈದು ವರ್ಷಕ್ಕೂ ಮೀರಿ ಹೊಟ್ಟೆಯಲ್ಲಿಟ್ಟುಕೊಂಡಿದ್ದ ಕರ್ಣ ಜನನದ ಗುಟ್ಟು ವಾಸುದೇವನಿಗೆಂತು ತಿಳಿಯಿತು?

"ಕರ್ಮದ ಫಲವನ್ನು ಅನುಭವಿಸಲೇಬೇಕಲ್ಲ. ಕರ್ಣಜನನವಷ್ಟೇ ಅಲ್ಲದೆ ಕರ್ಣತ್ಯಜನವೂ ಗುಟ್ಟಾಗುಳಿದು ನಿನ್ನನ್ನು ಕಾಡುತ್ತಿದೆಯಲ್ಲವೇ? ಶರೀರದ ಜನ್ಮವಾದರೆ ಸಾಲದು. ಸಮಾಜದಲ್ಲಿಯೂ ಆ 'ವ್ಯಕ್ತಿ'ಯ ಜನನವಾಗಬೇಕು. ಅವನಿಗೆ ಕ್ಷತ್ರಿಯ ಸಂಸ್ಕಾರಗಳಾಗದೆ ಆಗಿರುವ ನಷ್ಟಕ್ಕೆ ಹೊಣೆ ಯಾರು? ಈಗಾಗಿರುವ ಹಾನಿಯೇನು ಗೊತ್ತೇ? ಮಗು ದೀರ್ಘಕಾಲ ಹೊಟ್ಟೆಯಲ್ಲೇ ಉಳಿದರೆ ಸತ್ತು, ವಿಷ ರಕ್ತಕ್ಕೆಲ್ಲ ಹರಡಿ ತಾಯಿಯೂ ಸಾಯುವಂತೆ, ನೀನಿನ್ನೂ ಹೆರದ ಮಗು ತಾನಿರುವ ಸಮಾಜಕ್ಕೆ ವಿಷವಾಗಿಲ್ಲವೇ ಯೋಚಿಸು. ಕರ್ಣನ ಬಲವನ್ನು ನಂಬಿಕೊಂಡಲ್ಲವೇ ದುರ್ಯೋಧನಾದಿಗಳು ಯುದ್ಧಕ್ಕೆ ಸೆಟೆದು ನಿಂತಿರುವುದು. ಯುದ್ಧದ ಮಾತು ಹಾಗಿರಲಿ. ಮೊದಲು ನೀನು ಕರ್ಣನನ್ನು ಒಪ್ಪಿಕೊಂಡು ಅವನಿಗೆ 'ಜನ್ಮ' ಕೊಟ್ಟು ಹಗುರಾಗು. ಒಡಲಿನ ನೋವು ಶಮನವಾಗಲಿ."

ಸಂಜೆಯೆಲ್ಲ ಮಾತಿನ ನಯದಲ್ಲೇ ಕತ್ತರಿಯಾಡಿಸಿ ಕರ್ಣನನ್ನು ನನ್ನಿಂದ ಹೊರಗೆಳೆದು ನೋವಿನಿಂದ ಬಿಡುಗಡೆ ನೀಡಿದ ವೈದ್ಯ ವಾಸುದೇವನ ಆದೇಶ–ಬೆಳಗ್ಗೆಯೇ ಕರ್ಣನಲ್ಲಿಗೆ

ಹೋಗಿ ನಾನವನ ತಾಯಿಯೆಂದು ಒಪ್ಪಿಕೊಂಡು ಯುದ್ಧ ನಿಲ್ಲಿಸುವಂತೆ ಬೇಡಿಕೊಳ್ಳ ಬೇಕಂತೆ.

* * *

ತಿಂಗಳ ಮೇಲಾಯಿತು–ಭರದಿಂದ ಯುದ್ಧದ ತಯಾರಿಗೆ ಮೊದಲಿಟ್ಟುದರ ಕಾವು ಎಲ್ಲೆಲ್ಲೂ–ವಿದುರನ ಕೇರಿಯಲ್ಲೇ ಹತ್ತು ಹನ್ನೆರಡು ಹೊಂಡಗಳಲ್ಲಿ ಹಗಲಿರುಳು ಉರಿಯುವ ಕಿಚ್ಚಿನ ಜ್ವಾಲೆಗಳ ವರ್ತುಲದಲ್ಲಿ ರಥದ ಗಾಲಿಗಳಿಗೆ ಪಟ್ಟಿ ಹೊಡೆಯುವ ಕೆಲಸದ ಖಣ್ ಖಣ್ ಸದ್ದು. ಕಣ್ಣಿಗೆ ರಾಚುವ ಉರಿಯ ಕೆನ್ನಾಲಗೆ! ಮನಶ್ಶಾಂತಿಗಾಗಿ ಹೊಳೆದಡಕ್ಕೆ ಬಂದರೆ ಒಂದೆರಡು ನಿಮಿಷದ ಹಾಯಿಯಷ್ಟೇ. ನೀರಿನ ಜುಳುಜುಳು ಕಿವಿಗೆ ಬಿದ್ದ ಕೂಡಲೇ ಹೊಳೆಯ ಹರಿವಿನಲ್ಲಿ ಉಯ್ಯಾಲೆಯಾಡುತ್ತ ಸಾಗಿದ ಬುಟ್ಟಿ, ಅದರಲ್ಲಿ ಕೈಕಾಲು ಬಡಿಯುತ್ತಿರುವ ಹಸುಗೂಸಿನ ಅಳು. ತೇಲಿಬಿಟ್ಟ ಬುಟ್ಟಿಯನ್ನು ನೂಕಿದಾಗಿನ ಸಂಕಟದ ಉರಿಗಿಚ್ಚು ಒಡಲಲ್ಲಿ. ಅಂದು ಹೊಟ್ಟೆಯಲ್ಲಿ ಇಟ್ಟದ್ದು ಭತ್ತದ ಹೊಟ್ಟಿನ ಸುಡುಬೆಂಕಿಯಂತೆ ಆರಲೂ ಇಲ್ಲ, ಧಗ್ಗನೆ ಹೊತ್ತಿ ಉರಿದು ಮುಗಿಯಲೂ ಇಲ್ಲ. ಹೊಗೆಯಾಡುತ್ತ ಮತ್ತೆ ಮತ್ತೆ ಸುಟ್ಟು ಬೆಂದ ಜೀವಕ್ಕೆ ತಂಪಾಗಿ ಬಂದನೇ ವಾಸುದೇವ!

ವಾವೆಯಲ್ಲಿ ಸೋದರಳಿಯ. ಅರ್ಜುನನ ವಯಸ್ಸಿನವ. ಆದರೆ ವಿವೇಕ, ವಾತ್ಸಲ್ಯ, ಕರುಣೆಯ ಕಡಲು. ಎಲ್ಲರಂತಲ್ಲ ಇವ. ಹೀಗೇ ಎಂದು ಹೇಳಲಾಗದ ಆಕರ್ಷಣೆ ಅವನಲ್ಲಿ. ಮನಸ್ಸಿನಲ್ಲಿರುವುದನ್ನೆಲ್ಲ ಹೇಳಿಕೊಳ್ಳಬಹುದಾದ ನಂಬಿಕೆಯ ವ್ಯಕ್ತಿ. ಮದುವೆಯಾಗಿ ಬಂದ ದಿನದಿಂದ ಸಾಕುತಂದೆಯ ಅಥವಾ ಹೆತ್ತವರ ಯಾವ ನಂಟೂ ಉಳಿದಿರದವಳನ್ನು ಹುಡುಕಿಬಂದ. ವಿಚಾರಿಸಿಕೊಂಡ. ಕಷ್ಟಕ್ಕಾಗುತ್ತಿರುವ ತವರಿನ ಏಕೈಕ ಕೊಂಡಿ. ಅದರೊಂದು –ಅವನು ಯೋಚಿಸುವ ಜಾಡೇ ಬೇರೆ. ಸಮಸ್ಯೆಗಳಿಗೆ ಪರಿಹಾರ ಹುಡುಕುವ ವಿಧಾನವೇ ಬೇರೆ. ಲೋಕ ರೂಢಿಯಂತಲ್ಲ. ಧರ್ಮವು ಜನಹಿತಕ್ಕಾಗಿಯೇ ಹೊರತು ಜೀವನಕ್ಕೆ ಸಂಕಟ ತರುವುದಕ್ಕಲ್ಲ ಎನ್ನುವ ಎದೆಗಾರಿಕೆ. ಅವನ ಯೋಚನೆ ದಾರಿ ಹಿಡಿಯುವುದೆಂದು ಯಾರು ಊಹಿಸಲಾರರು. ಒಟ್ಟಾರೆ ಎಲ್ಲರ ಹಿತ ಬಯಸುವ ಪ್ರೀತಿಯ ಹುಡುಗ.

ಇವತ್ತು ಬೆಳಗಿನ ಸಂಧಿಕಾರ್ಯ ವಿಫಲವಾಗಿ ರಾಜಸಭೆಯಿಂದ ಖಿನ್ನವಾಗಿ ಬಂದವನೇ ನನ್ನೆದುರು ಕುಳಿತ. ವಿದುರನಿನ್ನೂ ಬಂದಿರಲಿಲ್ಲ. "ಅತ್ತೇ ನಾನು ದೂತನಾಗಿ ಮಾಡಿದ ಪ್ರಯತ್ನ ವಿಫಲವಾಗಿದೆ. ಈಗಾಗಲೇ ದುರ್ಯೋಧನ ಸಾಕಷ್ಟು ರಾಜ–ಸಾಮಂತರ ವಿಶ್ವಾಸ ಗಳಿಸಿ ಅಪಾರ ಸೇನೆ ಕೂಡಿಸಿದ್ದಾನೆ. ಯುದ್ಧ ತಯಾರಿ ಹೀಗೇ ಮುಂದುವರೆದರೆ ಅಪಾರ ನಷ್ಟ. ಜನಹಾನಿ ಖಚಿತ. ಈಗ ನನಗೆ ತೋರುತ್ತಿರುವ ಪರಿಹಾರ ನೀನೊಬ್ಬಳೇ ಕೊಡಬಲ್ಲವಳು.." ಇಷ್ಟೆಲ್ಲ ಮುಂದುವರಿದು ಹೋಗಿರುವ ಯುದ್ಧದ ತಯಾರಿ...... ಛಲಗಾರ ದುರ್ಯೋಧನ ಹಮ್ಮಿಕೊಂಡ ಯುದ್ಧವನ್ನು ನಿಲ್ಲಿಸುವ ಸಾಧ್ಯತೆ? ಅದೂ ನನ್ನಿಂದ? ಹೇಗೆ? ಇನ್ನೂ ಏನೇನು ಹೇಳಲಿದ್ದನೋ. ನನ್ನ ಮುಖದ ಮೇಲಿನ ಸಂಶಯ, ಅಸಹಾಯಕತೆ, ಭಯ ನೋಡಿ ತಲೆ ಬಗ್ಗಿಸಿದ. ಕೈ ಬೆರಳುಗಳು ಚಾಪೆಯ ಮೇಲೆ ಸರಿದಾಡಲು ತೊಡಗಿದವು.

ತಲೆಬಾಗಿಲಿನಿಂದ ವಿದುರ–ಒಳಗಿನಿಂದ ಊಟಕ್ಕೆ ಕರೆಯುತ್ತ ವಿದುರನ ಪತ್ನಿ ಪಾರ್ಶವಿ ಇಬ್ಬರೂ ಹಜಾರಕ್ಕೆ ಬಂದರು. ತಕ್ಷಣವೇ ವಾಸುದೇವ ಮುಖಕ್ಕೆ ನಗೆ ತಂದುಕೊಂಡು ಎದ್ದು ಊಟದ ಮನೆಗೆ ನಡೆದ. ನಾನೂ. ಊಟವಾಗಿ ಕೈ ತೊಳೆಯಲು ಅಂಗಳಕ್ಕಿಳಿದ ವಾಸುದೇವನ ಹಿಂದೆಯೇ ನಾನೂ ಹೋದೆ.

ಕೈ ತೊಳೆದುಕೊಳ್ಳಲು ಬಗ್ಗಿದ್ದವಳ ಹಿಂದೆ ನಿಂತು ಅವನಾಡಿದ ಗುಟ್ಟಿನ ಮಾತು ಏಕಾಏಕಿ ಕೇಳಿ ತತ್ತರಿಸಿ ಕುಸಿದೆ. ಮುಖಕ್ಕೆ ನೀರು ಹನಿಸಿ ಎಚ್ಚರವಾಗಿಸಿ ಕೈಹಿಡಿದು ಒಳಗೆ ಕರೆತಂದವನೇ ಮತ್ತೆ ಗೂಢ ಮಾತಿನ ವರಸೆ ತೆಗೆದ. ಗಂಟೆಯ ಕಾಲ ಚರ್ಚೆ ಮಾಡಿದ. ಅವನ ಮಾತಿನಲ್ಲಿದ್ದ ನಿರ್ಧಾರ ನನಗೂ ಬಂದಂತೆ–ಹೇಳಿದ "ನಾನು ಈಗಲೇ ಪಾಂಡವರಲ್ಲಿಗೆ ಮರಳಬೇಕು. ಇನ್ನೊಂದು ಗಳಿಗೆಯಲ್ಲಿ ಊರ ಹೆಬ್ಬಾಗಿಲವರೆಗೆ ಬಿಡಲು ಕರ್ಣನೇ ಇಲ್ಲಿಗೆ ಬರುತ್ತಾನೆ. ಹೆಚ್ಚು ಸಮಯವಿಲ್ಲ. ನೆನ್ನೆ ಎಲ್ಲ ವಿವರಿಸಿದ್ದು, ಈಗ ಹೇಳಿದ್ದು ನೆನಪಿದೆ ತಾನೆ. ಈಗ ಗಮನವಿಟ್ಟು ಕೇಳು. ಈಗಿರುವ ಸ್ಥಿತಿಯಲ್ಲಿ ಮಹಾಯುದ್ಧ ಖಚಿತ. ಅಪಾರ ಸಂಖ್ಯೆಯಲ್ಲಿ ನರಹತ್ಯೆ ನಡೆದು ರಕ್ತದ ಹೊಳೆ–ನಮಗೆ ಬೇಕಾಗಿರುವುದೇನು? ಇದು ದೊಡ್ಡ ಯುದ್ಧವಾಗದೆ ಕೇವಲ ದಾಯಾದಿಗಳ ಜಗಳವಾಗಿ ಧಾತ್ರರಾಷ್ಟ್ರರು ಕೆಳಗಿಳಿದರಾಯಿತು. ಕೆಲಸ ಆದಂತೆ. ದುರ್ಯೋಧನನ ಕಾಲ ಕೆಳಗಿಂದ ಅವನು ನೆಚ್ಚಿರುವ ಕರ್ಣನೆಂಬ ನೆಲವನ್ನು ಕಸಿದುಬಿಡಬೇಕು. ಕರ್ಣನಿಲ್ಲದ ದುರ್ಯೋಧನನ ಬೆಂಬಲಿಗರನ್ನು ಯುದ್ಧದಲ್ಲಿ ಭಾಗವಹಿಸದಂತೆ ಮನವೊಲಿಸುವುದು ಕಷ್ಟವಲ್ಲ. ನೀನು ಮನಸ್ಸು ಮಾಡಿದರೆ ಮಾತ್ರ ಬೇಕಿಲ್ಲದ ನರಹತ್ಯೆ ತಡೆದು ಧರ್ಮಜನಿಗೆ ಪಟ್ಟಕಟ್ಟಬಹುದು. ಸಂದೇಹವಿದ್ದರೆ ವಿದುರನನ್ನು ಕೇಳು. ತಿಳಿಯ ಹೇಳುತ್ತಾನೆ. ತಾಯೀ ಕೃಪೆ ಮಾಡು. ಕರ್ಣನ ಜನನಿಯಾಗಿ ಮುಂದೆ ಬಂದು ನೀನೂ ಬೆಳೆ. ಆರ್ಯಾವರ್ತವನ್ನೂ ಧರ್ಮಕ್ಷೇತ್ರವಾಗಿ ಬೆಳೆಸು. ಪೃಥಾ–ಪೃಥಿವಿ ಒಂದಾಗಿ ನಿಲ್ಲಿ. ನಿನ್ನ ಕಾಲಿಗೆ ಬಿದ್ದೆ. ಆಗೋ! ನಿನ್ನ ಮಗ. ನಾನಿನ್ನು ಹೊರಡಲು ಅನುಮತಿ ಕೊಡು".

"ಧರ್ಮಜನಿಗೆಂದು ನಾನು ಹೇಳಿದುದೆಲ್ಲ ಹಾಗೆಯೇ ಹೇಳು. ಎಲ್ಲರ ಎದುರಿಗೇ ಹೇಳಬೇಕು–ತಿಳಿಯಿತೇ?"

"ಅಗತ್ಯ ಚಾಚೂ ತಪ್ಪದೆ ಹೇಳುತ್ತೇನೆ. ಮಿಕ್ಕ ನಾಲ್ವರು ಮತ್ತು ದ್ರೌಪದಿಯೆದುರಿನಲ್ಲೇ! ನಿಶ್ಚಿಂತೆಯಾಗಿರು. ನಮ್ಮ ಮರುಭೇಟಿ ಯುದ್ಧದಲ್ಲಿ ವಿಜಯಿಗಳಾಗಿ ಪಾಂಡವರೊಂದಿಗೆ ಹಸ್ತಿನಾವತಿಯ ಅರಮನೆಯಲ್ಲಾಗುವಂತೆ ಹರಸು. ಬರಲೇ?"

ಮುಗಿಲೆತ್ತರಕ್ಕೆ ಅಡರುತ್ತಿದ್ದ ಬೆಂಕಿಹೊಂಡಗಳ ಹೊಗೆ ಸಂಜೆಗೆಂಪಿನ ಧೂಳಿನಲ್ಲಿ ಅವರ ರಥ ಕಾಣದಾಗಿತ್ತು. ಈಗ ನನ್ನಲ್ಲಿರುವುದು ಅವನಾಡಿದ ಸಾಂತ್ವದ ನುಡಿಗಳು, ಹೇಳಿದ ಸತ್ಯಸಂಗತಿಗಳು, ಯೋಚಿಸಿ ನೋಡೆಂದು ಕೊಟ್ಟ ವಿಚಾರಗಳು, ನನ್ನಲ್ಲೇಳುತ್ತಿರುವ ಪ್ರಶ್ನೆಗಳಿಗೆ ಉತ್ತರಕಾಣಲು ಕೊಟ್ಟ ಹೊಸ ದೃಷ್ಟಿ–ಇವೇ ನನಗೀಗ ಚಿಂತೆಯ ಕಾತರದ ದಿನಗಳನ್ನು ಕಳೆಯಲು ಇರುವ ಆಧಾರ. ಎಲ್ಲಕ್ಕಿಂತ ಹೆಚ್ಚಾಗಿ ಕರ್ಣನನ್ನು ಕಂಡು ಮಾತನಾಡಲು

ನೀಡಿರುವ ಆದೇಶ. ಅಂಗಳದೆದುರಿನ ಕಿಚ್ಚಿನ ಹತ್ತಿರವೇ ನನ್ನ ಅಂತರತಮ ರಹಸ್ಯಕ್ಕೇ ಕೈಯಿಟ್ಟು ಹೊರಗೆಳೆದು ಬಿಟ್ಟ ವಾಸುದೇವ. ನನ್ನ ತಾಯ್ತನದ ಬಗೆಗಿನ ಹಮ್ಮು ಮುರಿದೊಗೆದ ಅವನೆದುರು ಇನ್ನಾವ ಮುಚ್ಚೂ ಇಲ್ಲದೆ ನಿಂತ ದಿಗಂಬರ ಕ್ಷಣ–ಆ ಉರಿಯಲ್ಲೇ ನಾನೂ ಹೊರಟುಹೋದರೆ......ನಾಳೆ ಕರ್ಣನಲ್ಲಿಗೆ ಹೋಗುವ ಬದಲಿಗೆ ನಾನೇ ಇಲ್ಲವಾಗಿ–ಹುಚ್ಚು, ಹುಚ್ಚು....ಹೇಡಿತನ ಏಕೆ? –ಆ ಬೆಂಕಿ, ಈ ಹೊಳೆನೀರು, ಹದಿಮೂರು ವರ್ಷ ಕೂತ ಈ ನೆಲ, ಆ ಆಕಾಶ, ಈ ಪೃಥೆ! ಹೊರಳಿ ಹೊರಳಿ ಕಲಸಿಕೊಂಡ ವಿಚಿತ್ರ ಒಂಟಿತನ.

ಬದುಕಿನ ಹಲವಾರು ವರ್ಷಗಳು ಹೊಳೆಗೆ ಹತ್ತಿರವಾಗಿ ಕಳೆದಂತೆ ಅನೇಕ ಮಹತ್ವದ ಘಟನೆಗಳು ಕಿಚ್ಚಿಗೆ ತಳುಕು ಹಾಕಿಕೊಂಡಿವೆಯಲ್ಲ! ಹೊಳೆನೀರು ಜೀವನ ಕೊಟ್ಟರೆ ಕಿಚ್ಚಿನಂಚಿನ ಘಟನೆಗಳು ನಾನು ನೆಚ್ಚಿದ್ದ ಆಧಾರಗಳನ್ನೇ ಕಸಿದುಕೊಂಡ ಬಹು ಸಂಕಟದ ಕ್ಷಣಗಳು. ಅಂದೂ ಸಂಜೆ ಹೋಳಿಕಾದಹನದಂದು ಎತ್ತರೆತ್ತರಕ್ಕೆ ನಾಲಗೆ ಚಾಚುತ್ತಿದ್ದ ಕಿಚ್ಚಿನ ಸುತ್ತ ನಾವೆಲ್ಲ ಮಕ್ಕಳು ಅರಳು ಎರಚುತ್ತ ಏರುದನಿಯಲ್ಲಿ ಹಾಡುತ್ತ ಸುತ್ತಿ ಬರುತ್ತಿದ್ದಾಗ–ಅವಸರದಲ್ಲಿ ಬಂದ ಅವ್ವ ಕೈಹಿಡಿದೆಳೆದು ಹೊರತರುತ್ತಾ – "ನೀನಿನ್ನು ಹೀಗೆಲ್ಲಾ ಹಾರಿಕುಣಿಯೋದು ನಿಲ್ಲಿಸಬೇಕು....ನೀನಿನ್ನು ಕುಂತೀರಾಜರ 'ದತ್ತು' ಮಗಳು......ಅಲ್ಲಿಗೇ ಹೋಗಿ ಬಿಡಬೇಕು. ...ನಾವಾರೂ ನಿನ್ನ ಜೊತೆ ಅಲ್ಲಿಗೆ ಬರಲಾರೆವು..." ಏನೇನೋ ಹೇಳುತ್ತಾ ನಡೆದಿದ್ದಳು. 'ದತ್ತು' ಪದದ ಅರ್ಥ ಪೂರ್ಣ ಗೊತ್ತಾಗದೇ ಹೋದರೂ ಆ ಕ್ಷಣಕ್ಕಾದ ನೋವು–ನನ್ನ ಮುದ್ದಿನ ಕರುವನ್ನು ಪುರೋಹಿತರು "ದಾನ'ವಾಗಿ ಪಡೆದು ಕೊಂಡೊಯ್ದಾಗಿನ ಸಂಕಟ ಮತ್ತೆ ಹೊಟ್ಟೆಯಲ್ಲೆದ್ದಿತ್ತು. ಏನೋ ಶಂಕೆ ಹೊಗೆಯಾಡಿತ್ತು. ಇಂದಿಗೂ ಜ್ವಾಲೆ ಕಂಡಾಗಲೆಲ್ಲಾ ಅಂದಿನ ಭಯ, ಶಂಕೆ ಹೊಟ್ಟೆಯಲ್ಲಿ ಕೈಯಾಡಿಸುತ್ತದೆ. ಮತ್ತೆಂದೂ ನಾನು ಹೋಳಿಕಾಗೆ ಅರಳು ಎರಚಲಿಲ್ಲ. ಹುಟ್ಟಿದ ಮನೆಯ ಹೊಸ್ತಿಲು ತುಳಿಯಲಿಲ್ಲ.

ಜನ್ಮ ನೀಡಿದ ತಂದೆ ಅದಾವ ಕ್ಷಣದಲ್ಲಿ 'ಪೃಥಾ' ಎಂದು ಹೆಸರಿಟ್ಟರೋ! ಪೃಥಿವಿಯ ಗುಣಗಳನ್ನೆಲ್ಲ ಮೈಗೂಡಿಸಿಕೊಳ್ಳುವ ಅನಿವಾರ್ಯತೆ. ತಾಳ್ಮೆ–ಸಹಿಷ್ಣುತೆ, ಯಾರಾರದೋ ಬೇಕು–ಬೇಡಗಳನ್ನು ಭರಿಸುವ ಧರಿಸುವ ಶಕ್ತಿ ಬೆಳೆದು ಬಂತು. ನನ್ನದೂ ಬೇಕು ಬೇಡಗಳಿರುತ್ತವೆಂದು ಯಾರಿಗೂ ಯಾವತ್ತೂ ಅನಿಸಲೇ ಇಲ್ಲವೇ! ಕುಂತೀರಾಜನ ಅರಮನೆಗೆ ಬಂದದ್ದೇ ಭಯ–ಭಕ್ತಿ ಇವೆರಡೂ ನನ್ನನ್ನು ಇಕ್ಕುಳದಂತೆ ಹಿಡಿದವು. ಪ್ರೀತಿ, ಮಮತೆ, ಉತ್ಸಾಹ, ಚಪಲತೆ, ಬೆರಗು–ಎಳೆತನದ ಎಲ್ಲ ಕೋಮಲ ಭಾವನೆಗಳಿಂದ ನನ್ನನ್ನು ಮೇಲಕ್ಕೆತ್ತಿಬಿಟ್ಟವು. ಎಳವೆಯಲ್ಲೇ ಎಂತೆಂಥ ರೂಪ ವಿರೂಪ ಋಷಿಮುನಿಗಳ ಸೇವೆಮಾಡಿ ಸೈಯೆನಿಸಿಕೊಂಡೆ. ದೂರ್ವಾಸ ಮುನಿ ವರವೆಂದು ಹೇಳಿ, ಕೊಟ್ಟುದನ್ನು ಶಾಪವಾಗಿಸಿ ಹಿರಿದು ಹಾಕಿತ್ತು 'ಆರ್ಯ' ಸಮಾಜ. ನನಗೆ ಸಿಕ್ಕಿದ್ದಾದರೂ ಏನು? ಬರಿದಾದ ಮಡಿಲು. ಕುಡಿಸದೆ ಬತ್ತಿಹೋದ ಮೊಲೆಹಾಲು, ಬರಿದಾದ ಮನಸ್ಸು! 'ಅತಿಥಿ ದೇವ'ನಿಗೆ ಸತ್ಕಾರ ಎಂದು ಎಲ್ಲ ರೀತಿಯ ಸೇವೆ ಮಾಡಲು ನಿಯೋಜಿಸಿದ್ದು–ಆರ್ಯ ಸಂಪ್ರದಾಯ. ಮದುವೆಯಾಗದೆ ಮಗುವಾದರೆ ಕುಲಕ್ಕೆ ಅವಮಾನವೆಂದು ಬಸಿರು ಬಚ್ಚಿಟ್ಟು ಹುಟ್ಟಿದ

ಮಗುವನ್ನು ನೀರಿಗೆ ಹಾಕಿಸಿದ್ದು ಆರ್ಯ ಸಂಪ್ರದಾಯ. ವೀರ್ಯಶಕ್ತಿಯಿಲ್ಲದೇ ಹೋದರೂ ತನಗೆ ಮಕ್ಕಳು ಬೇಕೆಂದು ಒಂದಲ್ಲ ಮೂರು ಸಲ ಪತ್ನಿಯ ದೇಹವನ್ನು ನಿಯೋಗಕ್ಕೆ ಒಡ್ಡಿದ್ದು ಕೈಹಿಡಿದ ಮಹಾರಾಜನ ಆರ್ಯ ಸಂಪ್ರದಾಯ! ನನ್ನ ವಿನಯ ವಿಧೇಯತೆಯೇ ನನಗೆ ಮುಳುವಾಗಿತ್ತು. ಭೂಮಿಯನ್ನು ಉತ್ತು ಬಿತ್ತಿ ಬೆಳೆ ತೆಗೆದಂತೆ ನನ್ನಲ್ಲಿ ಬೀಜ ಬಿತ್ತಿ ಬೆಳೆ ತೆಗೆದರಲ್ಲ! ಆದ ತಪ್ಪು ನೆಪ್ಪುಗಳನ್ನೆಲ್ಲ ಒಳಸರಿಸಿ ಮೇಲೆ ನಳನಳಿಸುವ ಪೃಥಿವಿಯಂತೆ ನನ್ನದೂ ಬಾಳಬಟ್ಟೆ.

ಸಾಕುಮನೆಯಲ್ಲಿ ಸುಸಂಸ್ಕೃತ ರಾಜಕನ್ಯೆಯೆನಿಸಿಕೊಂಡು ಪಾಂಡು ಮಹಾರಾಜನನ್ನು ವರಿಸಿದ್ದು ಬಾಣಲೆಯಿಂದ ಬೆಂಕಿಗೇ ಬಿದ್ದಂತಾಯಿತು. ಹಸ್ತಿನಾವತಿಯ ರಾಜವಾಡೆಯೊಂದು ಹುತ್ತ! – 'ಮಹಾರಾಜ' ಪಟ್ಟ ಪಡೆದ ಕಿರಿಯವನನ್ನು ಅಸೂಯೆಯಿಂದಲೇ ನೋಡುವ ಹಿರಿಯಣ್ಣ ಕುರುಡ ಧೃತರಾಷ್ಟ್ರ–ಸಿಂಹಾಸನದ ಮೇಲೆ ಕೂರದೆಯೇ ರಾಜ್ಯದ ಅಧಿಕಾರವನ್ನು ಮನೆತನದ ಹೊಣೆಗಾರಿಕೆಯನ್ನು ನಡೆಸುತ್ತಿರುವ ಹಿರಿಯತಲೆ–ಭೀಷ್ಮ. ಹೆಸರಿಗೆ ಮಹಾರಾಜನಾಗಿ ರಾಜ್ಯದ ಆಡಳಿತದ ಕಡೆ ಗಮನಕೊಡದೆ 'ರಾಜ್ಯವಿಸ್ತಾರ'ಕ್ಕೆಂದು ಸದಾ ಹೊರಹೊರಗೇ ದಂಡುಕಟ್ಟಿಕೊಂಡು ತಿರುಗುತ್ತ ಆಗೊಮ್ಮೆ ಈಗೊಮ್ಮೆ ಹಸ್ತಿನಾವತಿಗೆ ಬಂದು ಹೋಗುವ ಪತಿರಾಯ ಪಾಂಡು. ಹಿರಿಯವನ ವಧುವಾಗಿ ಬಂದರೂ ಪಟ್ಟಕ್ಕೆ ಬಾರದೆ ಕುರುಡನ ಪತ್ನಿಯಾಗಿ ಕಣ್ಣಿಗೆ ಬೇಕೆಂದೇ ಪಟ್ಟಿ ಬಿಗಿದುಕೊಂಡ ಅತ್ತಿಗೆ ಗಾಂಧಾರಿಯ ಬಿಗುಮೌನ. ಗಾಂಧಾರಿಯ ಜೊತೆಗೆಂದು ಬಂದು ಅರಮನೆಯಲ್ಲೇ ವಾಸ್ತವ್ಯ ಹೂಡಿರುವ ಗಾಂಧಾರದೇಶದ ಪರಕೀಯವ್ಯಕ್ತಿ ಶಕುನಿ! ಚುಕ್ಕಾಣಿಯಿಲ್ಲದ ಹಡಗಿನಂತಾಗಿತ್ತು ನನ್ನ ಬದುಕು. ಹೇಗಿದ್ದೀಯ? ನಿನ್ನ ದಾಂಪತ್ಯ ಜೀವನ ಹೇಗಿದೆ? ನೀನು ಸಂತೋಷವಾಗಿದ್ದೀಯಾ? ಕೇಳುವರಾರು? ರಾಜಮಾತೆ ಸತ್ಯವತಿಯಿಂದ ಆಗಾಗ ಬರುತ್ತಿದ್ದ ವಿಚಾರಣೆ–ಇನ್ನೂ "ಸೂಚನೆಗಳೇನೂ ಇಲ್ಲವೇ?" ಎಂದು. ನನಗೊಬ್ಬ ಮಗನಿದ್ದೂ 'ಬಂಜೆ'ಯ ಪಟ್ಟ.

ಯಾರ ಒತ್ತಡ ಎಲ್ಲಿಂದ ಬಂತೋ ವಂಶೋದ್ಧಾರಕನಾಗಲೆಂದು ಪಾಂಡುವಿಗೆ ಮರುಮದುವೆಯ ಪ್ರಯತ್ನ ತಿಳಿದಾಗ ನನ್ನ ಅಸ್ತಿತ್ವಕ್ಕೇ ಕೊಡಲಿಪೆಟ್ಟು, ಪತಿಯ ರಾಜಪಟ್ಟವೇ ವಿವಾದಾಸ್ಪದವಾಗಿರುವಾಗ ಬಂಜೆಯೆನಿಸಿಕೊಂಡ ನನಗೊಬ್ಬಳು ಸವತಿ ಬಂದರೆ–ಅವಳಿಗೆ ಮಗುವಾದರೆ ನನ್ನ ಗತಿ? ರಾಜಮಾತೆ ಸತ್ಯವತಿಗಿದ್ದ ತಂದೆಯಂತೆ ನನ್ನ ಭವಿಷ್ಯವನ್ನು ವಿವಾಹದ ಸಮಯದಲ್ಲೇ ಭದ್ರ ಮಾಡುವ ತಂದೆ ನನಗಿರಲಿಲ್ಲವೇ! ಪೃಥಾ ಇನ್ನೇನು ಮಾಡಿಯಾಳು, ಸಂಕಟ ನುಂಗಿ ನುಂಗಿ ಅಭ್ಯಾಸವಲ್ಲವೇ!

ಹೇರಳ ಕನ್ಯಾಶುಲ್ಕ ಕೊಟ್ಟು ತಂದ ಮದ್ರ ರಾಜಕುವರಿ ಬಂದದ್ದು ಸವತಿಯಾಗಿ! ಆದರೂ ಪಾಂಡುವಿನ ಕೊರತೆ ಗೊತ್ತಾದ ದಿನವೇ ಮಾದ್ರಿ ನನ್ನ ತಂಗಿಯಂತೆಯೇ ಆದಳು. ಏನೇನು ಆಸೆಯಿಟ್ಟು ಬಂದಿದ್ದಳೋ! ನನ್ನಂತೆಯೇ ರಾಜವಾಡೆಯ ಬಂದಿ. ಇಬ್ಬರಿಗೂ ಭವಿಷ್ಯಕ್ಕೆ ಒಂದು ದೊಡ್ಡ ಅಡ್ಡಗೋಡೆ ಎದ್ದಂತೆ. ಎದುರು ನೋಡಲು ಏನೂ ಇಲ್ಲದ ದಿನಗಳೆಲ್ಲ ನಿಂತನೀರಿನಂತೆ ಕೊಳೆತ ವಾಸನೆ, ಉಸಿರುಗಟ್ಟಿಸುವ ಅರಮನೆ. ಬೇಟೆಯಾಡುವಾಗ

ಋಷಿಗಳೊಂದಿಗೆ ಏನೋ ಎಡವಟ್ಟಾಗಿ ಮರಳಿ ಬಂದ ಪಾಂಡು ಒಂದೇ ವಾರದಲ್ಲಿ ವಾನಪ್ರಸ್ಥಾನ ಮಾಡುತ್ತೇನೆಂದು ಹಠ ಹಿಡಿದ, ಭೀಷ್ಮರ 'ಅಸ್ತು' ದೊರೆತು ಹೊರಟೇ ಬಿಟ್ಟ. ಊಹಿಸಿರದ ರೀತಿಯಲ್ಲಿ ನನಗೆ ಹಸ್ತಿನಾವತಿಯಿಂದ ಬಿಡುಗಡೆ. ನನ್ನ ಬಾಲಂಗೋಚಿ ಮಾದ್ರಿಗೂ!

ಹಿಮಾಚಲದ ತಪ್ಪಲಿನ ಪ್ರಕೃತಿ ತಾಯ ಮಡಿಲಿನಂತೆ ಎಷ್ಟು ನೆಮ್ಮದಿ! ರಾಜವಾಡೆಯ ಭೋಗ, ಅಧಿಕಾರದ ಹುನ್ನಾರ, ರಾಜಕೀಯ ಮಾತ್ಸರ್ಯದ ಕೂಪದಿಂದ ವಿಶಾಲ ಹಿಮವಂತನ ತಂಪು ಅಂಗಳದ ಆತ್ಮೀಯ ಪರಿಸರ. ಹಿರಿಯಣ್ಣನಿಗೆ ಅಧಿಕಾರ ಒಪ್ಪಿಸಿ ತಪಸ್ಸಿಗೆಂದು ಬಂದ ಪಾಂಡುವಿನ ಮೇಲೆ ಕನಿಕರ ವಾತ್ಸಲ್ಯ ಮೂಡಿಸುವಂತಹ ನೆಮ್ಮದಿಯ ದಿನಗಳು. ಆದರೆ ಅದೂ ಕ್ಷಣಿಕ ನೆಮ್ಮದಿಯಾಗಿತ್ತು. ಪಾಂಡುರಾಜ ದೇಹದಿಂದ ಹಿಮಾಚಲದಲ್ಲಿದ್ದನೇ ಹೊರತು ಮನಸ್ಸೆಲ್ಲಾ ಇನ್ನೂ ಹಸ್ತಿನಾವತಿಯಲ್ಲೇ! ರಾಜ್ಯದ, ಪಟ್ಟದ ಆಸೆಯನ್ನು ಕಚ್ಚಿ ಹಿಡಿದಿತ್ತು. ಒಂದು ಮಗುವಾದರೆ ತನಗೆ ಪಟ್ಟ ಭದ್ರವೆಂಬ ನಂಬಿಕೆ. ಮತ್ತದೇ ಜಾಡಿನಲ್ಲೇ ಅವನ ವಿಚಾರ. ತಪಸ್ಸಿಗೆಂದು ಕಾಡಿಗೆ ಬಂದರೂ ಮನದಾಸೆ ಎಲ್ಲಿ ಬಿಟ್ಟೀತು? ಪುತ್ರದಾಹ, ರಾಜ್ಯದಾಹ! ಗಂಡಂದಿರ ದಾಹ ತೀರಿಸಲು ನಾವು ಕೈಗೊಂಬೆಗಳು–ಹೇಳಿದಂತೆ ಕೇಳಬೇಕಾದ ಕುಣಿಯಬೇಕಾದ ಬೊಂಬೆಗಳು! ನನ್ನ ಮೇಲೆ ಒತ್ತಾಯ. "ಹೇಗಾದರೂ ಸರಿ. ನನಗೊಂದು ಮಗು ಕೊಡು" ನನ್ನ ಅಸಮ್ಮತಿಗೆ ಬೆಲೆಕೊಡದೆ ಒತ್ತಾಯದಿಂದ ನನ್ನನ್ನು ಮಣಿಸುವ ಪ್ರಯತ್ನ. ಪದೇ ಪದೇ ನಿಯೋಗದ ಮಾತೆತ್ತುತ್ತಿದ್ದ. ಆ ತಿಂಗಳಿನ ಖಾದ್ಯ ಪದಾರ್ಥಗಳೊಂದಿಗೆ ರಾಜಧಾನಿಯಿಂದ ಬಂದ ಗುಂಪಿನಲ್ಲಿ ವಿದುರನೂ ಬಂದುದು ಪಾಂಡುವಿಗೆ ಭುಜಬಲ ಬಂದಂತೆ. ಗಾಂಧಾರಿ ಬಸುರಿಯಾದ ಸುದ್ದಿ ಕೇಳಿದಾಗಿನಿಂದ ಪಾಂಡುವಿನ ವರಾತ ಹೆಚ್ಚಾಗಿ–ನಾನೂ ಯೋಚಿಸಿದೆ. ಪಾಂಡುವಿನಿಂದ ಮಕ್ಕಳಾಗುವುದು ಅಸಂಭವ. ಕುರುವಂಶದ ಜೀಜಕೊರತೆಯಿಂದ ನನ್ನ ಬಸಿರೇಕೆ ಬಂಜರಾಗಬೇಕು? ಹೇಗೂ ಪತಿಯೇ ಕೇಳಿಕೊಳ್ಳುತ್ತಿರುವಾಗ ತಾಯ್ತನದ ಸುಖವಾದರೂ ಸಿಗಲೆಂದು ನಿಯೋಗಕ್ಕೆ ಒಪ್ಪಿದ ದಿನ ಮುದ್ದಿನ ಮಳೆಗರೆದ. ರಾತ್ರಿಯಲ್ಲಿ ಪೂರಾ ಕಂಬಳಿ ಹೊದ್ದ ಬ್ರಾಹ್ಮಣ 'ಪುರೋಹಿತ'–ಪುರಕ್ಕೆ ಹಿತ ಮಾಡುವವನು–ಧರ್ಮಾವತಾರನಿಂದ ಬೀಜದಾನವಾಗಿತ್ತು. ಮಡಿಲು ಕಟ್ಟಿತ್ತು. ಧರ್ಮಜನ ಹುಟ್ಟೇ ವಿಚಿತ್ರ ಅನುಭವ. ಬೇಕು ಬೇಡದ ಭಾವನೆಗಳ ತಾಕಲಾಟ!

ಪಾಂಡುವಿನ ಅತಿಯಾಸೆಯ ಜೊತೆ ನನಗಿದ್ದ ಮಕ್ಕಳ ಹಪಹಪ ಸೇರಿ ಭೀಮ ಅರ್ಜುನರೂ ಬಂದರು. ನನ್ನದು ತೀರಿದರೂ ಪಾಂಡುವಿಗಿನ್ನೂ ಆಸೆ. ಮಾದ್ರಿಯ ನಿಯೋಗದ ಮೂಲಕ ಮತ್ತಿಬ್ಬರು–ನಕುಲ ಸಹದೇವ. ತಪಸ್ಸಿನ ಎತ್ತರದಿಂದ ಜಾರತೊಡಗಿದ್ದ ಪಾಂಡು ಐವರು ಪುತ್ರರನ್ನು ಪಡೆದರೂ ಜಾರಿಕೆಯನ್ನು ತಡೆಹಿಡಿಯಲಾಗದೆ ದೈಹಿಕ ಕಾಮಕ್ಕೆ ಬಲಿಯಾಗಿ ಹೋದ. ಚಿಗುರುತ್ತಿದ್ದ ಸಂಸಾರವನ್ನು ಮೂರಾಬಟ್ಟೆ ಮಾಡಿ ಹೋದ. ಇರದ ಒಂದನ್ನು ಪಡೆಯಲು ಇರುವುದೊಂದನ್ನು ಶುಲ್ಕವಾಗಿ ತೆರಬೇಕೆಂಬ ನಿಯಮವನ್ನು ಅರ್ಥಮಾಡಿಸಲೋ ಎಂಬಂತೆ ನನ್ನ ಬಾಳಿನಲ್ಲಿ ಮಾದ್ರಿ ಬಂದಳು. ನನ್ನ ಮಕ್ಕಳ ಆಸೆ ಎರಡು ಪಟ್ಟು ತೀರಿಸಿ ತೆರಿಗೆಯಂತೆ ಪತಿಯನ್ನು ಕೊಂಡು ಹೋದಳು.

ಸಂಜೆಯ ನೇಸರು ಮುಳುಗುತ್ತಿದ್ದಂತೆ ಅಂಗಳದಲ್ಲಿ ಧಗಧಗಿಸಿದ ಚಿತಾಜ್ವಾಲೆ ಪಾಂಡು ಮಾದ್ರಿಯರನ್ನು ಸ್ವಾಹಾ ಮಾಡಿತ್ತು. ಅದೇ ಚಿತೆಯಲ್ಲಿ ನನ್ನ ಜೀವನಾಧಾರ-ಸಾಂಸಾರಿಕ ನೆಮ್ಮದಿಯೂ ಉರಿದುಹೋಯಿತು. ಬದುಕಿನ ಮತ್ತೊಂದು ಸಂಕಟಮಯ ಅಧ್ಯಾಯದ ನಾಂದಿಹೋಮವಾಗಿತ್ತು ಪಾಂಡರಾಜನ ಚಿತೆ. ಗತಿಗೆಟ್ಟ ವಿಧವೆ ಐದು ಚಿಕ್ಕ ಮಕ್ಕಳೊಂದಿಗೆ ಸತ್ತ ಗಂಡನ ಹೆಸರು ಮಾತ್ರ ಹಿಡಿದು ಅವನ ಮನೆಗೇ ಮರಳುವಂತಹ ದೀನಹೀನಸ್ಥಿತಿ ಮತ್ತಾವ ತಾಯಿಗೂ ಬಾರದಿರಲೆಂದೊರಲಿತ್ತು ಮನ.

ಬಂಜೆಯೆನಿಸಿಕೊಂಡು ಊರು ಬಿಟ್ಟು ನಡೆದಿದ್ದ ಕುಂತಿ ಈಗ ಐದು ಮಕ್ಕಳ ತಾಯಿ ವಿಧವೆಯಾಗಿ ಬಂದರೆ, ಯಾರಿಗೆ ನಂಬುಗೆ? ಯಾರಿಗೆ ಹಿತ? ಧರ್ಮಜ ದುರ್ಯೋಧನನಿಗಿಂತ ಒಂದೆರಡು ವರ್ಷಗಳ ಹಿರಿಯವನೆಂದಾದ ಮೇಲಂತೂ ಧೃತರಾಷ್ಟ್ರನ ತಳಮಳ, ದುರ್ಯೋಧನನ ಸಿಟ್ಟು ಶಕುನಿಯ ಸಂಚು ಬೇಡವೆಂದರೂ ಕಣ್ಣಿಗೆ ಬಡಿಯುತ್ತಿತ್ತು. ಭೀಷ್ಮರದು ಅಭೇದ್ಯ ಉದಾಸೀನ ಭಾವ. ನನ್ನ ಮಕ್ಕಳನ್ನು ವಿಚಿತ್ರ ಒತ್ತು ಕೊಟ್ಟು ಪಾಂಡವರೆಂದರೇ ಹೊರತು ಒಂದು ಸಲವಾದರೂ ಆತ್ಮೀಯವಾಗಿ ಮನದಾಳದ ಪ್ರೀತಿಯಿಂದ ಕುರುವಂಶದವರು-ಕೌರವರೆಂದು ಕರೆಯಲಿಲ್ಲ. ನನ್ನ ಮತ್ತು ಐವರು ಮಕ್ಕಳ ಸ್ಥಾನವೇನೆಂಬುದನ್ನು ಖಚಿತಪಡಿಸಲಿಲ್ಲ. "ರಾಜಕುಮಾರರು ಇರಲಿ. ಅವರ ವಿದ್ಯಾಭ್ಯಾಸ ಏರ್ಪಾಡಾಗುತ್ತದೆ" ಎಂದರಷ್ಟೆ. ಒಮ್ಮೆ ಹೊರಬಂದು ಬಿಡುಗಡೆಯ ಉಸಿರೆಳೆದಿದ್ದವಳಿಗೆ ಮತ್ತದೇ ಹುತ್ತದಲ್ಲಿ, ಸಂಶಯ ಕಿರುಕುಳದ ರಾಜವಾಡೆಯ ವಾಸ, ಸರ್ಪದ ಹೆಡೆಯಡಿಯ ಕಪ್ಪೆಯಂತೆ! ಎಲ್ಲರಿಗಿಂತ ಬಲಶಾಲಿ, ದುರ್ಯೋಧನನ ವಯಸ್ಸಿನ ಭೀಮನ ಮೇಲೆ ಅದೆಷ್ಟು ಬಾರಿ ಕೊಲ್ಲುವ ಸಂಚು ನಡೆದದ್ದು! ಪ್ರತಿಸಲವೂ ಅವನ ದೊಡ್ಡಬಾಯಿ ಮುಚ್ಚಿಸಿ ಏನೂ ನಡೆದಿಲ್ಲವೆಂಬಂತೆ ವರ್ತಿಸುವುದು ಹರಸಾಹಸವಾಗಿತ್ತು. ದಾಯಾದಿ ಮಕ್ಕಳಲ್ಲಿನ ಈ ತಿಕ್ಕಾಟ ಹಿರಿಯರಿಗೆ ಗೊತ್ತಾಗುತ್ತಿರಲಿಲ್ಲವೇ? ಗೊತ್ತಿದ್ದೂ ಮುಖ ತಿರುವಿದ್ದರೇನೋ ಅನ್ನಿಸಿದಾಗ ದಿಗಿಲಾಗುತ್ತಿತ್ತು. ನನ್ನ ಮಕ್ಕಳ ಕ್ಷೇಮಕ್ಕಾಗಿ ಹಗಲಿರಳೂ ಆತಂಕ, ಎಡೆಬಿಡದ ಕಣ್ಗಾವಲು. ಹಸ್ತಿನಾವತಿಯ ಜನತೆಯ ಒತ್ತಾಯಕ್ಕೆ ಕಟ್ಟುಬಿದ್ದು ಧರ್ಮಜನನ್ನು ಯುವರಾಜನನ್ನಾಗಿ ಮಾಡಿದ್ದಂತೂ ನಮ್ಮ ಆರೂ ಜನರ ಪ್ರಾಣಕ್ಕೇ ಅಪಾಯ ತಂದಿತ್ತು. ಧೃತರಾಷ್ಟ್ರನೊಳಗಿನ ಹೀನ ಭಾವನೆಗಳು ಭೀಷ್ಮರಿಗೆ ತಿಳಿದಿರಲಿಲ್ಲವೇ? ತಿಳಿದೂ ಏನೂ ಮಾಡಲಾಗದೆ ಸುಮ್ಮನಿದ್ದುದೇ? ರಾಜಪಟ್ಟದ ಮೋಹ ಪುತ್ರನ ಮೇಲಿನ ವ್ಯಾಮೋಹ-ಕುರುಡ ಧೃತರಾಷ್ಟ್ರನ ಮನಸ್ಸೂ ಕುರುಡಾಗಿ ಹೋಗಿತ್ತು. ಬುದ್ಧಿಮಾತು ಹೇಳಿ ತಿಳುವಳಿಕೆ ಕೊಡಬೇಕಾದ ಪತ್ನಿ ಗಾಂಧಾರಿ ತಾನಾಗಿಯೇ ಕುರುಡುತನ ತಂದುಕೊಂಡಿದ್ದಳು. ಆ ದಿನಗಳಲ್ಲಿ ನಂಬಲರ್ಹವಾದ, ಒಲುಮೆ ತೋರಿಸಿದ ಒಂದೇ ಒಂದು ಜೀವವೆಂದರೆ ಮೈದುನ ವಿದುರ. ಆತನ ಮುನ್ಸೂಚನೆ, ಸೂಕ್ತ ಸಲಹೆ, ಹಿತನುಡಿ ಬುದ್ಧಿವಾದ – ಒಟ್ಟಾರೆ ಪರೋಕ್ಷ ರಕ್ಷಣೆಯಿಲ್ಲದೆ ನಾವಾರೂ ಬದುಕುಳಿಯುತ್ತಿರಲಿಲ್ಲವೇನೋ!

ಈಗಲೂ ಕಣ್ಣಿಗೆ ಕಟ್ಟಿದಂತಿದೆ. ಆಕಾಶವೆಲ್ಲ ಕೆಂಪಾಗಿ ರಾತ್ರಿಯ ತಾರೆಗಳನ್ನೂ ಮುಚ್ಚಿಹಾಕಿದ

ಆಕಾಶದೆತ್ತರದ ಬೆಂಕಿಯ ಕೆನ್ನಾಲಗೆ. ನಾವಿದ್ದ ಅರಗಿನಮನೆ ಹೊತ್ತಿಕೊಂಡು ಉರಿವ ವಾಸನೆ ನಾವು ಓಡಿಬಂದ ಕಾಡನ್ನೂ ಅರಸಿ ಬಂದಿತ್ತು. "ನೀವು ಬದುಕುಳಿಯುವುದು ಬೇರಾರಿಗೂ ಬೇಕಿಲ್ಲ. ಉಸಿರುಗಟ್ಟಿಸಿ ಕೊಲ್ಲಬೇಕೀಗ. ನಿಮ್ಮ ಹೆಸರಿಲ್ಲದಂತೆ ಮಾಡಬೇಕೀಗ!" ಎಂದು ಅರಗಿನ ಸುಡುಗಾಳಿ ನಮ್ಮ ಬೆಂಬತ್ತಿ ಬಂದಿತ್ತು. ಪ್ರಪಂಚದ ಕಣ್ಣಿಗೆ ಅದೇ ಕ್ಷಣ ಹೊತ್ತಿ ಉರಿಯುತ್ತಿರುವ ಅರಗಿನ ಮನೆಯಲ್ಲಿ ಪಾಂಡವರ, ಕುಂತಿಯ ದಹನವೂ ನಡೆಯಬೇಕಾಗಿತ್ತು.

ಇಲ್ಲಿಯವರೆಗೆ ರಾಜವಾಡೆಯ ಒಳಗೇ ಧೃತರಾಷ್ಟ್ರನ ಭಿಕ್ಷೆಗೆ ಕೈಯೊಡ್ಡುತ್ತಿದ್ದರೂ ರಾಜವಾಡೆಯ ಹೊರಗೆ ನಮಗೆ ಗೌರವ ಜನಾದರ, ರಾಜಮನ್ನಣೆ ಇತ್ತು. ಆದರೀಗ? ಬದುಕಿದ್ದರೂ 'ಸತ್ತು'ಹೋದವರಾಗಿ, ಅನಾಮಧೇಯರಾಗಿ ಊರೂರು ಅಲೆಯುತ್ತ ಭಿಕ್ಷಾಟನೆಮಾಡಿ ಹೊಟ್ಟೆ ಹೊರೆಯಬೇಕಾದ ಪರಿಸ್ಥಿತಿ. ಅರಗಿನರಮನೆಯ ಬೆಂಕಿ ನಮ್ಮ 'ಅಸ್ತಿತ್ವ'ವನ್ನೇ ಕಸಿದುಕೊಂಡಿತ್ತು. ಇದಕ್ಕಿಂತ ಕೆಳಸ್ಥಿತಿ ಇಲ್ಲವಲ್ಲ. ಇನ್ನೇನು ಸಂಭವಿಸಿದರೂ ಅದು ಏರುಸ್ಥಿತಿಯೇ ಆಗಬೇಕಿತ್ತು. ಕಾಡಿನಲ್ಲಿ ಅಲೆದರೂ ನಯವಂಚಕರ ಹಾವಳಿಯಿಲ್ಲದೆ ನೆಮ್ಮದಿಯ ಉಸಿರೆಳೆದ ದಿನರಾತ್ರಿಗಳಾಗಿದ್ದವು. ಕಾಡುಮೃಗಗಳು 'ನಾಡ' ಮೃಗಗಳ ಮುಂದೆ ಅತಿ ಸಾಧುಪ್ರಾಣಿಗಳಂತೆ ಕಾಣುತ್ತಿದ್ದವು. ಆದರೆ ಇವೆಲ್ಲ ಕಷ್ಟಗಳು ನಮ್ಮ ದೇಹ, ಮನಸ್ಸು ಬುದ್ಧಿಯನ್ನು ಚುರುಕುಗೊಳಿಸಿದ್ದವು. ಮಸೆದ ಕತ್ತಿಯಂತೆ ಹರಿತಗೊಳಿಸಿದ್ದವು. ನಮ್ಮನ್ನು ಸ್ವಾವಲಂಬಿಯಾಗಿಸಿದ್ದವು.

ರಾಜವಾಡೆಯಲ್ಲಿ ರಾಜಸುಖದ ರುಚಿ ಕಂಡಿದ್ದ ಮಕ್ಕಳಲ್ಲಿ ಚಿಕ್ಕಪುಟ್ಟ ಕಿರಿಕಿರಿ, ಅಸಮಾಧಾನ ಏಳುತ್ತಲೇ ಇತ್ತು. ಭೀಮನಿಗೆ ರುಚಿಕಟ್ಟಾದ ಊಟದ ಕೊರತೆಯಾದರೆ ಧರ್ಮಾರ್ಜುನರಿಗೆ ರಾಜಪುತ್ರರಾದರೂ ಕಾಡಿನಲ್ಲಿ ದಿಕ್ಕೆಟ್ಟವರಾಗಿ ಅಲೆದಾಡುವ ಸ್ಥಿತಿ ತಲೆಕೆಡಿಸುತ್ತಿತ್ತು. ಇನ್ನೂ ಹದಿಹರೆಯದಲ್ಲಿದ್ದ ನಕುಲ ಸಹದೇವರಂತೂ ಬಹುಬೇಗ ದಣಿದುಬಿಡುತ್ತಿದ್ದವು. ಅಣ್ಣಂದಿರೊಡನೆ ಮಲಗಲು ಹೋಗುತ್ತಿದ್ದರೂ ಏನೋ ನೆವ ಹೇಳಿ ಅರ್ಧರಾತ್ರಿಯ ವೇಳೆಗೆ ನನ್ನ ಪಕ್ಕಕ್ಕೇ ಬಂದು ಮಲಗುತ್ತಿದ್ದ ರಾತ್ರಿಗಳೆಷ್ಟೋ.

ಹಿಡಂಬನ ವಧೆಯಾದ ಮೇಲೆ ಒಂದು ವಿಷಯ ಎಲ್ಲರಿಗೂ ಮನದಟ್ಟಾಗಿತ್ತು. ಏನೇ ಸನ್ನಿವೇಶ ಬಂದರೂ ಎಲ್ಲರೂ ಒಟ್ಟಾಗಿದ್ದು ಒಮ್ಮತದಿಂದ ನಿರ್ಧಾರ ತೆಗೆದುಕೊಳ್ಳಬೇಕು. ಒಬ್ಬರಿಗೊಬ್ಬರು ಸಹಾಯ ಸಹಕಾರ ಕೊಟ್ಟು ಪರಿಸ್ಥಿತಿ ನಿಭಾಯಿಸಬೇಕು. ಈ ಒಗ್ಗಟ್ಟು ಅತ್ಯಾವಶ್ಯಕವಾಗಿತ್ತು. ಐವರೂ ಅಣ್ಣತಮ್ಮಂದಿರು ಬೆಳೆಯುತ್ತ ದಾಯಾದಿಗಳಾಗಿ ಯಾವುದಕ್ಕೂ ಗುದ್ದಾಡದೆ ಇರುವಂತೆ ನನ್ನ ಪ್ರಯತ್ನ ನಡೆದೇ ಇತ್ತು. ಎಲ್ಲರ ಮನದೊಳಗೂ ಒಂದೇ ಗುರಿ-ರಾಜ್ಯ ಬೇಕು. ಪಾಂಡವರಿಗೆ ರಾಜ್ಯ ಬೇಕು. ಅಂದಿಗೂ ಇಂದಿಗೂ ಏನು ವ್ಯತ್ಯಾಸ? ಕುರುಕುಲದ ದಾಯಾದಿ ಮಾತ್ಸರ್ಯ ಜಗಜ್ಜಾಹೀರಾಗಿದೆ. ಅಷ್ಟೆ. ಅಂದಿನಂತೆ ಇಂದೂ ನಾನು ಹಂಗಿನ ಕೂಳು ತಿನ್ನುತ್ತಿರುವ ಕಂಗಾಲಿಯೇ-ಅಂದಾದರೆ ಮಕ್ಕಳಾದರೂ ಜೊತೆಗಿದ್ದರು. ಇಂದು ಮಕ್ಕಳು ಮೊಮ್ಮಕ್ಕಳು ಯಾರೂ ಜೊತೆಗಿಲ್ಲದೆ ಒಂಟಿ ಗೂಬೆಯಂತೆ ವಿದುರನ ಅಂಗಳದಲ್ಲಿದ್ದೇನೆ.-ಮಕ್ಕಳೂ ಅವರಿವರ ಸಹಾಯ ಬೇಡುತ್ತ ಅಲೆಮಾರಿಗಳೇ! ಮನ ಕಲಕುವ

ಸಂಗತಿಯೆಂದರೆ ಮನೆ ಮನ ತುಂಬಿದ ಕೃಷ್ಣೆಯ ಅಭಿಷಿಕ್ತ ಸಿರಿಮುಡಿ ಹದಿಮೂರು ವರ್ಷಕ್ಕೂ ಮೀರಿ ಬಿಚ್ಚಿಕೊಂಡಿದ್ದು ಸೇಡಿನ ಸರ್ಪಿಣಿಯಂತೆ ಜೋತಾಡುತ್ತಿರುವುದು. ಕೃಷ್ಣೆಯ ಮುಖದಲ್ಲಿ ಮನೆಮಾಡಿರುವ ತಿರಸ್ಕಾರದ ನಗೆ, ದೌರ್ಜನ್ಯಕ್ಕೆ ಒಳಗಾದ ಹೆಣ್ಣಿನ ಕಿಡಿಗಣ್ಣು, ದುಷ್ಕರ್ಮಿಗಳನ್ನು ತುಳಿದು ಹೊಸಕಿಹಾಕುವ ನಡಿಗೆಯ ದಿಟ್ಟ ಹೆಜ್ಜೆಗಳು. ಕುರುಕುಲದ–ಅಲ್ಲಲ್ಲ–ಇಡೀ ಪುರುಷವರ್ಗವನ್ನೇ ಪರಸ್ಪರ ಬಡಿದಾಟಕ್ಕೆ ಹಚ್ಚಿ ನಿರ್ನಾಮಗೊಳಿಸಲೆಂದು ಪಣತೊಟ್ಟಿರುವ ಕಂಕಾಳಿಯಾಗಿದ್ದಾಳೆ. ಆಂದು ಹಸ್ತಿನಾವತಿಯೊಳಗೇ ಇದ್ದ ದಾಯಾದಿ ಜಗಳ ಇಂದು ಮುಗಿಲೆತ್ತರಕ್ಕೆ ಬೆಳೆದ ಪೆಡಂಭೂತವಾಗಿ "ಧರ್ಮಯುದ್ಧ"ದ ವೇಷ ತೊಟ್ಟು ಕುಣಿಯಹತ್ತಿದೆ. ಭೀಷ್ಮ, ವಿದುರ, ಧೃತರಾಷ್ಟ್ರರಲ್ಲೇ ಉತ್ತರ ಸಿಗಬಹುದಾಗಿದ್ದ ಸಮಸ್ಯೆ ಇಂದು ಆರ್ಯಾವರ್ತದ ಉದ್ದಗಲಕ್ಕೂ ವ್ಯಾಪಿಸಿ ಸಂಬಂಧವಿಲ್ಲದವರಿಗೂ ಮೂಗು ತೂರಿಸುವ ಅಧಿಕಾರ ಕೊಟ್ಟುದಾಗಿದೆ... ಈ ಯುದ್ಧದಲ್ಲಿ ಗೆದ್ದರೆ ಮಾತ್ರ ಮತ್ತೆ ಸಿಗುವುದು ಕೈಬಿಟ್ಟು ಹೋಗಿರುವ ದೇಶ–ಕೋಶ; ಮಾನ–ಮರ್ಯಾದೆ; ಧರ್ಮ–ಕರ್ಮ; ಇಲ್ಲದಿದ್ದರೆ ಎಲ್ಲವೂ ನಿರ್ನಾಮ!

ಅಂದು ಕಿಕ್ಕಿರಿದಿದ್ದ ರಾಜಸಭೆಯಲ್ಲಿ ದ್ರೌಪದಿಗಾದ ಮಾನಭಂಗ–ಕುರುವಂಶದ ಅಧಃಪತನದ ವೇಗ–ಆಳ ಎರಡಕ್ಕೂ ಅಳತೆಯಿತ್ತೇ? ಕ್ಷತ್ರಿಯರಾದ ನನ್ನ ಮಕ್ಕಳಲ್ಲೇ ನನಗೆ ನಂಬಿಕೆ ಇಲ್ಲವಾಗಿತ್ತು. ಹಿರಿಯರ 'ಹಿರಿತನ' ಪ್ರಶ್ನೆಯಾಗಿಯೇ ಉಳಿದುಹೋಯಿತು. 'ಧರ್ಮರಕ್ಷೆ' ಕೇವಲ ಬಾಯಿಮಾತಾಗಿ ಉಳಿದಿತ್ತು. ಧರ್ಮಜನನ್ನು ದ್ಯೂತಕ್ಕೆ ಕರೆದು ತಂದವನು ವಿದುರನಲ್ಲವೇ? ಧರ್ಮಪಂಡಿತ ಕರೆದರೆ 'ಧರ್ಮಪಾಲಕ'–ಧರ್ಮರಾಯ ದ್ಯೂತವನ್ನಾಡಿದ! ದ್ರೌಪದಿಯ ಸಂಕಟ ಕ್ಷಣದಲ್ಲಿ ಒಬ್ಬ ಕೈಕಟ್ಟಿ ತಲೆಬಗ್ಗಿಸಿ ನಿಂತರೆ ಮತ್ತೊಬ್ಬ ಕೂತ. ಇಬ್ಬರೂ ಮೌನ! ಈಗಿರುವುದು ನನಗೊಂದೇ ಆಸೆ. ದ್ರೌಪದಿಗಾದ–ಭಾರತನಾರಿಗೇ ಆದ ಅವಮಾನಕ್ಕೆ ತಕ್ಕ ಶಿಕ್ಷೆ. ದುರಿತ ಮಾಡಿದವರಷ್ಟೇ ದುರಿತವನ್ನು ಸಹಿಸಕೊಂಡವರೂ, ನಡೆದಿದ್ದ ದುರಿತವನ್ನು ನೋಡುತ್ತ ಕುಳಿತವರೂ ಎಲ್ಲರೂ ಅದರಲ್ಲಿ ಸಮಭಾಗಿಗಳು. ಇಂತಹ ದುಷ್ಕರ್ಮಿ ಕ್ಷತ್ರಿಯ ಕುಲವೇ ನಾಶವಾದರೂ ಒಳಿತೇನೋ!

ಇಷ್ಟೆಲ್ಲ ವಿಷವನ್ನುಂಡ ನನ್ನ ಹೊಟ್ಟೆಗೆ ಏನು ಹಾಕಿದರೂ ಅದೂ ವಿಷವೇ ಆಗುವುದೇನೋ. ವಾಸುದೇವ ಹೇಳಿದಂತೆ ಒಳಗಿರುವ ವಿಷ ಕಾರಿಬಿಡುವತನಕ ಸಮಾಧಾನವೆಲ್ಲಿ? ಆದರೆ ಯಾರಲ್ಲಿ ಕಾರಿಕೊಳ್ಳುವುದು? ಈ ಹೊಳೆಗೇ ಕಾರಿಕೊಳ್ಳಬೇಕಷ್ಟೇ. ಉಂಡ ಕಹಿ ಅನುಭವಗಳು ಒಳಗೇ ಹುಳಿಗೊಂಡು ತೇಗಿನಂತೆ ಹೊರಬರಲು ನೋಡುತ್ತಿವೆ. ಈಗ ಪಾರ್ಶವಿ ಇಕ್ಕುವ ಊಟಕ್ಕೆಲ್ಲಿ ಜಾಗ!

ಇಂದು ನನ್ನ ಬುದ್ಧಿಗೇ ಗ್ರಹಣ ಬಡಿದಿದೆ. ದಿನ–ವರ್ಷ–ಘಟನೆಗಳು ಎಲ್ಲ ಕಲಸಿ ಕಲಸಿ ಮೇಲೆ ಕೆಳಗೆ! ವಾಸುದೇವನ ಸಂಗ–ಕ್ರಾಂತಿಯೇ ಸರಿ. ಎಲ್ಲವನ್ನೂ ಗುಡಿಸಿಹಾಕು ಎಂದ. ಹೇಗೆ? ಹದಿಮೂರು ವರ್ಷದ ದೀರ್ಘಕಾಲ ಕೂತು ಚಿಂತೆ ಮಾಡಿದ್ದೆಲ್ಲ ಗುಡಿಸಿಹಾಕಲು ಸಾಧ್ಯವೇ? ತಲೆಯೊಳಗೆಲ್ಲ ನನ್ನ ಸಂಸಾರಕ್ಕಾದ ಅನ್ಯಾಯದ್ದೇ–ಉಗ್ರಸೇನ ಮಹಾರಾಜನ ಪುತ್ರಿ–ಕುಂತೀಭೋಜನ ರಾಜಕುವರಿ–ಕುರುಮಹಾರಾಜ ಪಾಂಡುವಿನ ಪಟ್ಟದ ರಾಣಿ–ಐವರು

ವೀರಾಧಿವೀರ ರಾಜಕುಮಾರರ ವೀರಮಾತೆ ಇಂದ್ರಪ್ರಸ್ಥದ ಮಹಾರಾಜ ಧರ್ಮರಾಯನ ರಾಜಮಾತೆ-ದ್ರುಪದ ರಾಜನ ಬೀಗಿತಿ! ಇಷ್ಟೆಲ್ಲ ಆದರೂ ಎರಡು ವನವಾಸಗಳು, ಅಜ್ಞಾತವಾಸ, ಹದಿಮೂರು ವರ್ಷಗಳ ಪರರಲ್ಲಿ ವಾಸ. ಈಗ ಅಸಮಸೇನಾಬಲದ 'ಮಹಾಯುದ್ಧ'ದ ಕರಾಳ ದಿನಗಳು ಎಂದು ವಾಸುದೇವನಲ್ಲಿ ದುಃಖತೋಡಿಕೊಂಡರೆ "ಅತ್ತೇ-ಬಾಳಿನುದ್ದಕ್ಕೂ ಕಾಲನು ಘಟನೆಗಳನ್ನಿಡುತ್ತಾ ಸಾಗುತ್ತಾನೆ. ಆ ಘಟನೆಗಳನ್ನು ಕಷ್ಟಗಳ ಕಗ್ಗಂಟೆಂದಾದರೂ ನೋಡಬಹುದು. ಅಥವಾ ಅನುಭವಗಳ ನೆಯ್ಗೆ ಎಂದಾದರೂ ಕಾಣಬಹುದು. ಗಂಟುಗಳ ಗೋಜು ಉಂಡೆಯಾಗಿ ಕೈಗೆ ತೆಗೆದುಕೋ; ಇಲ್ಲವೇ ಒಂದಕ್ಕೊಂದು ಸಂಬಂಧವಿರುವ ಹೆಣಿಗೆಯ ಬಟ್ಟೆಯಾಗಿ ಮಾಡಿಕೊ. ಆಯ್ಕೆ ನಿನ್ನದೇ!" ಎಂದುಬಿಟ್ಟ.

"ಮುಂದೇನು ಎನ್ನುವ ಪ್ರಶ್ನೆಗೆ ಉತ್ತರ ಹುಡುಕದೆ, ಏಕೆ ಹೀಗಾಯಿತೆಂದು ಹಿಂದಿನ ದಿನಗಳಲ್ಲೇ ಸುತ್ತುತ್ತಿದ್ದೀಯೆ. ಯೋಚನೆಯ ಜಾಡನ್ನು ಬದಲಾಯಿಸದ ಹೊರತು ಹೀಗೇ-ನೀನು ಉತ್ತರ ಹುಡುಕುವ ರೀತಿಯೇ ಸರಿಯಲ್ಲ ಎಂದೇಕೆ ನಿನಗೆ ಅರ್ಥವಾಗಿಲ್ಲ?..... ಈ ಪರಿಸ್ಥಿತಿಗೆ ಕಾರಾಣರಾದವರ ಪಟ್ಟಿಯಲ್ಲಿ ನಿನ್ನನ್ನು, ನಿನ್ನ ಮಕ್ಕಳನ್ನೂ ಸೇರಿಸಿಕೊಂಡು ಯೋಚಿಸಿ ನೋಡು"- ವಾಸುದೇವನ ಚಾಟಿ ಏಟಿನ ಮಾತು. ಈ ಸಲದ ಅವನ ಭೇಟಿ ವಿಚಿತ್ರ-ನನ್ನ ಮನಸ್ಸಿಗೇ ಕನ್ನಡಿ ಹಿಡಿದು ತೋರಿಸಿದ್ದ ಹುಳುಕುಗಳು.

ಮುಸ್ಸಂಜೆಯಾಯಿತೇ? ಅಕೋ! ದೀಪ ಹಿಡಿದು ಬಂದೇಬಿಟ್ಟಳು ಪಾರ್ಶವಿ. ನನ್ನಲ್ಲಿ ಒಂಟಿತನದ, ಬೇಸರದ ಕತ್ತಲಾಳದಿಂದ ಹೊರಗೆಳೆದು ತರುವ ಏಕೈಕ ಜೀವ ಗೆಳತಿ-ಏನನ್ನೂ ಕೆದಕದೆ ನನ್ನ ಇಷ್ಟಾನಿಷ್ಟಗಳನ್ನು ತಾನೇ ಅರಿತು ಅಗತ್ಯಗಳನ್ನು ಪೂರೈಸುವ ಪ್ರೇಮಹೃದಯಿ. ಇವಳ ಆಸರೆ ಇಲ್ಲದೆ ಕುಂತಿ ಎಲ್ಲಿರುತ್ತಿದ್ದಳು? ವಿದುರ ಪಾರ್ಶವಿಯರ ನಿಸ್ವಾರ್ಥ ಪ್ರೀತಿಯೇ ನನಗೆ ಇಲ್ಲಿರುವ ಶ್ರೀರಕ್ಷೆ. ಅವರ ಮನೆಯಲ್ಲಿ ದೀರ್ಘಕಾಲದ ಅತಿಥಿಯಾದರೂ ಸಲಿಗೆಯಲ್ಲೂ ರೀತಿಬಿಡದ ಸಭ್ಯ ವ್ಯವಹಾರ. ಮಾತಿನಲ್ಲಿ ತಾಳ್ಮೆ ವಿನಯ. ನಾನೇನೇ ಕೇಳಿದರೂ ಯೋಚಿಸಿ ತಡೆತಡೆದು ವಿವರಿಸಿ ಹೇಳುವ ಪರಿ ವಿದುರನ ವಿಶೇಷಗುಣ. ವಾಸುದೇವನ ಮಾತೋ ಕುರಿತೇಟಿನದು. ಕರಾರುವಾಕ್ಕು, ಸಂಕ್ಷೇಪ. ಅವನಿಗಿರುವ ಕಾರ್ಯಭಾರದಲ್ಲಿ ಅವನು ನನ್ನ ಗೋಳಿನ ಕಥೆಗೆ ಕಿವಿಗೊಟ್ಟುದೇ ಹೆಚ್ಚು. ಕೇಳಿ ಕೇಳಿ ಕಡೆಗೇನಂದ –"ಒಂದು ಅರ್ಥಮಾಡಿಕೊ. ನಮ್ಮ ಸಹಮತಿಯಲ್ಲದೆ ಯಾರಿಗೂ ನಮ್ಮನ್ನು ತುಳಿಯಲಾಗುವುದಿಲ್ಲ; ಕೇಡು ಮಾಡಲಾಗುವುದಿಲ್ಲ!"

ನಮ್ಮ ಅಸಹಾಯ ಸ್ಥಿತಿಗೆ ಬೇರೆಯವರಷ್ಟೇ ನಾವೂ ಹೊಣೆಗಾರರೇ ದಿಟ! ಪರಿಸ್ಥಿತಿ ಈ ಪರಿ ಹದಗೆಡುವುದಕ್ಕೆ ಯಾರ್ಯಾರು ಹೊಣೆ? ರಾಜ್ಯವನ್ನು ಇಬ್ಭಾಗ ಮಾಡಿ ದಾಯಾದಿ ಮಾತ್ಸರ್ಯಕ್ಕೆ ಎಡೆಮಾಡಿಕೊಟ್ಟ ಭೀಷ್ಮರೇ? ಕುರುಡನಾದರೂ ಮೊದಲನೆಯವನಾದ್ದರಿಂದ ರಾಜ್ಯದ ಅಧಿಕಾರಪಟ್ಟ ತನ್ನದೆಂದು ನಂತರ ತನ್ನ ಮಗನದೆಂದು ಸಾಧಿಸುವ ಧೃತರಾಷ್ಟ್ರನೇ? ಪಾಂಡವರು ಕುರುವಂಶದವರಲ್ಲ-ಅವರಿಗೆ ರಾಜ್ಯಾಧಿಕಾರವೇ ಇಲ್ಲ ಎಂದು ನಿರ್ಧರಿಸಿಬಿಟ್ಟಿರುವ ದುರ್ಯೋಧನನೇ? ರಾಜ್ಯದ ಸಿಂಹಾಸನ ಬಿಟ್ಟುಕೊಟ್ಟು ತಪಿಸ್ಸಿಗೆಂದು ಕಾಡಿಗೆ ಹೋದ

ಪಾಂಡುವಿನ ರಾಜ್ಯವನ್ನು ಅವನ ಮಗ ಧರ್ಮಜನಿಗೆ ಕೊಡಬೇಕೆಂದು ಕೇಳುತ್ತಿರುವ ಕುಂತಿ–ನಾನೇ? ಅಥವಾ ಕೊಟ್ಟಿದ್ದ ಅರ್ಧ ರಾಜ್ಯವನ್ನು ಉಳಿಸಿಕೊಳ್ಳದೇ ಪೊಳ್ಳು ನೆವಗಳಿಗೆ ಮನಸೋತು ಜೂಜಾಡಿ ಕಳೆದುಕೊಂಡ ಧರ್ಮಜನೇ? ಮೊದಲನೆಯ ಗೋಜಲಿಗೆ ತಮ್ಮ ಎಳೆಗಳನ್ನೂ ಸುತ್ತಿ ಬಿಡಿಸಲಾಗದ ಕಗ್ಗಂಟು ಮಾಡಿರುವ ಕರ್ಣ–ಗಾಂಧಾರಿ–ಶಕುನಿ–ದ್ರೌಪದಿ, ಭೀಮಾರ್ಜುನ ನಕುಲ ಸಹದೇವ ಎಲ್ಲರೂ ಹೊಣೆಗಾರರೇ! ಒಂದು ಮಾತಂತೂ ನಿರ್ವಿವಾದ– ಕುರುವಂಶಕ್ಕೆ ಸೊಸೆಯಾಗಿ ಬಂದ ಯಾವ ಹೆಣ್ಣುಮಗಳೂ ಸಂತೋಷ, ನೆಮ್ಮದಿಯ ಬಾಳು ನಡೆಸಿಲ್ಲ. ಕುರುಕುಲವಧುಗಳೆಲ್ಲರ ಸಂಕಟದ ಬಿಸಿಯುಸಿರೇ ಮೊತ್ತವಾಗಿ ಯುದ್ಧರೂಪದಲ್ಲಿ ಬಂದಿದೆ.

ನನಗಂತೂ ಸುಖದ ದಿನಗಳನ್ನು ಎದುರು ನೋಡುವುದೇ ಹೆಚ್ಚು ಸುಖ ಕೊಟ್ಟಿತು. ಏಕೆಂದರೆ ಸುಖದ ಕ್ಷಣಗಳು ಬಂದವೆನಿಸುವಷ್ಟರಲ್ಲಿ ಯಾರದೋ ಯಾವುದೋ ಕಾರಣಕ್ಕಾಗಿ ಮುಗಿದುಹೋಗಿರುತ್ತಿದ್ದವು. ಹೆತ್ತವರ ಪ್ರೀತಿ ತಿಳಿಯುತ್ತಿರುವಂತೆಯೇ ಸಾಕುಮನೆಯ ಬಿಗಿಭದ್ರತೆಯ ಪರಿಸರ. ಪಾಂಡುರಾಜನ ಮಹಾರಾಣಿ ಎನಿಸುವಷ್ಟರಲ್ಲೇ ಅವನ ಪಟ್ಟತ್ಯಾಗದಿಂದಾಗಿ ವನವಾಸ. ಮಕ್ಕಳು ಬಂದರೆ ಜೊತೆಗೆ ವೈಧವ್ಯ. ಧರ್ಮಜನ ಯುವರಾಜ ಪಟ್ಟದ ನಂತರ ಬಂದ ಎರಡನೆ ವನವಾಸ. ದ್ರೌಪದಿ ವಿವಾಹದ ನಂತರ ಅಲ್ಪ ಕಾಲ– ಇಂದ್ರಪ್ರಸ್ಥದಲ್ಲಿ ರಾಜಮಾತೆಯ ಪಟ್ಟ ಹಿರಿಮಗನ ಅವಿವೇಕದಿಂದಾಗಿ ಕೈಬಿಟ್ಟುಹೊದುದಲ್ಲದೆ ಹೆರವರ ಮನೆಯಲ್ಲಿ ಕೂಳಿಗೆ ಕಾಯುವ ಸ್ಥಿತಿ. ಬಾಳನದಿಗೆ ಮುಖ್ಯ ತಿರುವು ತಂದ ಎಲ್ಲ ಘಟನೆಗಳು ಸ್ತಬ್ಧ ಚಿತ್ರಗಳಾಗಿ ಮನದಲ್ಲಿ ಅಚ್ಚೊತ್ತಿಬಿಟ್ಟಿವೆ. ಗಂಗೆಯಲ್ಲಿ ತೇಲುತ್ತಿದ್ದ ಬುಟ್ಟಿ; ಪಾಂಡು ಮಾದ್ರಿ ಚಿತೆ; ಅರಗಿನ ಮನೆಯ ಬೆಂಕಿಯಿಂದ ಕೆಂಪಾದ ರಾತ್ರಿ; ರಾಜಕುವರಿ ದ್ರೌಪದಿ ವಧುವಾಗಿ ಅವಳ ಸುತ್ತ ನಿಂತಿದ್ದ ಪಾಂಡವರು; ಹಿಗ್ಗಿನ ಒಡಲಲ್ಲೇ ಮೂಡಿಬಂದ ಚಿಂತೆಯ ಮೊಳಕೆಗಳು. ದ್ರೌಪದಿ ಮನೆ ಮನ ತುಂಬಿದ ಅರ್ಧ ತಾಸಿನೊಳಗಾಗಿ ವೈಮನಸ್ಯ– ಧರ್ಮಜನ ಮೊಂಡುವಾದದಿಂದಾಗಿ ವಿಲಕ್ಷಣತೊಡರಾಗಿ–ತಪ್ಪೆಲ್ಲ ನನ್ನದೇ ಎನ್ನುವಂತೆ.

ಹೊರಬಾಗಿಲಿಗೆ ಬೆನ್ನು ಮಾಡಿ ಸೊಪ್ಪು ಬಿಡಿಸುತ್ತಿದ್ದವಳು ಸದ್ದು ಕೇಳಿ ಹಿಂತಿರುಗಿ ನೋಡದೆ ಎಂದಿನಂತೆಯೇ "ಎಲ್ಲರೂ ಹಂಚಿಕೊಳ್ಳಿರಿ" ಎಂದದ್ದೇ–ಮಕ್ಕಳ ಸೀತ್ಕಾರಕ್ಕೆ ಬೆಚ್ಚಿ ಹಿಂತಿರುಗಿದೆ. ಅಪ್ಸರೆಯನ್ನು ನಾಚಿಸುವ, ಹೆಂಗಸರೂ ಮೋಹಿಸುವಂತಿದ್ದ ಹುಡುಗಿ ವಧುವಾಗಿ ಸರ್ವಾಭರಣಭೂಷಿತೆಯಾಗಿ ಸೌಭಾಗ್ಯದ ತೇರಾಗಿ ನಿಂತಿದ್ದಳು. ಹಿಗ್ಗು ಹೊಳೆಯಾಗಿ ಅವಳೆಡೆಗೆ ಹರಿದುಹೋದೆ ನಾನು. ಎದುರಿಗಿದ್ದ ಪುತ್ಥಳಿಯನ್ನು ತೋಳಿನಲ್ಲಿ ತುಂಬಿಕೊಂಡೆ. ಕಣ್ಣಲ್ಲಿ ಸೌಂದರ್ಯರಸವನ್ನು ಹೀರಿಕೊಂಡೆ. ಒಂದೆರಡು ನಿಮಿಷಗಳು ಮನಸ್ಸು ತೃಪ್ತಿಯಾಗುವಷ್ಟು ಹೊತ್ತು ಬಿಗಿದುಕೊಂಡೆ. ಮತ್ತೆ ಮತ್ತೆ ನೋಡುವಂತೆ ಮಾಡುವ ಮುಖ–ಮುಖದಲ್ಲಿನ ತೇಜಸ್ಸು–ಸುಸಂಸ್ಕೃತ ಕನ್ನೆಯ ಮೋಹಕ ದೃಷ್ಟಿ ನನಗಿಲ್ಲದ ಮಗಳ ಸ್ಥಾನವನ್ನು ಆಕ್ರಮಿಸಿಬಿಟ್ಟಳು ದ್ರೌಪದಿ. ಅರ್ಧತಾಸಿನ ಹಿಗ್ಗಷ್ಟೆ ಆಗಲೇ ಕೇಳಿಬಂತು ಧರ್ಮಜನ ಅಪಸ್ವರದ ರಾಗ– "ನೀನಿತ್ತ ಆಜ್ಞೆ ನಡೆಸಬೇಕೆಂದರೆ ಇವಳನ್ನು ನಾವೆಲ್ಲರೂ ಮದುವೆಯಾಗಬೇಕು"...

"ಅದು ಹೇಗೆ ನನ್ನ ಆಜ್ಞೆಯಾದೀತು? ಎಂದಿನಂತೆಯೇ ಇವತ್ತು ತಂದುದನ್ನು ಹಂಚಿಕೊಳ್ಳಿರೆಂದು ಹೇಳಿದ್ದು ದಿನನಿತ್ಯದ ಭಿಕ್ಷೆಗೇ ಹೊರತು ಜನುಮಕ್ಕೊಂದು ಸಲ ಒಬ್ಬರಿಗೇ ಮೀಸಲಾದ ವಧುವನ್ನಲ್ಲ. ಇದು ಕುಚೋದ್ಯ ಮಾಡುವ ಹೊತ್ತೇ? ಎದುರು ಬರದೆ ನನ್ನ ಬೆನ್ನಿಗೇ ನಿಂತಿರೇಕೆ?"–ಇನ್ನೂ ಏನೇನು ಒದರುತ್ತಿದ್ದೆನೋ–ಆಗವನ ಕಣ್ಣಲ್ಲಿ ಇಣುಕಿದವಳೇ ಬೆಚ್ಚಿಬಿದ್ದೆ. ದೃಷ್ಟಿಯಲ್ಲೇ ಧರ್ಮಜ ತನ್ನ ಮನದೊಳಗಿನದನ್ನು ಉಗುಳುತ್ತಿದ್ದ. ಅಲ್ಲಿ ಕಂಡದ್ದು ನನ್ನನ್ನು ಮೂಕಳನ್ನಾಗಿಸಿತು. ರೂಪವಂತೆ ದ್ರೌಪದಿ ತನ್ನವಳಾಗಬೇಕೆಂಬ ಹಂಬಲ; ಹಿರಿಯವನಾದರೂ ತಾನಿನ್ನೂ ಅವಿವಾಹಿತನಾಗಿಯೆ ಉಳಿದಿರುವ ಬಗ್ಗೆ ಕಾತರ; ತಾನೇ ವಧುವನ್ನು ಗೆದ್ದು ತರಲಾರೆನೆಂಬ ಅಸಹಾಯಕತೆ; ತಮ್ಮ ಭೀಮನಾಗಲೇ ತಂದೆಯಾದ; ಅರ್ಜುನನೀಗ ಗೆದ್ದು ತಂದ–ನನಗಾರು–ತಾವೇ ಕೊಡಲು ಮುಂದೆ ಬಂದಾರು ಎಂಬ ಸಂದೇಹ; ವಧುವನ್ನು ಹುಡುಕಿ ತಂದು ತನಗೆ ವಿವಾಹ ಮಾಡಿಸುವ ಯತ್ನ ನನ್ನಲ್ಲಿ ಹಿರಿಯರಲ್ಲಿ ಇಲ್ಲವೆಂಬ ಆಪಾದನೆ–ಇನ್ನೂ ಏನೇನಿತ್ತೋ ಅವನ ನೋಟದ ಭರ್ತ್ಸನೆ ತಾಳಲಾಗದೆ ನಾನೇ ಕಣ್ಮುಚ್ಚಿದೆ. ಮಿಕ್ಕ ನಾಲ್ವರನ್ನು ದೃಷ್ಟಿಸಿದೆ. ಎಲ್ಲರಲ್ಲೂ ದ್ರೌಪದಿಯ ಬಗೆಗಿದ್ದ ಮೆಚ್ಚುಗೆ ಬಯಕೆಯಾಗಿ ತಿರುಗುವುದರಲ್ಲಿ ಸಂದೇಹವಿಲ್ಲದಂತಾಗಿತ್ತು. ಧರ್ಮಜನ ಮಾತಿನ ಗೂಢಾರ್ಥ ಅರಿವಾಗುತ್ತಿದ್ದಂತೆ ಅವನು ನನ್ನನ್ನೆಂತಹ ವಿಷಮ ನಿರ್ಧಾರಕ್ಕೆ ಕತ್ತು ಹಿಡಿದು ತಳ್ಳುತ್ತಿದ್ದಾನೆ ಎನಿಸಿತು. ಅವನಂತೆ ನಾನು ಹೋಗದಿದ್ದರೆ ಪರಿಣಾಮಕ್ಕೆ ನಾನೇ ಹೊಣೆ ಎಂಬಂತಹ ಕೆಣಕುನೋಟದ ಆಹ್ವಾನವಾಗಿತ್ತು.

ವಿಧಿ ನನ್ನನ್ನು ಎಂತಹ ಇಕ್ಕಟ್ಟಿನ ಸನ್ನಿವೇಶದಲ್ಲಿ ನಿಲ್ಲಿಸಿತ್ತು! ಲೋಕರೂಢಿಯಂತೆ ಅರ್ಜುನನಿಗೆ ಮಾತ್ರವೆಂದು ನಿರ್ಧರಿಸಿದೆನಾದರೆ ಧರ್ಮಜ ದೂರವಾಗುತ್ತಿದ್ದ. ಹಿರಿಯವನ ಮೂಲಕವಲ್ಲವೇ ನಾನು ಐವರನ್ನು ಒಟ್ಟುಗೂಡಿಸಿಟ್ಟಿದ್ದದ್ದು. ಅಂದಿನ ನಮ್ಮ ಸ್ಥಿತಿಯಲ್ಲಿ ಏನಕೇನ ಪ್ರಕಾರೇಣ ಇವರೈವರ ಒಗ್ಗಟ್ಟು ಕಾಪಾಡಬೇಕಿತ್ತು. ಇಲ್ಲವಾದರೆ ಧೃತರಾಷ್ಟ್ರಾದಿಗಳು ಪಾಂಡುವಿನ ಮಕ್ಕಳನ್ನು ಉಳಿಯಲು ಬಿಡುತ್ತಿದ್ದರೇ? ನಾನೇ, ಹೆಣ್ಣಾಗಿಯೂ ಐವರನ್ನು ಮದುವೆಯಾಗೆಂದು ಮತ್ತೊಂದು ಹೆಣ್ಣನ್ನು ಕೇಳಿಕೊಳ್ಳುವಂತೆ ಪರೋಕ್ಷವಾಗಿ ಬಲವಂತ ಮಾಡಿದ ಧರ್ಮಜ–ಅವನ ಬಗೆಗೆ ನನಗಾವ ಭಾವನೆ ಉಳಿಯಲು ಸಾಧ್ಯ? ಲೋಕಧರ್ಮಕ್ಕನುಸಾರವಾಗಿ ನಡೆಯಲು ಹೊರಗಿನ ಯಾವುದೇ ಯಾರದೇ ಒತ್ತಾಯವಿಲ್ಲದೆ ಅವನಂತರಾಳದ ಬಯಕೆ ತೀರಿಸಿಕೊಳ್ಳಲು ಅವಕಾಶ–ತಿಳಿಯದೇ ಆಡಿದ್ದ ನನ್ನ ಮಾತುಗಳು ಅವನಿಗೀಗ ವೇದವಾಕ್ಯವಾಗಿ ಹೋಯಿತು.

ಇದೇ ರೀತಿಯ ಮತ್ತೊಂದು ಸ್ತಬ್ಧಚಿತ್ರ–ಅದು ಇನ್ನೂ ದಾರುಣವಾಗಿತ್ತು. ನನ್ನ ಜೀವಮಾನವೆಲ್ಲ ಹೀಗೆಯೇ ಬೇರೊಬ್ಬರು ಹಾಕಿದ ತಿಪ್ಪೆಯನ್ನು ಸಾರಿಸುವುದೇ ಆಗಿದೆಯಲ್ಲ!

ನನ್ನೆದುರು ನಾನೇ ಬೆಳೆಸಿದ ಪಾಂಡು ಸಂಸಾರ. ಐವರು ಪುತ್ರರತ್ನರು! ಮತ್ತವರ ಮಡದಿ ದ್ರೌಪದಿ. ದ್ರೌಪದಿಯ ಬೆನ್ನಮೇಲೆ ಹರಡಿ, ಬಿಚ್ಚಿದ್ದ ಮುಡಿ; ಕೆಂಪಾಗಿ ಊದಿಕೊಂಡಿದ್ದ ಕಣ್ಣರೆಪ್ಪೆಗಳು; ಬಿಗಿದುಕೊಂಡು ಬಿಳಿಚಿದ್ದ ಎರಡೂ ಮುಷ್ಟಿಗಳು; ಕ್ಷಣಕ್ಷಣಕ್ಕೂ ಬಿಕ್ಕಳಿಸಿ

ನಡುಗಿ ನಿಲ್ಲುತ್ತಿದ್ದ ಭುಜಗಳು. ಮಕ್ಕಳೂ ನಿಂತಿದ್ದರು ತಲೆತಗ್ಗಿಸಿ; ಏನಾಯಿತೆಂದರೆ ಉತ್ತರವಿಲ್ಲ. ಕಣ್ಣಿಗೆ ಕಣ್ಣು ಜೋಡಿಸಿ ಮಾತನಾಡುವ ಧೈರ್ಯವಿಲ್ಲ. ನಾಲ್ವರು ಬುಸುಗುಡುತ್ತಿದ್ದರೆ ಧರ್ಮಜ ತಣ್ಣಗೆ ಕತ್ತು ಬಗ್ಗಿಸಿ ಬೆನ್ನ ಹಿಂದೆ ಕೈಕಟ್ಟಿದ್ದ.. ಅದೇ ನಾನು, ಅದೇ ದ್ರೌಪದಿ, ಅದೇ ಪಾಂಡವರು–ಏನು ಅಂತರ! ಏಕಚಕ್ರಪುರದಲ್ಲಿ ನವ ವಧುವಾಗಿ ನಮಸ್ಕರಿಸಿದವಳನ್ನು ಅಪ್ಪಿದ್ದ ಕುಂತಿ ಸಂಭ್ರಮಿಸಿದ್ದೆ. ಇಂದು ಅದೇ ದ್ರೌಪದಿ ದುಃಖದ ಮಡುವಾಗಿದ್ದವಳನ್ನು ಅಪ್ಪಿದೊಡನೆಯೇ ಅವಳ ಒಡಲಾಳದಿಂದ ಮೇಲೇರಿ ಬರುತ್ತಿದ್ದ ಉಮ್ಮಳದ ಬಿಕ್ಕಳಿಕೆ ಸುಳಿಸುಳಿದು ಆಡುತ್ತಿದ್ದ ಮೌನರೋದನದ ಅನುಭವ–ನನ್ನ ಹೊಟ್ಟೆಯಲ್ಲೂ ದಿಗಿಲಿನ ನಡುಕದ ಅನುಭವ. ಆ ಹೊತ್ತು ಏಕಚಕ್ರಪುರದ ಮನೆಯಲ್ಲಿ ನವವಧು ದ್ರೌಪದಿಯ ಕಣ್ಣಲ್ಲಿ ಪ್ರೀತಿ, ಜೀವನೋತ್ಸಾಹ ತುಂಬಿತುಳುಕಿ ನಮ್ಮೆಲ್ಲರಿಗೂ ಹಂಚಿದರೆ ಹಸ್ತಿನಾವತಿಯ ರಾಜಗೃಹದ ಬಾಗಿಲಲ್ಲಿ ಅವಳ ಕಣ್ಣಲ್ಲಿದ್ದುದು ಒಂದೇ ಒಂದು ಭಾವನೆ. ಸೇಡು. ಇಡೀ ಕುರುಕುಲವನ್ನೇ ಆರ್ಯಪ್ರಪಂಚವನ್ನೇ ಸ್ವಾಹಾ ತೆಗೆದುಕೊಳ್ಳುವ ಯಾಜ್ಞಸೇನಿಯಾಗಿ ಧಗಧಗಿಸುತ್ತಿದ್ದಳು. ಅದೇ ಅಗ್ನಿ ಇಂದಿಗೂ ಅಷ್ಟೇ ಉಗ್ರತೆಯಲ್ಲಿ ಉರಿದೇಳುತ್ತಿದೆಯಲ್ಲ. ಹದಿಮೂರು ವರ್ಷದ ಕಷ್ಟಕಾರ್ಪಣ್ಯ, ಧರ್ಮಜ, ಜಯದ್ರಥ, ಕೀಚಕ, ಸುಧೇಷ್ಣೆಯರ ಪೀಡನೆಗಳೇ ಅವಳ ಸೇಡಿನ ಯಜ್ಞಕ್ಕೆ ಆಗಾಗ್ಗೆ ಅಜ್ಯ ಹೊಯ್ಯುತ್ತಿದ್ದವೇನೋ.

ಕಾಡಿನಲ್ಲಿ ಪರನಾಡಿನಲ್ಲಿ ಪರದೇಶಿಗಾಳಾಗಿದ್ದವರು ದ್ರೌಪದಿಯ ವಿವಾಹದೊಂದಿಗೆ ದ್ರುಪದರಾಜನ ಸಹಾಯ ಪಡೆದ ನಂತರ ವಾಸುದೇವನ ಸಲಹೆಯಂತೆ ನಾವೆಲ್ಲ ಸೇರಿ ಏನೇನು ಗಳಿಸಿದ್ದೆವೋ ಅವನ್ನೆಲ್ಲ ಒಂದೇ ಬಾರಿಗೆ ಇಲ್ಲವಾಗಿಸಿ ಮನೆಗೆ ಬರಿಗೈಲಿ ಬಂದಿದ್ದ ಧರ್ಮಜ. ಎಲ್ಲವನ್ನು ಜೂಜಾಡಿ ಸೋತು ಜೂಜುಗಾರ ಧರ್ಮರಾಯ ಎನಿಸಿಕೊಂಡು ಬಂದ. ಅರ್ಜುನ ಸ್ಪರ್ಧೆಯಲ್ಲಿ ಗೆದ್ದು ವರಿಸಿ ಮನೆತುಂಬಿದ ದ್ರೌಪದಿಯನ್ನು ತಾನು ಪಣವಾಗಿಟ್ಟು ಸೋತದ್ದೇ ಅಲ್ಲದೆ, ದುಶ್ಯಾಸನ ಅವಳ ಸೀರೆಗೇ ಕೈಹಾಕಿ ಕೂದಲು ಹಿಡಿದು ಎಳೆದಾಡಿದಾಗಲೂ ದುರ್ಯೋಧನ ಕರ್ಣರ ಅಪಹಾಸ್ಯ, ಶೀಲಗೆಟ್ಟ ವರ್ತನೆಗೂ ಕೋಪಗೊಳ್ಳದೇ ಧರ್ಮದ ಹೆಸರು ತೆಗೆದುಕೊಂಡು ಕೈಕಟ್ಟಿ ನಿಂತಿದ್ದನಂತೆ ಈ ಮಗಧೀರ! ಅಷ್ಟೇಕೆ, ಭೀಮ ಕೋಪದಿಂದ ಮೇಲೆದ್ದರೆ ಕೈ ಹಿಡಿದು ಕೂರಿಸಿದನಂತೆ. ತಮ್ಮಂದಿರಲ್ಲಿ ಮತ್ತು ದ್ರೌಪದಿಯ ಮನದಲ್ಲಿ ತನ್ನ ಬಗ್ಗೆ ತಿರಸ್ಕಾರ, ಕೌರವರ ಬಗ್ಗೆ ಕಡುದ್ವೇಷ, ಹಿರಿಯರೆನಿಸಿಕೊಂಡವರಲ್ಲಿ ಅಪನಂಬಿಕೆ ಸಂಶಯ ತುಂಬಿಸಿಕೊಂಡು ಬಂದ. ಅವನಂತರಾಳದಲ್ಲಿ ಏನಿತ್ತೋ ತೋರಗೊಡಲಿಲ್ಲ. ಏಕೆ ಹೀಗೆ ಮಾಡಿದೆಯೆಂದರೆ "ವಿಧಿ ಬರೆದದ್ದು ತಪ್ಪಿಸಲು ನಾನಾರು? ಎಲ್ಲ ಹಣೆಯ ಬರಹ" ಎಂಬ ತಾತ್ವಿಕ ಸಾಂತ್ವನ ತನಗೆ ತಾನೇ ಕೊಟ್ಟುಕೊಂಡ, ಇವನಾಡಿದ ಆಟಕ್ಕೆ ಎಲ್ಲರೂ ತಲೆಬಾಗಿ ಸೈರಿಸಿಕೊಳ್ಳಬೇಕಾಗಿತ್ತಂತೆ. ಇವನು ಹೀಗಾಗುವುದಕ್ಕೆ ನಾನೇ ಕಾರಣಳೇನೋ! ಮುಜುಗರವಾಗತ್ತೆ, ಅಂದು ಇವನ ತಾಯಿ ಎನಿಸಿಕೊಳ್ಳಲು ನನಗೇ ಹೀನಾಯವಾಗಿತ್ತು.

ಧರ್ಮಜನದ್ದು ವಿಚಿತ್ರ ಸ್ವಭಾವ. ಎಲ್ಲವೂ ತರ್ಕಬದ್ಧ. ಧರ್ಮದ ಪರಿಧಿಯೊಳಗೇ ಆದರೂ ಏನೋ ಕಸರು–ಕಡಿಮೆ ಕೊಂಕು. ಅವನಲ್ಲಿ ಮಾನವೀಯ ಗುಣಗಳೇ ಇಲ್ಲವೇನೋ

ಅನ್ನಿಸುವಂತೆ. ಧರ್ಮದ ಹೆಸರಿನಲ್ಲಿ ತನಗೆ ಬೇಕಾದ್ದನ್ನು ಪಡೆದುಕೊಳ್ಳುವ ಚಾಣಾಕ್ಷತೆ. ಹಿರಿಯನೆಂಬ ದರ್ಪ ತಮ್ಮಂದಿರ ಮೇಲೆ. ಅವನು ಹೇಳಿದಂತೆ ಭೀಮನಾದಿಯಾಗಿ ಎಲ್ಲರೂ ಕೇಳಬೇಕು. ಐವರಲ್ಲಿ ಐಕ್ಯ ಸಾಧಿಸಲು "ಹಿರಿಯವ ತಂದೆಯಂತೆ. ಅವನು ಹೇಳಿದಂತೆ ನೀವೆಲ್ಲ ಕೇಳಬೇಕು" ಎಂದು ಕಿರಿಯರಿಗೆ ನಾನೇ ಹೇಳಿ ಹೇಳಿ ಅವರನ್ನು ಅಂಕೆಯಲ್ಲಿಡಲು ಧರ್ಮಜನನ್ನು ಗರುಡಮಚ್ಚೆಯಂತೆ ಉಪಯೋಗಿಸಿದೆ, ನಿಜ. ಇವನಾದರೋ ಗರುಡನ ಗುಣ ಬೆಳೆಸಿಕೊಳ್ಳದೆ ಬರೇ ಮಚ್ಚೆಯಾಗೇ ಉಳಿದನೇನೋ. ಒಟ್ಟಾರೆ ಮಗನಾಗಿಯೂ ಮಗನಂತಿರದೆ ಸರಿಸಾಟಿಯಾಗೇ ನಿಂತವನು.

ಕೈಬೆರಳೆತ್ತದೇ ತಮ್ಮಂದಿರ ಮೇಲೆ ರಾಜತನ ನಡೆಸುವವ ಧರ್ಮಜ. ಇದೇ ಜೋರು ಗಮ್ಮತ್ತು ಉಪಯೋಗಿಸಿ ದುರ್ಯೋಧನಾದಿಗಳನ್ನೇಕೆ ಎದುರಿಸಲಿಲ್ಲ? ಹಿಂದೆ ಸರಿದುಬಿಡುತ್ತಿದ್ದ. ಧರ್ಮಜನ ಮೇಲೆ ನನಗೆ ಏಕೀ ಭಾವನೆ? ಪಾಂಡುವಿನ ಬಲವಂತದ ಮೇಲೆ ನಿಯೋಗದಲ್ಲಿ ಹುಟ್ಟಿದ್ದರಿಂದ ಪಾಂಡುವಿನ ಮೇಲಿನ ಕೋಪ ಇವನ ಮೇಲಿರಲಿಕ್ಕೆ ಸಾಕು. ಸಂತೆಮೊಂಡನಂತೆ ತನ್ನ ಮೇಲೆ ತಾನೇ ಚಾಟಿ ಬೀಸಿಕೊಂಡು ಕೇಳಿದ್ದನ್ನು ಕೊಡುವ ತನಕ ಬಿಡಲೊಲ್ಲದ ವಿಧಾನ ಚಿಕ್ಕಂದಿನಿಂದಲೇ! ಭೀಮನಂತೆ ಬಲವಿಲ್ಲ, ಅರ್ಜುನನಂತೆ ಚುರುಕುಬುದ್ಧಿ, ಶಸ್ತ್ರಕೌಶಲವಿಲ್ಲ, ನಕುಲ ಸಹದೇವರಂತೆ ರೂಪವಾಗಲೀ, ಅವರಲ್ಲಿದ್ದ ಬಾಲಸಹಜ ಸರಳತೆಯಾಗಲೀ ಇಲ್ಲ–ಇದ್ದುದೆಲ್ಲ ಒಂದೇ–ಧರ್ಮದ ಬಗ್ಗೆ ಓದಿ ಓದಿ ತಿಳಿದಿದ್ದ ನೀತಿ ನಿಯಮಗಳು, ಕಥೆ ಪ್ರಸಂಗಗಳು–ತನಗೆ ಬೇಕಾದಂತೆ ತಿರುಚಿ ಅದಕ್ಕೊಂದು ಸಾಮತಿ ಹಾಕುವ ಜಾಣ್ಮೆ ಅವನಿಗೇ ಅನಿಸಿರಬೇಕು–ತನ್ನಲ್ಲಿದ್ದ ಕೊರತೆಗಳನ್ನು ಮುಚ್ಚಿಹಾಕಲು, ತುಂಬಿಕೊಳ್ಳಲು ಧರ್ಮದ ಸೆರಗು ಹಿಡಿದ. ಕ್ಷತ್ರಿಯ–ರಾಜ ಪೌರುಷವನ್ನು ಧರ್ಮದ ಮೂಲಕ ಮರೆಯಲು ಪ್ರಯತ್ನ ನನ್ನ ಮಗನ ಮೇಲೇ ನನಗೀ ಪರಿಯ ಭಾವನೆ ಸರಿಯಲ್ಲ, ಗೊತ್ತು–ಅದರೇನು? ನಮ್ಮ ಸಂಸಾರಕ್ಕಾದ ಅವಗಢಗಳಿಗೆಲ್ಲ ಮೂಲ ಇವನೇ!

ದುರ್ಯೋಧನನ ಅಧರ್ಮವಷ್ಟೋ ಧರ್ಮಜನ ಆರ್ಯಧರ್ಮಪಾಲನೆಯೂ ಅಷ್ಟೇ ಕಾರಣ ಈ ಮಹಾಯುದ್ಧ ನಡೆಯಲಿಕ್ಕೆ ಅನ್ನಿಸುವುದು. ಅದೇ ಭೀಮನದು, 'ಮಾನವ ಧರ್ಮ', ನನ್ನ ಹಾಗೆ ಅವನಿಗೂ ಆರ್ಯಧರ್ಮ ಎಂದೊಡನೆ ಅಸಹನೆ. ಉರಿದುರಿದು ಬೀಳುತ್ತಾನೆ. ಯುದ್ಧದ ಬಗ್ಗೆ ಯಾವುದೇ ನಿರ್ಧಾರ ಮಾಡಲು ಈಗೀಗ ಭೀಮಾರ್ಜುನರದ್ದೇ ಕೈಮೇಲಂತೆ. ವಾಸುದೇವನ ಕೈವಾಡವಲ್ಲದೆ ಮತ್ತೇನು? ಧರ್ಮಜ ಈಗ ಉತ್ಸವಮೂರ್ತಿಯಷ್ಟೆ ಒಳಗಿನ ಬಲವೆಲ್ಲ ವಾಸುದೇವನೂ ಸೇರಿದಂತೆ ಮಿಕ್ಕವರದು. ಧರ್ಮಜನಿಂದ ಒದಗಿದ ಹನ್ನೆರಡು ವರ್ಷಗಳ ವನವಾಸ, ಮೇಲೊಂದು ವರ್ಷ ಅಜ್ಞಾತವಾಸದ ಅನುಭವ ಮಿಕ್ಕ ನಾಲ್ವರಿಗೆ, ದ್ರೌಪದಿಗೆ ಚಳ್ಳೆಹಣ್ಣು ತಿನ್ನಿಸಿದೆ. ಅವರೂ ಎಷ್ಟೆಂದು ತಾಳುವರು? ತಾಳಲಿಕ್ಕೇನು ತಾಯಿ ಕುಂತಿಯೇ? ಪಾತಕಿ ಜಯದ್ರಥನನ್ನು ಬಿಟ್ಟುಕೊಟ್ಟಿದ್ದು, ದುರ್ಯೋಧನನನ್ನು ಗಂಧರ್ವರಿಂದ ಬಿಡಿಸಿಕೊಂಡುದು, ಕೀಚಕನ ಉಪಟಳ ಸಹಿಸಿಕೊಂಡಿರಬೇಕೆನ್ನುವುದು ಹೀಗೆಯೇ ಹಲವಾರು ಸಲ 'ಸಾಧುವಲ್ಲ'ವೆನ್ನುತ್ತ ಸೈರಿಸಿಕೊಳ್ಳಿರೆಂದು ಹೇಳಿದನಂತೆ. ಭೀಮ

ಕೋಪದಲ್ಲಿ ಅಣ್ಣನ ತೋಳು ಕಿತ್ತುಹಾಕದೆ ಹೇಗೆ ಸುಮ್ಮನಿದ್ದನೋ ಆಶ್ಚರ್ಯ! "ಕಾಡಿನಲ್ಲಿ ಎಷ್ಟು ನೆಮ್ಮದಿಯಿದೆ. ಋಷಿಮುನಿಗಳ ಸಾಂಗತ್ಯವೂ ದೊರಕಿದೆ. ಹೀಗೇ ಏಕೆ ಜೀವನ ನಡೆಸಬಾರದು?" ಎಂದೂ ಕೇಳಿದನಂತೆ. ಆಗೆಲ್ಲ ದ್ರೌಪದಿಯ ಬಿಚ್ಚುಕೂದಲು, ಮಿಕ್ಕ ನಾಲ್ವರು ತೊಟ್ಟ ಶಪಥಗಳನ್ನು ಜ್ಞಾಪಿಸಿ ಅವನನ್ನು ಹೇಡಿತನದಿಂದ ಮೇಲಕೆತ್ತಿ... ಹಲವಾರು ಸಲ ದ್ರೌಪದಿ ಮತ್ತು ಭೀಮ ಧರ್ಮಜನನ್ನು ಹೀನಾಮಾನವಾಗಿ ಹೀಯಾಳಿಸಿಯೂ ಆಯಿತಂತೆ. ಅವನ ಮೇಲಿನ ಕೋಪವನ್ನು ಅವರೂ ತೋರಿಸದೆ ಎಷ್ಟೆಂದು ನುಂಗಿಯಾರು?

ಹದಿಮೂರು ವರ್ಷದ ಪಡಿಪಾಟಲು ತಂದ ಒಂದು ಸಮಾಧಾನದ ಸುದ್ದಿ ಎಂದರೆ ವಿರಾಟರಾಜನ ಮಗಳು ಉತ್ತರೆ ಮತ್ತು ಅಭಿಮನ್ಯುವಿನ ವಿವಾಹದೊಡನೆ ಸಿಕ್ಕ ವಿರಾಟನ ಸೈನ್ಯಬಲ. ಅಜ್ಞಾತವಾಸದ ಅಂತ್ಯಕ್ಕೆ ಸರಿಯಾಗಿ ಕಾಲೂರಿ ನಿಲ್ಲಲೊಂದು ನೆಲೆ ವಿರಾಟನ ಊರು. ಅಲ್ಲಿಗೆ ದೃಷ್ಟದ್ಯುಮ್ನನೂ ಬಂದಿರುವುದು ಸಮಾಧಾನದ ಸಂಗತಿ.

ವಿರಾಟನರಮನೆಗೆ ವಾಸುದೇವ ಬಂದಮೇಲೆ ಧರ್ಮಜನಿಗೆ ಧೈರ್ಯ ತುಂಬಿ "ನಾವೆಲ್ಲ ನೋಡಿಕೊಳ್ಳುತ್ತೇವೆ. ನೀನು ಗಾಬರಿಯಾಗಿ ಹಿಂಜರಿಯದಿದ್ದರೆ ಸಾಕು. ನೀನು ಬೇಕಿದ್ದರೆ ಬಿಡಾರದಲ್ಲೇ ಇರು. ರಥವನ್ನೇರದಿದ್ದರೂ ಸರಿ. ನಾವು ಯುದ್ಧಮಾಡುತ್ತೇವೆ. ನಿನಗೆ ಮಹಾರಾಜ ಪಟ್ಟ ಶತಸಿದ್ಧ" ಎಂದೆಲ್ಲ ಹೇಳಿದಮೇಲೆ... ಈಗೀಗ ಭೀಮನ ಒಂದು ಕೆಂದುನೋಟ- ಒಂದು ಹೂಂಕಾರಕ್ಕೆ ಧರ್ಮದ ಮಾತು ತೆಗೆಯದೆ ಧರ್ಮಜ ಸುಮ್ಮನಾಗುವುದು ನಡೆದಿದೆಯಂತೆ. ಭೀಮ, ಅರ್ಜುನ, ದೃಷ್ಟದ್ಯುಮ್ನರೊಡನೆ ಮಂತ್ರಾಲೋಚಿಸಿ ಯುದ್ಧದ ತಯಾರಿ ನಡೆಸಿದ್ದಾನೆ ವಾಸುದೇವ. ಎಲ್ಲ ನಿರ್ಣಯಗಳಿಗೂ ಧರ್ಮಜನ ಮುದ್ರೆ ಬೀಳುವುದಂತೆ. ಧರ್ಮಜ ಇಷ್ಟರಮಟ್ಟಿಗೆ ಕಾದಾಡಲು ನಿಂತಿರುವನೆಂದರೆ ವಾಸುದೇವ ಮಹಾ ಪ್ರಚಂಡ. ಮನೋಬಲ ಉಳ್ಳವನಿಂದಲೇ ತಾನೇ! ಬೇರೆಯವರೂ ಮನಸ್ಥೈರ್ಯ ಪಡೆಯುವುದು! ಬರೇ ಧರ್ಮಜನಿಗೇ ಏಕೆ ಮಿಕ್ಕೆಲ್ಲರಿಗೂ ಅದೇ ಸ್ಥೈರ್ಯ-ವೀರ್ಯ ಕೊಟ್ಟಿದ್ದಾನೆ. ಜೊತೆಗೆ ದ್ರೌಪದಿಯ ಸ್ತ್ರೀಶಕ್ತಿಯೂ ಸೇರಿರುವುದು ಧರ್ಮಜನಿಗೆ ಬೇರೆ ಮಾರ್ಗವೇ ಇಲ್ಲವಾಗಿರಲು ಸಾಕು.

ಕ್ಷತ್ರಾಣಿಯ ಮಗನಾಗಿ ಹುಟ್ಟಿದರೂ ರಕ್ತ ಕಂಡರೇ ಕಂಗಾಲಾಗಿಬಿಡುವ ಧರ್ಮಜನನ್ನು ರಾಜ್ಯಕ್ಕಾಗಿ ಹೋರಾಡುವಂತೆ ಉತ್ತೇಜಿಸಿ, ಹಿಂಜರಿಯದಂತೆ ನೋಡಿಕೊಳ್ಳುವುದೇನು ಸುಲಭದ ಕೆಲಸವೇ? ವನವಾಸ ಅಜ್ಞಾತವಾಸದಲ್ಲಿನ ಧರ್ಮಜನ ಮನೋಭಾವ, ವರ್ತನೆಗಳನ್ನು ವಾಸುದೇವನ ಮಾತಿನಲ್ಲೇ ಕೇಳಿದಾಗಿನಿಂದಲೂ ಮನಸ್ಸಿನ ಮೂಲೆಯಲ್ಲಿ ಮುದುರಿಕೊಂಡಿದ್ದ ಆತಂಕ ಮತ್ತೆ ತಲೆಯೆತ್ತಿದೆ. ತಮ್ಮಂದಿರು ಬಂಧುಗಳೆಲ್ಲ ಸೇರಿ ಯುದ್ಧ ಜಯಿಸಿ ಇವನಿಗೆ ರಾಜ್ಯ ತಂದುಕೊಟ್ಟರೂ ಅದನ್ನು ಉಳಿಸಿಕೊಳ್ಳುವನೋ ಇಲ್ಲವೋ? ಧರ್ಮಾವತಾರನೆನಿಸಿ ಕೊಳ್ಳಲು ದುರ್ಯೋಧನನಿಗೇ ದಾನಮಾಡಿಬಿಡುವನೇನೋ!

ತಮ್ಮಂದಿರ ವಿಧೇಯತೆಯನ್ನು ಉಪಯೋಗಿಸಿಕೊಂಡ ಅಗ್ರಜನ ವಿಪತ್ಕಾರೀ ಸಂಧಿ

ಪ್ರಸ್ತಾವನೆ "ಕೇವಲ ಐದು ಗ್ರಾಮಗಳನ್ನು ಕೊಟ್ಟರೂ ಸಾಕು. ನಾವು ಯುದ್ಧಮಾಡುವುದಿಲ್ಲ", ಭಿಕ್ಷೆಗಾಗಿ ಗೋಗರೆಯುವ ರೀತಿ ಕ್ಷತ್ರಿಯ ಸರೀಕರಲ್ಲಿ ತಿರಸ್ಕಾರ ತರುವಂತಹ ಹೇಡಿತನವಾಗಿ ಕಾಣುವುದೆಂದು ಧರ್ಮಜನಿಗೇಕೆ ತಿಳಿಯುವುದಿಲ್ಲವೋ? ನನ್ನ ಮನದಾಳದ ಅಳಲನ್ನು ಓದಿಕೊಂಡವನಂತೆ ಕೇಳಿದ ವಾಸುದೇವ, "ನಿನ್ನ ಮಕ್ಕಳಿಗೆ ಏನಾದರೂ ಹೇಳುವುದಿದೆಯೇ? ನಾನು ನಿನ್ನ ಸಂದೇಶ ಒಯ್ಯುತ್ತೇನೆ", ಸೂಕ್ಷ್ಮ ಬುದ್ಧಿಯ, ಅಷ್ಟೇ ಮೃದು ಹೃದಯದ ನನ್ನ ಅಳಿಯ ವಾಸುದೇವ! ಬೇರೆಲ್ಲರ ಒತ್ತಾಯ ಬೆಂಬಲದೊಂದಿಗೆ ತಾಯಿಯಾದ ನನ್ನ ಅಣತಿಯೂ ಸೇರಿದರೆ ಒಳಿತೇನೋ–ಎಷ್ಟು ಉಪಾಯವಾಗಿ ನನ್ನ ಬುದ್ಧಿಗೆ ಬಡಿದಿದ್ದ ನಿರಾಶೆ ತೊಡೆದು, ನನ್ನ ಆತಂಕಕ್ಕೆ ಸಕಾರಾತ್ಮಕ ತಿರುವು ಕೊಟ್ಟ–ನಾನು ಯೋಚಿಸಿ ಹೇಳಿದ್ದು..... "ವಾಸುದೇವ, ನೀನು ಎರಡೂ ಕಡೆಯವರ ಸ್ವಭಾವ ಮನಸ್ಥಿತಿಗಳನ್ನು ಚೆನ್ನಾಗಿ ಬಲ್ಲವನು. ಒಳ ಆಸೆಯೇನು ಎಂಬುದು ನಿನಗೆ ಗೊತ್ತು. ನಿಭಾಯಿಸುವೆಯೆಂದೂ ಗೊತ್ತು. ನನ್ನ ಮನಶ್ಶಾಂತಿಗಾಗಿ ಈ ಸಂದೇಶ–ಅಂದು ದ್ಯೂತದ ದಿನ ರಾಜಸಭೆಯಲ್ಲಿ ಅವರು ತೊಟ್ಟ ಶಪಥಗಳನ್ನು ಪಾಂಡವರಿಗೆ ಜ್ಞಾಪಿಸು. ಧರ್ಮಜನಿಗೆ ಹೇಳು–ಕ್ಷತ್ರಿಯಧರ್ಮವನ್ನು ಹಿಡಿ; ಈಗ ನೀನು ಹೋಗುತ್ತಿರುವ ದಾರಿ ನಿನ್ನ ತಂದೆ ತಾತಂದಿರೇ ಮುಂತಾದ ರಾಜರ್ಷಿಗಳು ಹೋಗುತ್ತಿದ್ದ ದಾರಿಯಲ್ಲ. ರಾಜಧರ್ಮಾನುಸಾರವಾಗಿ ಯುದ್ಧ ಮಾಡು! ನಿನ್ನ ಪಿತೃಗಳನ್ನು ಅಧೋಗತಿಗೆ ತಳ್ಳಿ ನೀನೂ ನಿನ್ನ ತಮ್ಮಂದಿರೂ ಕ್ಷೀಣಪುಣ್ಯರಾಗಿ ದುರ್ಗತಿ ಪಡೆಯಬೇಡಿ. ನಿನ್ನನ್ನು ಹೆತ್ತ ತಾಯಿ ನೀನಿರುವಾಗಲೇ ಒಂದು ತುತ್ತು ಅನ್ನಕ್ಕೆ ಅನ್ಯರ ಕೈಕಾಯಬೇಕಾಗಿದೆ. ಕೈಹಿಡಿದ ಹೆಂಡತಿ ಅವಮಾನದಲ್ಲಿ ಕೊರಗಿ ನವೆಯುತ್ತಿದ್ದಾಳೆ ಎಂಬುದು ಜ್ಞಾಪಕವಿರಲಿ! ಎಂದು ಎಲ್ಲರೆದುರಿಗೆ ಹೇಳು. ಶತ್ರುವಿಗೆ ಸೋತು ಬಂದು ಮಲಗಿಬಿಟ್ಟಿದ್ದ ತನ್ನ ಮಗ ಸಂಜಯನನ್ನು ವಿದುಲೆಯು ಹುರುದುಂಬಿಸಿ ಯುದ್ಧಮಾಡಿಸಿದ ಉಪಾಖ್ಯಾನವನ್ನು ಉದಾಹರಿಸು. ಹುಡುಗರನ್ನು ಕಾಪಾಡಿಕೊ. ನಿನ್ನ ಪ್ರಯಾಣ ಸುಖವಾಗಲಿ.

ನನ್ನ ಸಂದೇಶ ಕೇಳಿದವನೇ ಕೃಷ್ಣ ಎರಡು ಕ್ಷಣ ಕಣ್ಣಲ್ಲಿ ಕಣ್ಣಿಟ್ಟು ನೋಡಿ ಮಾರ್ಮಿಕವಾಗಿ ನಕ್ಕ. "ನಿನ್ನ ದಿಗಿಲೇನು ಗೊತ್ತಾಯಿತು. ಹಾಗೇನೂ ಆಗದಂತೆ ನಾವೆಲ್ಲ ನೋಡಿಕೊಳ್ಳುತ್ತೇವೆ. ಧರ್ಮರಾಯನೂ ಯುದ್ಧರಂಗಕ್ಕೆ ಇಳಿದು ಶಸ್ತ್ರಾಸ್ತ್ರ ಪ್ರಯೋಗಿಸಿ ಹೋರಾಡುತ್ತಾನೆ. ಧರ್ಮರಾಯನ ನೇತೃತ್ವದಲ್ಲಿಯೇ ಯುದ್ಧಮಾಡಿ ಜಯ ಸಾಧಿಸುತ್ತೇವೆ. ಅತ್ತೆ, ಬಾಳಿನಲ್ಲಿ ಬಂದ ವಿಪತ್ತುಗಳನ್ನೆದುರಿಸಿ ಇಲ್ಲಿಯವರೆಗೆ ಸಾಧಿಸಿರುವ ಹಿರಿಯ ದಿಟ್ಟ ಮಹಿಳೆ ನೀನು. ನಿನಗೇನು ಹೇಳುವುದು? ನಡೆದು ಹೋದುದನ್ನು ಈಗ ಬದಲಾಯಿಸುಲಾಗುವುದಿಲ್ಲ. ಹಾಗೆಯೆ ಹುಟ್ಟಿನಿಂದ ಬಂದ ಮಾನವ ಸ್ವಭಾವವನ್ನು ಬದಲಾಯಿಸಲಾರೆವು. ಇಂದಿನ ಸ್ಥಿತಿಗತಿಗಳನ್ನು, ನಮ್ಮವರ ಸ್ವಭಾವವನ್ನು ಉಪಯೋಗಿಸಿಕೊಂಡೇ ನಮ್ಮ ಕಾರ್ಯ ಸಿದ್ಧಿಸಿಕೊಳ್ಳುವುದೇ ಜಾಣತನವಲ್ಲವೇ? ಧರ್ಮರಾಯನ ಬಗ್ಗೆ ಚಿಂತೆ ಬಿಡು, ನಿನ್ನ ಮಕ್ಕಳು ವಿಜಯಿಗಳಾಗಿ ನಿನ್ನನ್ನು ಕುರುರಾಜ್ಯದ ರಾಜಮಾತೆಯಾಗಿ ಅಭಿನಂದಿಸುತ್ತಾರೆ. ಇದು ಖಚಿತ.." ಇದಲ್ಲವೇ ಧೈರ್ಯ, ಶೌರ್ಯ, ಕೌಶಲ್ಯ! ಶ್ರೀಕೃಷ್ಣ–ವಾಸುದೇವ. ಆಕ್ಷಣ ಅವನನ್ನು ಬಾಚಿ ತಬ್ಬಿಕೊಂಡವಳು ನಾನಾದರೂ ನನ್ನನ್ನು ಎಲ್ಲ ರೀತಿಯಲ್ಲಿ ತಬ್ಬಿ ಹಿಡಿದೆತ್ತಿದವ ನನ್ನಳಿಯ ವಾಸುದೇವ.

“ಯಾದವರ ಸಮಸ್ಯೆಗಳೇ ನಿನಗೆ ಸಾಕಷ್ಟಿರುವಾಗ ನನ್ನ ಮಕ್ಕಳದನ್ನೂ ನಿನಗೆ ಹೊರಿಸಿರುವೆ. ನಿನಗೆಂಥ ಅತ್ತೆಯಾದೆನೋ ವಾಸುದೇವ! ನನ್ನ ಮಕ್ಕಳ ಸಲುವಾಗಿ ನಿನಗೆಷ್ಟು ಅಗಚಾಟಲು ಪ್ರಯಾಣಗಳ ಆಯಾಸ! ಸಾಲದೆಂದು ತುಂಬಿದ ಸಭೆಯಲ್ಲಿ ನಿನಗಾದ ಅವಮಾನಕ್ಕೆ ನನಗೆ ಸಂಕಟವಾಗುತ್ತದೆ. ಬರಿಗೈಲಿರುವ ಅತ್ತೆಯಿಂದ ನಿನಗೆ ಸಿಕ್ಕ ಬಹುಮಾನ!”

“ಹಾಗೇಕೆ ನೊಂದುಕೊಳ್ಳುವೆ ಅತ್ತೆ? ಜನಹಿತ ಕಾರ್ಯದಲ್ಲಿ ತೊಡಗಿರುವವನಿಗೆಂತಹ ಆಯಾಸ, ಮಾನಾಪಮಾನ? ಪ್ರಜಾರಕ್ಷಣೆಗಾಗಿ ದುಡಿದವರಾರಿಗೂ ಮಾನ ಎಂಬುದಿರಬಾರದು ನೋಡು. ಅತ್ತೇ, ಈ ಲೋಕಸಂಗ್ರಹ ಕಾರ್ಯದಲ್ಲಿ ನಿನ್ನದೂ ದೊಡ್ಡ ಪಾತ್ರವಿದೆ”,

“ಹಾಗೆಂದರೆ?”

“ನಾವು ತೆಗೆದುಕೊಳ್ಳುವ ನಿರ್ಧಾರ ಮತ್ತು ಪ್ರಯತ್ನಗಳ ಹಿಂದಿರುವ ಉದ್ದೇಶದ ಮೇಲೆ ನಿಂತಿರುವುದು ಅವುಗಳ ಸಾರ್ಥಕ್ಯ, ಸಾಫಲ್ಯ. ನೀನು ಹೋರಾಡುತ್ತಿರುವುದು ಸ್ವಾರ್ಥಕ್ಕೆ–ನಿನ್ನ ಮಕ್ಕಳಿಗೆ–ಪಾಂಡವರಿಗೆ ರಾಜ್ಯ ಸಿಗಬೇಕೆಂದು ಅವರಿಗೆ ಸಲ್ಲಬೇಕಾದ ಹಕ್ಕೆಂದು ಕೇಳುತ್ತಿದ್ದೀಯೆ. ನಾನು ಹೋರಾಡುತ್ತಿರುವುದು ಸಕಲ ಜನತೆಗೆ ನೆಮ್ಮದಿ ಸೌಹಾರ್ದ, ಧರ್ಮಯುತ ಸಾಮಾಜಿಕ ಜೀವನಕ್ಕೆ ಅನುವಾಗುವಂತೆ ಏಕಚಕ್ರಾಧಿಪತ್ಯದಲ್ಲಿನ ಆರ್ಯಾವರ್ತ. ನನ್ನ ಈ ಉದ್ದೇಶವನ್ನು ವಿದುರನಲ್ಲಿ ಕೇಳು, ವಿಶದವಾಗಿ ವಿವರಿಸುತ್ತಾನೆ.. ನಿನ್ನ ಹಮ್ಮು ಬಿಟ್ಟು ಕರ್ಣನಲ್ಲಿಗೆ ಬೆಳಿಗ್ಗೆಯೇ ಹೋಗಿ ನಾ ಹೇಳಿದ ವಿಷಯ ಪ್ರಸ್ತಾಪಿಸುವುದು ನಿನ್ನ ಮೊದಲ ಹೆಜ್ಜೆ. ನನ್ನ ಉದ್ದೇಶಸಾಧನೆಗೆ ಸಹಕರಿಸು ಆಶೀರ್ವದಿಸು–ನನಗೆ ಸಕಲವನ್ನೂ ಕೊಟ್ಟಂತೆ!”

ಪಾಂಡವರ ತಾಯಿ ಕುಂತಿ ಕರ್ಣನಲ್ಲಿಗೆ ಹೋಗಿ ಬೇಡಿಕೊಳ್ಳುವುದಾದರೂ ಏನನ್ನು? ಹೇಗೆ? ಮಾತೃದೇವೋಭವ ಎಂದು ಹೇಳಿ ತಾಯಿಗೆ ಕೊಟ್ಟ ಮಾನ್ಯತೆಯ ಹಿಂದೆ ಎಂತೆಂತಹ ತ್ಯಾಗ ಬಲಿದಾನಗಳನ್ನು ನಿರೀಕ್ಷಿಸುತ್ತದೆ ಜೀವನ? ಬಾಳಿನುದ್ದಕ್ಕೂ, ಅವಳು ಸಾಯುವವರೆಗೂ! ಮಿಕ್ಕವರ ಕ್ಷೇಮಕ್ಕಾಗಿ ಮೊದಲನೆಯವನ ಕತ್ತು ಹಿಚುಕುವ ಕೆಲಸ ಈ ತಾಯಿಗೆ. ಧರ್ಮಯುತ ರಾಜ್ಯದ ಸ್ಥಾಪನಾರ್ಥ, ಲೋಕಸಂಗ್ರಹಾರ್ಥ! ನನ್ನ ವಿಧಿಯ ಅಟ್ಟಹಾಸವೇ ಅಟ್ಟಹಾಸ. ಕಿವಿಗಡಚಿಕ್ಕುತ್ತಿದೆ.

ಈ ಮೊದಲೇ ಕರ್ಣನನ್ನು ನನ್ನ ಮಗನೆಂದು ಹೇಳಿ ನನ್ನವನನ್ನಾಗಿಸಿಕೊಳ್ಳುವ ಸಂದರ್ಭಗಳು ಬಂದವು ನಿಜ. ಆದರೆ ಸಮಾಜದ ರೀತಿ ನೀತಿಗಳು ಅಡ್ಡಿಗಳು? ಹುಟ್ಟಿದ ಹಸುಳೆಯನ್ನು ಮಗನೆಂದು ಎಲ್ಲರೆದುರು ತರಲು ನನ್ನ ಕನ್ಯತ್ವ ಅಡ್ಡಿಯಾಯಿತು. ಮಗುವಿನೊಂದಿಗೆ ಕುಂತೀಭೋಜರಾಜನ ಅರಮನೆಯಿಂದ ಹೊರ ಹೊರಟು ಸಮಾಜವನ್ನೆದುರಿಸುವ ಧೈರ್ಯವಿಲ್ಲದಾಗಿತ್ತು. ನೀರಲ್ಲಿ ಬಿಟ್ಟೆ.

ಪಾಂಡುರಾಜ ನಿಯೋಗದ ಮಾತೆತ್ತಿದಾಗ ನನ್ನ ಮೊದಲ ಮಗುವಿನ ಬಗ್ಗೆ ಹೇಳಿ ನನ್ನದಾಗಿಸಿಕೊಳ್ಳಬಹುದಿತ್ತು. ಆದರೆ ಪಾಂಡು ಒಪ್ಪುವ ಬದಲಿಗೆ ನನ್ನನ್ನೇ ಬಿಟ್ಟುಬಿಟ್ಟರೆ?

ನೀರಲ್ಲಿ ತೇಲಿಬಿಟ್ಟ ಮಗು ಮುಳುಗಿತ್ತೋ ಬದುಕಿದೆಯೋ-ಇದ್ದರೆ ಎಲ್ಲಿ? ಯಾವ ವಿವರವೂ ಇಲ್ಲದೆ ಸುಮ್ಮನಾದೆ. ಈ ಮಗನನ್ನು ಮುಖತಃ ನೋಡಿದ್ದು ಹಸ್ತಿನಾವತಿಯಲ್ಲಿ ಹೊಸದಾಗಿ ನಿರ್ಮಿಸಿದ ಕ್ರೀಡಾಂಗಣದ ಬಾಗಿಲ ಬಳಿ! ಮುಳುಗುತ್ತಿದ್ದ ಸೂರ್ಯನ ಹೊಂಗಿರಣದಲ್ಲಿ ಥಳಥಳಿಸಿದ್ದವು ಕರ್ಣ ಕುಂಡಲ ಮತ್ತವನ ಕವಚ. ನನ್ನ ಮಗನಿವನೆಂಬ ಅರಿವು ಬರುವುದರ ಜೊತೆಗೇ ಅವನು ಅರ್ಜುನನನ್ನು ದ್ವಂದ್ವಕ್ಕೆ ಕರೆಯುವುದೂ ಕೇಳಿಸಿತು. ನೋಡ ನೋಡುತ್ತಿದ್ದಂತೆ ಸ್ಪರ್ಧೆಯಾಗಷ್ಟೇ ಉಳಿಯದೆ ದ್ವಂದ್ವಯುದ್ಧಕ್ಕೆ ತಿರುಗಿದೊಡನೆ ಕಣ್ಕತ್ತಲಿಟ್ಟು ಒರಗಿದುದಷ್ಟೆ! ...ಕಣ್ತೆರೆದಾಗ ದುರ್ಯೋಧನ ಕರ್ಣನಿಗೆ ಅಂಗರಾಜ್ಯ ಕೊಟ್ಟು ಪಟ್ಟಾಭಿಷೇಕ ಮಾಡುತ್ತಿದ್ದ. ಮತ್ತೊಮ್ಮೆ ಮಗು ಕೈಜಾರಿ ದೂರ ಸರಿದಿದ್ದ. ದುಷ್ಟ ದುರ್ಯೋಧನನ ಬಲಗೈ ಬಂಟನಾಗಿ ಹೋದ. ಆಕ್ಷಣ ಅವನನ್ನು ಮಗನೆಂದು ಎಲ್ಲರೆದುರು ಗುರುತಿಸಲು ಧೈರ್ಯ ಬರಲಿಲ್ಲ. ನನ್ನ, ನನ್ನ ಮಕ್ಕಳ ಪರಿಸ್ಥಿತಿಯಲ್ಲಿ ಸರಿ ತೋರಲೂ ಇಲ್ಲ. ಅಂದೇ ಮೊದಲು ಕರ್ಣ ದುರ್ಯೋಧನನಿಗೆ ಹತ್ತಿರವಾದಷ್ಟೂ ನನ್ನ ಮಕ್ಕಳ ಕ್ಷೇಮಕ್ಕೆ ಮುಳುವಾಗುತ್ತಿರುವ ಅಧರ್ಮಿ ಮಗನಾಗಿ ಕಂಡುಬರುತ್ತಿದ್ದಾನೆ-ಬಿಸಿತುಪ್ಪದಂತೆ ಅವನನ್ನು ನುಂಗಲಾರೆ, ಉಗುಳಲಾರೆ. ಕರ್ಣನೆಂದರೆ ಒಂದು ರೀತಿಯ ಅಸಹಾಯಕತೆ, ದುರ್ದೈವ ಭಾವ ಮನೆಮಾಡಿದೆ. ನನ್ನ ವ್ಯಕ್ತಿತ್ವದ ಒಂದು ಊನಭಾಗವಾಗಿ ಇನ್ನಷ್ಟು, ಮತ್ತಷ್ಟು ಮುಚ್ಚಿಡುವ ಸಂಗತಿಯಾಗಿ ಹೋಗಿದ್ದಾನೆ. ಅವನಲ್ಲಿಯ ನನ್ನ ಮಗನೆಂಬ ಪ್ರೀತಿ ತೋರಿಸಿಕೊಳ್ಳಲಾಗದ ಸಂಕಟದ ಗಂಟಾಗಿ ನಿಂತುಹೋಗಿದೆ.

ನನಗಾಗಿಯೇ, ಕೇವಲ ನನ್ನ ಕಾರಣದಿಂದಾಗಿಯೇ ಹುಟ್ಟಿದವ ಕರ್ಣ. ನನ್ನ ಮಗು-ಜೀವಂತ ಮಗುವೆಂಬ ಹೊಸ ಬಗೆಯ ಸಂತಸ, ಅಕ್ಕರೆ ಅಚ್ಚರಿಯ ಅನುಭವ ಕೊಟ್ಟವನ ಮೇಲಿನ ಪ್ರೀತಿ ಕಾನೀನನೆಂಬ ಕಾರಣಕ್ಕಾಗಿ ಕಹಿಬೆರೆತ ಸಿಹಿಯಾಗಿ ಹೋಯಿತು... ಅದೇ ಧರ್ಮಜ.. ಪಾಂಡುವಿನ ಬಲವಂತಕ್ಕೆ ನಿಯೋಗದಲ್ಲಿ ಹುಟ್ಟಿದವ... ಕುರುವಂಶಕ್ಕೆ ಮೀಸಲಾದವನೆಂಬ ಪರಕೀಯತೆ- ಮಗನೆಂಬ ಕರ್ತವ್ಯ ಭಾವ ಮಾತ್ರ ನನ್ನಲ್ಲಿ ಮೂಡಿಸಿದವನಲ್ಲಿ ಪ್ರೀತಿಗಿಂತ ಮಿಗಿಲಾಗಿ ಹೊಣೆಗಾರಿಕೆ ನಿಂತುಕೊಂಡಿತು. ಭೀಮ ಅರ್ಜುನರಲ್ಲಿ ಮಕ್ಕಳೆಂಬ ಮಮತೆಯಿತ್ತು. ನಿಜ. ಆದರೆ ನಕುಲ ಸಹದೇವರಲ್ಲಿಯದು ವಿಶೇಷ ಪ್ರೀತಿ. ಚಿತೆಯೇರುವ ಸಮಯದಲ್ಲಿ ನನ್ನ ತಾಯ್ತನದಲ್ಲಿ ಪೂರ್ಣನಂಬಿಕೆಯಿಟ್ಟು ಹೆತ್ತ ತಾಯಿ ಮಾದ್ರಿ ನನ್ನ ಮಡಿಲಿಗೆ ಕೊಟ್ಟ ಹಸುಳೆಗಳು, ನೂರಕ್ಕೆ ನೂರರಷ್ಟು 'ಮಕ್ಕಳ ಸುಖ' ನೀಡಿದ, ಸಂತಸ ತಂದ ಮಕ್ಕಳು. ನಾನೇ ಸಾಕಿ ಸಲಹಿದ ಅವರಲ್ಲಿನ ಮಮಕಾರ ಮಿಕ್ಕವರಿಗಿಂತ ಹೆಚ್ಚೆಂದೇ ಎಲ್ಲರ ಅನಿಸಿಕೆ!

ತಾಯಿಮಕ್ಕಳ ಸಂಬಂಧ-ಬೆಸುಗೆ ವಿಚಿತ್ರವೆನಿಸುತ್ತದೆ. ಹುಟ್ಟಿಸಿದ ಮಾತ್ರಕ್ಕೆ ಮಮಕಾರ ಬರುವುದಿಲ್ಲ. ಬುಟ್ಟಿಯಲ್ಲಿ ತೇಲಿಬಿಟ್ಟ ಮಗುವಿಗಾಗಿ ನನ್ನ ಹಂಬಲದ, ಆ ಮಗು ನನ್ನದಾಗಲಿಲ್ಲವೆಂಬ ಸಂಕಟದ ನಂಟು ಒಳಗೇ ಇಂದಿಗೂ ಹಸಿರಾಗೇ ಉಳಿದು ಹೋಗಿದೆಯೇ ಹೊರತು ಆ ಮಗುವಿಗೂ ಈ ಕರ್ಣನಿಗೂ ತಾಳೆಯೇ ಆಗಲೊಲ್ಲದಲ್ಲ! ಏಕೆ? ಹೆತ್ತಂತೆಯೇ ಹಾಲೂಡಿಸಿ ಮೈದಡವಿ ಸಲಹುವ ಸಾಮೀಪ್ಯದಿಂದ ಮಾತ್ರ ಮಮಕಾರ ಬೆಳೆಯುವುದೇನೋ.

ಈ ಮಮಕಾರವಿಲ್ಲದಾಗ ಹೆತ್ತ ಮಗನೂ ಪಕೀಯನಾಗಿಯೇ ಉಳಿದುಹೋದ. ನಾ ಹೆತ್ತ ಮೊದಲ ಮಗು ಇಂದಿಗೂ ಹತ್ತು ದಿನಗಳ ಹಾಲು ಹಸುಳೆಯೇ! ಸರಿದು ಹೋದ ಐವತ್ತಕ್ಕೂ ಮಿಕ್ಕ ವರ್ಷಗಳು ಈ ಮಗುವನ್ನು ತಾಗಿಯೇ ಇಲ್ಲವೆಂಬಂತೆ ಮನಸ್ಸು ಈ ವಿಷಯದಲ್ಲಿ ತೆರೆ ಎಳೆದುಬಿಟ್ಟಿದೆ. ಈಗ ಹೋಗಿ ನನಗಿಂತ ಕೇವಲ ಹದಿಮೂರು ಹದಿನಾಲ್ಕು ವರ್ಷಕ್ಕೆ ಚಿಕ್ಕವನಾದ ಹಿರಿಯ ಸಂಸಾರಿ ಪುರುಷನನ್ನು ನನ್ನ ಮಗು ನೀನೆಂದು ಹೇಳಿಕೊಳ್ಳುವುದು ಹೇಗೆ? ಅವನ ಪ್ರತಿಕ್ರಿಯೆ? ಶತ್ರು ಪಕ್ಷದ ಮಹಾರಥಿ, ಎನಿಸಿಕೊಂಡಿರುವನೆದುರು ಪಾಂಡವರ ತಾಯಿಯದು ಏನೆಂದು ಪ್ರಸ್ತಾವನೆ? ತಾಯಿ ಪಟ್ಟವೇ! ನಿನಗೆ ನೂರು ನೂರು ನಮಸ್ಕಾರ. ಹಮ್ಮು ಮುರಿಯಲಿಕ್ಕೆ ಇಷ್ಟು ಸಾಲದೇ...

ಇದೇ ಮಧ್ಯಾಹ್ನ ಒಬ್ಬ ಮಗನಿಗೆ ಯುದ್ಧದಲ್ಲಿ ವಿಜಯಿಯಾಗಿಯೇ ಬಂದು ನೋಡಬೇಕೆಂದು ಆದೇಶ ಕಳಿಸಿದವಳೇ ಮತ್ತೊಬ್ಬ ಮಗನಿಗೆ ಅದೇ ಯುದ್ಧದಲ್ಲಿ ಭಾಗವಹಿಸಬೇಡ, ಅಥವಾ ನನ್ನ ಮಕ್ಕಳನ್ನು ಕೊಲ್ಲಬೇಡ ಎಂದು ಬೇಡಿಕೊಳ್ಳುವ ಸಂದರ್ಭ. ಒಂದು–ತಾಯಿಯ 'ಆಣತಿ' ಮತ್ತೊಂದು–ತಾಯಿಯ 'ಬಿನ್ನಹ'. ಎಂಥ ವಿಡಂಬನೆ! ಜೀವನಕ್ಕೆದುರಾಗಿ ಸೆಟ್ಟೆದು ನಿಂತಷ್ಟೂ ಅದು ನಮ್ಮನ್ನು ಬಗ್ಗು ಬಡಿಯುತ್ತದೆ.

ಧರ್ಮಪುತ್ರನಲ್ಲಿ ಇಲ್ಲದ ಯುದ್ಧೋತ್ಸಾಹವನ್ನು ತುಂಬಿದರೆ ಸೂರ್ಯಪುತ್ರನಲ್ಲಿರುವ ಯುದ್ಧೋತ್ಸಾಹವನ್ನು ಸೋರಿಸಿ ಅವನ ಗೋಣು ಮುರಿವ ಕೆಲಸ ಈ ತಾಯಿಗೆ. ಇದು ಹೀಗೆ ನಡೆಯಬೇಕಾಗಿದೆ. ಬೇರೆ ದಾರಿಯಿಲ್ಲ. ಧರ್ಮದ ಜಯವಾಗುವಂತೆ ಸಹಕರಿಸು ತಾಯಿ ಎಂದನಲ್ಲ ಕೃಷ್ಣ. ಇದಾವ ಧರ್ಮ? ಕೊಟ್ಟೇ ಇಲ್ಲದ ಸಾಲವನ್ನು ಹಿಂದಕ್ಕೆ ಪಡೆವಂತೆ. ಕುಲಜಾತ ಸಂಸ್ಕಾರಗಳಾವುವೂ ಆಗಿಲ್ಲದ ಕರ್ಣನಲ್ಲಿ ನನ್ನಿಂದ ಲಾಲನೆ ಪಡೆಯದ ಕರ್ಣನಲ್ಲಿ ಮಾತೃತ್ವದ ಅಧಿಕಾರದಿಂದ ಏನನ್ನೇ ಆಗಲೀ ಕೇಳುವುದು ಯಾವ ಧರ್ಮ? ಅವನು ಕೊಟ್ಟಾನೆ? ಕೊಟ್ಟರೂ ಅದು ಧರ್ಮಯುತವಾಗಿ ನಮಗೆ ದಕ್ಕುವುದೇ? ನನಗೀಗ ಧರ್ಮ ಎನ್ನುವುದು ಯಾರು ಬೇಕಾದರೂ ತಮ್ಮ ಹೊಲಕ್ಕೆ ತಿದ್ದಿಕೊಳ್ಳಬಹುದಾದ ನೀರಿನಂತೆ ಆಯಾ ಹೊಲಕ್ಕೆ ಆಯಾ ತಿದ್ದೇ ಸರಿ, ಎನ್ನುವಂತೆ ತೋರುವುದು. ಇಷ್ಟಕ್ಕೂ ಧರ್ಮದ ಬಗ್ಗೆ ಚರ್ಚೆ ಮಾಡಲು ಆರ್ಯ ಹೆಂಗಸರಿಗೇನು ಹಕ್ಕುಂಟು? ಧರ್ಮಪಾಲಕರು ಹೇಳಿದಂತೆ ಕೇಳುವುದು ನಮ್ಮ 'ಧರ್ಮ' ತಾನೇ! ನಾವಿರುವ ಪುರುಷಸಮಾಜದಲ್ಲಿ ಪುರುಷರು ತಮಗೆ ಒಪ್ಪುವಂತೆ ಸಮಾಜದ ಕಟ್ಟಳೆಗಳನ್ನು ರೂಪಿಸಿ ರೂಢಿಗೆ ತರಲು ಹೆಂಗಸರನ್ನು ಒತ್ತಾಯಿಸುವರು. ಅದರಂತೆ ನಡೆವವರು ನಾವು. ಯಾವಾಗ ಬೇಕಾದರೂ ಅದನ್ನು ಮಾರ್ಪಡಿಸುವ ಹಕ್ಕು ಪುರುಷರಿಗೇ ಕಾಯ್ದಿರಿಸಲಾಗಿದೆ.... ಹೆಂಗಸರಿಗೆ ಅಧಿಕಾರ ಕೊಟ್ಟರೆ ಹೇಗಿದ್ದೀತು ಪ್ರಪಂಚ? ಪ್ರಕೃತಿಯನ್ನು ಘರ್ಷಿಸದೆ ಅದಕ್ಕೆ ಹೊಂದಿಸಿ ಕಟ್ಟಿದ ಬದುಕು ಬಾಳಿ ಸುಖ ಶಾಂತಿ ಸಮೃದ್ಧಿಯನ್ನು ಕಾಣುವ ಶಕ್ತಿ, ಹೆಂಗಸರಿಗೆ ಸಿದ್ಧಿಸಿರಬಹುದೇ? ಕಟ್ಟಿ ಬೆಳೆಸುವ ತಾಯ್ತನದ ಸತ್ವಕ್ಕೆ ಅಧಿಕಾರ ಕೊಟ್ಟಿದ್ದರೆ ಪ್ರಾಯಶಃ ಪ್ರಪಂಚದಲ್ಲಿ ಯುದ್ಧವೇ ನಡೆಯುತ್ತಿರಲಿಲ್ಲವೇನೋ? 'ರೆ' ರಾಜ್ಯದ ಹುಚ್ಚು ಕನಸುಗಳು! 'ಆರ್ಯೆ'ಯಾಗಿ ಪುರುಷಸಮಾಜದಲ್ಲಿರುವ ನನ್ನ ಕರ್ತವ್ಯವೇನು?

ವಾಸುದೇವನ ಪ್ರಕಾರ, ಪಾಂಡವರು ಜಯಿಸಬೇಕಾದರೆ ನಾನು ಕರ್ಣನಲ್ಲಿಗೆ ಹೋಗಿ ನನ್ನ ಅವನ ಸಂಬಂಧದ ಸತ್ಯ ಹೇಳಿಕೊಳ್ಳುವುದೂ ಸಹಾಯಕ. ಆಗಲಿ. ಕರ್ಣನೆದುರು ನಿಂತು ಅವನಿಗೆ ನನ್ನಿಂದಾಗಿರುವ ಅಪರಾಧಕ್ಕೆ ಸಿಗುವ ಶಿಕ್ಷೆಯನ್ನು ಅನುಭವಿಸಿ ಮುಗಿಸುವುದು. ನಂತರ ಅವನು ಕೊಟ್ಟ ಭಿಕ್ಷೆಯನ್ನು ಉಡಿಗೆ ಹಾಕಿಕೊಳ್ಳುವುದು. ವಾಸುದೇವ-ನೀನು ನನಗಾಗಿ ಪಡುತ್ತಿರುವ ಪಾಡಿಗೆ ನಾನು ಕರ್ಣನಲ್ಲಿ ನಿಜ ಹೇಳಿ ಬೇಡಿಕೊಳ್ಳುವುದೇನು ಹೆಚ್ಚು?

ಮೂಡಣ ಕತ್ತಲು ಕರಗಿ ನಸುಕಾಗುತ್ತಿದೆ. ಇನ್ನೆರಡು ಘಳಿಗೆಯಲ್ಲಿ ತಾಯಿ ಮಗನೊಟ್ಟಿಗೆ ತಂದೆಯೂ ಇರುವನು. ಐವತ್ತು ವರ್ಷಗಳ ನಂತರ ತಾಯಿ ಕುಂತಿ ಮಗ ಕರ್ಣ ತಂದೆ ಸೂರ್ಯರ ಮಿಲನ ಮೊದಲ ಬಾರಿಗೆ-ಕಡೆಯದಾಗಿಯೂ ಆಗುವುದೇನೋ! ಬೆಂಕಿಯನ್ನು ಅಪ್ಪಿಕೊಳ್ಳಲು ಹೊರಟ ಕರ್ಪೂರದ ಬೊಂಬೆ ನಾನು. ಸೂರ್ಯಾಂಶು ಕರ್ಣನನ್ನು ಕಾಣಲು ಹೊರಟಿದ್ದೇನೆ. ನಿನ್ನ ತಾಯಿಯೆಂದು ಒಪ್ಪಿಕೊಂಡಮೇಲೆ ನಾನು ಉಳಿಯುವೆನೇ?

ಅಪ್ಪ, ವಾಸುದೇವ, ಇಂದಿನ ನನ್ನ ಮನಃಸ್ಥಿತಿಯಲ್ಲಿ ನೀನು ಹೇಳಿದ ಮಾತುಗಳಾವುದೂ ನಿಚ್ಚಳವಾಗಿಲ್ಲ. ಚಿಂತಿಸಿ ಅರಗಿಸಿಕೊಳ್ಳಲು ಸಮಯ ಬೇಕು. ಈಗ ತೋರುತ್ತಿರುವುದೊಂದೇ- ನೀ ಹೇಳಿದಂತೆ ಕೇಳುವುದು-ಕರ್ಣನಲ್ಲಿ ಸತ್ಯ ಹೇಳುವುದು, ಮುಂದೆ? ಬಲ್ಲವರಾರು?



# ಅಧ್ಯಾಯ ೨

## "ಕರ್ಣನೀಗ ಕೌರವ ಸೇನಾನಿ"

ನಸುಕು ಹರಿವ ಮೊದಲೇ ಕತ್ತಲೆಯ ಬಸಿರಿಂದ ಬರುವ ಖುರಪುಟದ ಸದ್ದು – ಎದೆಯ ಮೇಲೆ ಸಾವಿನ ಗೊರಸು ಕುಣಿದಂತೆ. ಪ್ರತಿ ರಾತ್ರಿಯೂ ಈ ಖುರಪುಟದ ಸದ್ದಿಗಾಗಿ ಕಿವಿ ನಿಮಿರಿಸಿ ಕಾಯುವುದು; ಸದ್ದು ಕೇಳಿದ ಮೇಲೆ ಕುದಿಯುವುದು. ಒಂದೇ ಬಾರಿಗೆ ನೆಗೆದು ಬೀಳಬಾರದೇ ಹೃದಯ! ಜೀವನ ನೆಮ್ಮದಿಯಾಗಿ ಕಣ್ಮುಚ್ಚಿಬಿಡೋಣ ವೆನಿಸುವುದು. ಹೊತ್ತು ಗೊತ್ತಿಲ್ಲದೆ ಬಂದಿಳಿವ ಬೇಹುಗಾರರು–ಸುದ್ದಿಗಾರರು–ಅವರನ್ನೇ ಎದುರು ನೋಡುತ್ತ, ರಾತ್ರಿಯೆಲ್ಲ ಗೂಬೆಯಂತೆ ಕಾದು ಕುಳಿತ ಕುಂತಿ! ಈ ಕಾಯುವಿಕೆಯೂ ವಿಚಿತ್ರ–ಸಾವಿನ ಸರತಿಯಲ್ಲಿ ಬಂದವರ ಹೆಸರು ಕೇಳಲು ಕಾಯುವ ಭೀಭತ್ಸ ರೀತಿ–ಧರ್ಮವಾಗಿ ಬಾಳಲಿಕ್ಕೆಂದು ನಡೆಸಿರುವ ಮಾರಣಹೋಮದ ರೀತಿ. ತನ್ನ ಪಾಳಿ ಮುಗಿಸಿ ಹಿಂತಿರುಗುವ ಪ್ರಹರಿಯ 'ಸಮಯ'ದ ಕೂಗನ್ನು ಕೇಳುತ್ತ ಕಳೆದ ರಾತ್ರಿಗಳ ಹದಿಮೂರು ವರ್ಷಗಳು! ಈಗಿನ ರಾತ್ರಿಗಳೋ?.. ಊರೆಲ್ಲ ಸ್ಮಶಾನ ಮೌನ. ಇದ್ದಕ್ಕಿದ್ದಂತೆ ರಾತ್ರಿಯ ಒಡಲನ್ನು ಸೀಳಿಕೊಂಡು ಬರುವ ನಾಯಿ ನರಿಗಳು ಊಳಿಡುವ, ಹೆಂಗಸರು ಭೋರಿಡುವ ಗೋಳು ಸ್ವರ. ಕರುಳೇ ಕಿತ್ತು ಬರುವಂತೆ! ವೀರ ಪಾಂಡವರ ತಾಯಿ ಕ್ಷತ್ರಾಣಿ ಕುಂತಿ, ನನಗೇ ಈ ಪರಿಯ ವೇದನೆ–ಆತಂಕವಾದರೆ ಪ್ರಜೆಗಳ ಪಾಡು? ಇಂದು ಹದಿನೇಳನೇ ದಿನಕ್ಕೂ ಕಾಲಿಟ್ಟಿರುವ ಇದು ಕೇವಲ ಯುದ್ಧವಲ್ಲ. ನಮ್ಮ ಹಿರಿಯರಿಂದಲೂ ಕೂಡ ಕಂಡಿರದ ಕೇಳಿಯೂ ಇಲ್ಲದ ಹದಿನೆಂಟು ಅಕ್ಷೋಹಿಣಿ ಸೈನ್ಯದ ಸಮರ! ಮಹಾ ಮಹಾ ಸಂಗ್ರಾಮ! ಒಳಗೆ ಹೊರಗೆ ಸುಡು ಸುಡುತ್ತಿರುವ ಮಹಾ ಸಂಗ್ರಾಮವೇ... ಧಿಕ್ಕಾರ! ಧಿಕ್ಕಾರ!

ಕುದುರೆ ಮನೆ ಬಾಗಿಲಿಗೇ ಬಂದು ಅರ್ಧ ತಾಸಿಗೂ ಮೇಲಾಯಿತಲ್ಲವೇ.. ಏನು ಸುದ್ದಿಯೋ, ಕಾದು ಕಾದು–ಮೇಲೆದ್ದು ಹೊರಬಾಗಿಲಿಗೆ ಬಂದರೆ... ಇಷ್ಟು ಹೊತ್ತೂ ಕೇಳಿದ ಸುದ್ದಿಯೆಲ್ಲ ಏನು? ವಿದುರ ಹೊಸ್ತಿಲಲ್ಲೇ ನಿಂತು ಹೇಳಿದ ಚುಟುಕು ಸುದ್ದಿ ಮೊಟಕು ಮಾಡಿ ವಿವರಣೆಗೆ ಅಸ್ಪದ ಕೊಡದೆ ಏರುದನಿಯಲ್ಲಿ ಹೇಳಿದ ಸುದ್ದಿ –"ಕರ್ಣನೀಗ ಕೌರವರ ಸೇನಾನಿ!" ಹೀಗೆ ಹೇಳುತ್ತಲೇ ದಾವಳಿ ಹೊಡೆಯುತ್ತ ಸುದ್ದಿಗಾರನೊಂದಿಗೇ ಅರಮನೆಗೆ

ಧಾವಿಸಿದ್ದ. ನಿಂತ ನಿಂತಂತೆಯೇ ಅರಮನೆಗೆ ಓಟದ ಹೆಜ್ಜೆಯಿಟ್ಟ ವಿದುರನ ದನಿಯಲ್ಲಿ.. ಮೊಗದಲ್ಲಿ ..ಆತಂಕವೇ? ಸಂಶಯವೇ? ಅಶುಭದ ಮುನ್ಸೂಚನೆ ತಂದನೇ ಸುದ್ದಿಗಾರ? ಯಾರಲ್ಲಿ ಕೇಳಲಿ?

ಮನಸೇ..... ನಿಧಾನಿಸು! ನಿಧಾನಿಸು!...

* * *

"ಕರ್ಣನೀಗ ಕೌರವ ಸೇನಾನಿ"

ಕರ್ಣಾರ್ಜುನರ ಕಾಳಗ! ಯಾವ ಘಳಿಗೆಯನ್ನು ನಾವೆಲ್ಲ ಆತಂಕದಿಂದ ಎದುರುನೋಡುತ್ತಿದ್ದೆವೋ ಆ ದುರ್ದೈವೀ ಹೊತ್ತು ಇಂದೇ? ಇಂದು ಬೀಸುವ ಮೃತ್ಯುದಂಡ ಯಾರಿಗೆ ಬಡಿದೀತು? ಇಂದು ನನ್ನ ಅಂತಿಮ ಪರೀಕ್ಷೆಯ ದಿನ. ವಾಸುದೇವನ ವಿಚಾರದಂತೆ ನಿರ್ಣಾಯಕ ದಿನ. ಯುದ್ಧಭೂಮಿಯಿಂದ ಯಾವ ಹೊತ್ತಿನಲ್ಲಿ ಯಾವ ರೂಪದಲ್ಲಿ ಅನಿಷ್ಟ ಸಮಾಚಾರ ಬರುವುದೋ? ಅಲ್ಲಿ ಕಾದಾಡುವವರು ಅಪಾಯದ ಕ್ಷಣಗಳನ್ನು ಆಗಲೇ ಅನುಭವಿಸಿ ಮುಗಿಸಿಬಿಡುವರು. ನಾವಿಲ್ಲಿ ಇರುವವರು ಏನೆಲ್ಲ ಊಹಿಸುತ್ತ ಆಗಿರುವ ಆಗದಿರುವ ಕೇಡನ್ನು ಸಾವಿರ ಸಾವಿರಸಲ ಅನುಭವಿಸುವುದು. ಪ್ರತಿಸಲ ರಣರಂಗದಿಂದ ಸುದ್ದಿ ಬಂದಾಗಲೂ ಸತ್ತು ಸತ್ತು ದುಃಖ ಅನುಭವಿಸಲು ಮತ್ತೆ ಬದುಕುವ ಪರಿಪಾಟಲು. ಕಳೆದ ಎರಡು ವಾರಗಳ ಸಮರದಲ್ಲಿ ಅದೆಷ್ಟು ಬಂಧು ಬಾಂಧವರನ್ನು ಕಳೆದುಕೊಂಡದ್ದಾಯಿತು. ತೀರ ಹತ್ತಿರದ ಅಭಿಮನ್ಯುವಿನ ಸಾವು ಅನುಭವಿಸಿದ ಮೇಲೆ ಅಳುವೂ ಇಲ್ಲದ ಶೂನ್ಯತೆ ಎದೆಯಲ್ಲಿ. ಯಾವುದು ಸತ್ಯ–ನಿತ್ಯ, ಯಾವುದು ಅಸತ್ಯ–ಅನಿತ್ಯ ಎನಿಸಿಬಿಟ್ಟಿದೆ. ಯಾವುದಾದರೂ ಅಚಲ, ಅಜರ, ಅಮರಕ್ಕೆ ನೇತುಬೀಳೋಣವೆನಿಸಿದೆ. ನಮ್ಮವರು–ಹೊರಗಿನವರು ಎನ್ನುವುದರಲ್ಲೇ ಅರ್ಥವಿಲ್ಲದಂತೆ ಮಾಡಿದೆ ಈ ಯುದ್ಧದ ಕರಾಳತೆ. ಬದುಕಿರುವವರನ್ನು ಸತ್ತವರಂತೆ ಮಾಡಿದ ಭೀಕರತೆ. ಕುರುಕ್ಷೇತ್ರದಲ್ಲಿ ಧರ್ಮಕ್ಕಾಗಿ ಶಸ್ತ್ರ–ಅಸ್ತ್ರ ಎಂದು ಕತ್ತಿ, ಭಲ್ಲೆ, ಗದೆ, ಬಿಲ್ಲು ಹಿಡಿದು ಒಬ್ಬರನ್ನೊಬ್ಬರು ಕೊಚ್ಚಿ ಚಚ್ಚಿ ಸಾಯಿಸಿದರೆ ಊರಲ್ಲಿ ಅನ್ನಕ್ಕಾಗಿ ಬಡಿಗೆ, ಮಚ್ಚು, ಕೊಡಲಿ ಇಲ್ಲದಿರೆ ಹೆಗ್ಗಲ್ಲನ್ನೇ ಎತ್ತಿ, ಹೊಯ್ ಕೈ ಹೊಡೆದಾಡಿ ಹಗಲು ದರೋಡೆ ನಡೆಸಿ ಸಾಯುತ್ತಿರುವ ಮಕ್ಕಳು ಮುದುಕರು. ಸಶಕ್ತ ಗಂಡಸರನ್ನು ಕಡ್ಡಾಯ ಸೇನೆಗೆ ಭರ್ತಿಮಾಡಿದರೆ ಅವರನ್ನು ಹೋರಾಟಕ್ಕೆ ಹುರಿದುಂಬಿಸಲೆಂದು ಇನ್ನೂ ಪ್ರಾಯ ಉಳಿದಿರುವ ಎಲ್ಲ ಹೆಂಗಸರನ್ನೂ ಅವರೊಡನೆ ಎಳೆದೊಯ್ದರು. ಇಲ್ಲಿರುವವರು ಅರೆಹುಚ್ಚರಾದ ಮುದುಕರು, ಅರೆಹೊಟ್ಟೆಯಲ್ಲಿ ಕಂಗಾಲಾದ ಮಕ್ಕಳು. ಪ್ರಜೆಗಳನ್ನು ಇಂತಹ ಹೀನ ಸ್ಥಿತಿಗೆ ತರುವ ಯುದ್ಧ ಧರ್ಮವೆಂತಾದೀತೋ?

ಒಂದು ವಿಧದಲ್ಲಿ ಈ ಕರಾಳ ಯುದ್ಧದ ಮೊದಲ ಅಸ್ತ್ರ ಎಸೆದವಳು ನಾನೇ. ಗಂಗೆಯಲ್ಲಿ ಮಿಂದು ನಿಂತಿದ್ದವನ ಮೇಲೆಸೆದ ವಾಗ್ಬಾಣ. ಪಾಂಡವರ ತಾಯಿ ಕುಂತಿ ಕೌರವರ ವೀರಾಗ್ರಣಿ ಕರ್ಣನಿಗೆ ಕೊಟ್ಟ ಕುರಿತೇಟು. ಹೆತ್ತವಳೇ ಮಗನಿಗಿತ್ತ ಮರ್ಮಾಂತಕ ಏಟು! ಏಟು ತಿಂದವನೆಸೆದ ಆ ಕಣ್ನೋಟ ಮಾತಿಲ್ಲದೇ ಎಲ್ಲವನ್ನೂ ಹೇಳಿಬಿಟ್ಟ..... "ನಾನು ದುಷ್ಟ ಸಹವಾಸಿ.

ದುಷ್ಕರ್ಮಿಯಾಗಿದ್ದರೆ ಅದಕ್ಕೆ ನೀನೇ ಹೊಣೆ. ಅಂದು ನಿನ್ನ ಕ್ಷೇಮಕ್ಕಾಗಿ ನನ್ನ ಬಲಿ ಕೊಟ್ಟೆ, ಇಂದು ನಿನ್ನ ಮಕ್ಕಳ ಕ್ಷೇಮಕ್ಕಾಗಿ ಪುನಃ ನನ್ನ ಬಲಿಕೊಟ್ಟೆ!–ನಿನಗೆ ಅಭಯ ಕೊಟ್ಟು ನನ್ನ ನಾ ಬಲಿಕೊಟ್ಟೆ!"–ಆ ಕ್ಷಣ ಅವನ ಮುಖದಲ್ಲಿದ್ದ ಆ ನಗೆ–ಹೆತ್ತ ತಾಯಿಯನ್ನು ಕಂಡ ಹರ್ಷ; ಅವಳಿಂದ ತಿರಸ್ಕೃತನೆಂಬ ದುಃಖ ನೋವು; ತಿರಸ್ಕೃತನಲ್ಲಿ ಬೇಡಿ ಬಂದವಳು ಎಂಥ ತಾಯಿ ಎಂಬ ಭರ್ತ್ಸನೆ–ತಿರುಗುಮುರುಗಾದ ನಗೆ; ಆ ನಗೆಯೊಂದಿಗೆ ಎದೆಯಾಳದಿಂದ ಹೊರಬಂದ ಕಹಿ ಭಾವದ 'ಹೂಂ' ಎರಡೂ ಸೇರಿ ಐವತ್ತು ವರ್ಷಗಳಿಂದ ತುಂಬಿಕೊಂಡಿದ್ದುದೆಲ್ಲವನ್ನೂ ಹೊರತಳ್ಳಿದಂತೆ; ಆಂತರ್ಯವೆಲ್ಲ ಬರಿದಾಗಿ, ಬಿಗಿಯಿಲ್ಲವಾಗಿ ಕುಸಿದ ಸೋಲು ಮುಖ. ಅವನ ಒಂದು ಪ್ರಶ್ನೆ ಈಗಲೂ ಕಿವಿಯಲ್ಲಿ ಕಾದ ಸೀಸದಂತೆ! ಎದೆಯಲ್ಲಿ ನೆಟ್ಟ ಈಟಿ!

'ಈಗ ಇಲ್ಲಿ ನಿನ್ನ ತಮ್ಮಂದಿರನ್ನು ಕಾಪಾಡು ಎಂದಂತೆಯೇ ಪಾಂಡವರಿಗೆ ನಿಮ್ಮ ಹಿರಿಯಣ್ಣನನ್ನು ಕೊಲ್ಲದಿರಿ ಎಂದು ಕೇಳುವೆಯೇನು?' ಎಂದ ಸೊಲ್ಲಿನಲ್ಲಿದ್ದ ನೋವು; ಸ್ವಂತ ತಾಯಿಯಿಂದಲೇ ಪ್ರಾಣರಕ್ಷಣೆ ಸಿಗಲೊಲ್ಲದ ಹತಾಶಭಾವ; ತಾಯಿಯೆಂಬ ಗೌರವಕ್ಕೆ ನಾನು ಅರ್ಹಳೇ ಎನ್ನುವ ಅನುಮಾನ; ಕೋಪ–ದುಃಖ–ನಿರಾಶೆ–ಮರುಕ–ಎಲ್ಲವೂ ಆ ಪ್ರಶ್ನೆಯ ಮೌನದಲ್ಲಿ ಜಿನುಗಿತ್ತು. ಎಂತಹ ಪಾಪಿಗೂ ಈ ತರಹದ ನೋವು ಬಾರದಿರಲಿ, ಅದೂ ತಾಯಿಯಿಂದಲೇ! ಆದರೆ ಅದೇ ಕ್ಷಣದಲ್ಲಿ ಕರ್ಣ ತನ್ನ ಮನದಲ್ಲಿದ್ದ ಹಳತೆಲ್ಲವನ್ನೂ ಕಳಚಿ ಕೊಳೆತೆಲ್ಲವನ್ನೂ ತೊಳೆದು ಶುಭ್ರನಾಗಿ, ಧೀರನಾಗಿ ನೀರು ತೊಟ್ಟಿಕ್ಕುತ್ತಿದ್ದ ದಾವಳಿಯಲ್ಲಿ ನಿಂತು ತಂದೆ ಸೂರ್ಯನ ಸಾಕ್ಷಿಯಲ್ಲಿ ತನ್ನ ಜೀವದ ತರ್ಪಣವಿತ್ತು ತಾಯಿಗೇ ವರವನ್ನಿತ್ತು ಮಗನೆಂಬ ಋಣದಿಂದ ಮುಕ್ತನಾಗಿ ಹೋದ. ಅಲ್ಲಿಂದ ಹೊರಬಂದವನು ಕೇವಲ ದುರ್ಯೋಧನನ ಕರ್ಣ! ಮಿತ್ರಋಣವನ್ನು ತೀರಿಸಲು ಬದುಕಿರುವ ಕರ್ಣ ಅಂದು ಬೆಳಗಿನಲ್ಲಿ ನಾನು ಕೇಳಿದ್ದು, ಅವನು ಹೇಳಿದ್ದು ಮತ್ತಾವುದೂ ನೆನಪಿಗೆ ಬಾರದು. ನೆನಪಿನಲ್ಲಿ ನಿಂತಿರುವುದು– ನೋವುಂಡು ಕಲ್ಮಷ ತೆಗೆದ ಶಾಂತ ಮುಖದ ಅಂತಿಮ ನಗು. ಹತಾಶೆಯ ತೀರ್ಮಾನದ 'ಹೂಂ'!

ಅಂದು, 'ನೀನು ನನ್ನ ಕಾನೀನ ಪುತ್ರ' ಎಂದು ಕರ್ಣನಲ್ಲಿ ಮುಖತಃ ಹೇಳಿಕೊಂಡಮೇಲೆ ಅಲ್ಲಿಯವರೆಗೆ ಅಡ್ಡವಿದ್ದ ಅದೃಶ್ಯಗೋಡೆಯೊಂದು ಉರುಳಿಬಿದ್ದಂತಾಗಿ, ಅವನೆಷ್ಟೇ ಕೆಟ್ಟದ್ದನ್ನು ಮಾಡಿದ್ದರೂ ನನ್ನ ಮಗನೆಂಬ ಎಳೆತ ನಿಧಾನದಲ್ಲಿ ಮೊಳೆತು ಬೆಳೆದಿದೆ. ಅವನ ದುಷ್ಟಸಹವಾಸ ದುಷ್ಕೃತ್ಯಗಳಿಗೆ ಪರೋಕ್ಷವಾಗಿ ನಾನೇ ಕಾರಣಳು ಎಂಬ ಹೀನಭಾವ ಕೂಡ. ಕರ್ಣ–ಅರ್ಜುನ ಇಬ್ಬರೂ ಬದುಕಿ ಬಾಳಲೆಂಬ ದೂರದ ಆಸೆ ಕೂಡ. ಈ ಮನಸ್ಸೂ ಎಷ್ಟು ವಿಚಿತ್ರ! ವರ್ಷಾನುವರ್ಷ ಸಾಕಿ ನೆಚ್ಚಿಕೊಂಡ ಭಾವನೆ, ವಿಚಾರ, ನಿರ್ಧಾರಗಳನ್ನು ಕ್ಷಣಮಾತ್ರದಲ್ಲಿ ಬುಡಮೇಲಾಗಿಸಿ ಹೊಸದನ್ನು ಕಚ್ಚಿ ಹಿಡಿದುಬಿಡುತ್ತದೆ.

ಕರ್ಣ–ಅರ್ಜುನರ ಕಾಳಗ–ಇಂದು ವಾಸುದೇವನ ಪರೀಕ್ಷೆಯೂ ಸಹ. ಆ ಹೊತ್ತು ಕರ್ಣನನ್ನು ಕೌಂತೇಯ ಎಂದು ಕರೆದಾಗ ವಾಸುದೇವ ಮತ್ತು ನಾನು ಇಬ್ಬರೂ ಒಂದು

ಸಾಹಸಕ್ಕೆಳಸಿದೆವು. ಅದೃಷ್ಟವನ್ನು ಕೆಣಕಿದ್ದೆವು. ಯುದ್ಧದ ನಿರ್ಣಯವನ್ನು ಪಣಕ್ಕೊಡ್ಡಿದ್ದೆವು. ತಾನು ಕೌಂತೇಯನೆಂಬ ಸತ್ಯವನ್ನು ಕರ್ಣ ದುರ್ಯೋಧನನಲ್ಲಿ ಹೇಳಿದರೆ ಪರಿಣಾಮ? ಅಥವಾ ಧರ್ಮಜನಲ್ಲಿ ಹೋಗಿ ನಾನಿನ್ನ ಅಣ್ಣನೆಂದರೆ ಪರಿಣಾಮ? ಊಹಿಸಲೂ ಅಸಾಧ್ಯ. ಇಂದಿನವರೆಗೆ ಕರ್ಣಜನನದ ಗುಟ್ಟು ರಟ್ಟಾಗದೇ ಉಳಿದಿರುವುದೇ ಅಚ್ಚರಿ.

ನನ್ನ ಮತ್ತು ವಾಸುದೇವನ ನಂಬಿಕೆ ವಿಶ್ವಾಸ ಕರ್ಣನ ಮೌನದ ಮೇಲೆ. ಅವನ ಮತ್ತು ದುರ್ಯೋಧನನ ಅಚಲ ಮಿತ್ರಭಾವದ ಮೇಲೆ! ಕರ್ಣನಿಗೆ ಪಾಂಡವರ ಬಗ್ಗೆ ಎಷ್ಟೇ ದ್ವೇಷ-ಮತ್ಸರವಿದ್ದರೂ ಅಂತರ್ಯದಲ್ಲಿನ ಧರ್ಮ-ಅಧರ್ಮದ ವಿವೇಚನೆ ಗೆಲ್ಲುವುದೆಂಬ ಭರವಸೆಯಿತ್ತು. ಕರ್ಣನಿಗೆ ಸತ್ಯ ಹೇಳುವಲ್ಲಿ ವಾಸುದೇವನದು ಬಹಳ ವಿಚಾರಮಾಡಿ ತೆಗೆದುಕೊಂಡ ನಿರ್ಧಾರವಿರಬೇಕು. ಯುದ್ಧಸಮಯದ ಭೇದಯುಕ್ತಿಯಿರಲೂ ಸಾಕು. ಜನರ ಸ್ವಭಾವವನ್ನು, ಅವರು ಪ್ರತಿಕ್ರಿಯಿಸುವ ರೀತಿಯನ್ನು ಆಳವಾಗಿ ಅರಿಯಬಲ್ಲ ವಾಸುದೇವ ಪ್ರಚಂಡ ಬುದ್ಧಿಯವ! ಇಂಥವ ಮಾಡಿರುವ ದೈತ್ಯ ಸಂಕಲ್ಪ ಏಕಚಕ್ರಾಧಿಪತ್ಯ; ಹೂಡಿರುವುದು ಧರ್ಮಯುದ್ಧ; ಪರಿಣಾಮ-ವೀರಕ್ಷತ್ರಿಯರ ಮೆರವಣಿಗೆ. ಯಮಸದನಕ್ಕೇ! ಯಮಸದನಕ್ಕೆ ಹೋಗಬೇಕಾದ್ದೆ ಮತ್ತೆ. ಸ್ವಂತ ವಿಚಾರ, ಉದ್ದೇಶದ ವಿವೇಕವಿಲ್ಲದ ನಾಯಕರು ಗೆದ್ದೆತ್ತಿನ ಬಾಲ ಹಿಡಿದು ರಣರಂಗಕ್ಕಿಳಿದರೆ ಕೈಗೆ ಸಿಗುವುದು ಬಾಲದ ಕೂದಲು ಸಗಣಿಯಷ್ಟೆ. ವಿನಾ ಕಾರಣ ಯುವಜನತೆಯ ಮಾರಣಹೋಮ. ನಾನು ನ್ಯಾಯವೆಂದು ಹೋರಾಡಿದ್ದು ಈ ಘಟ್ಟ ಮುಟ್ಟುವುದೆಂದು ತಿಳಿದಿರಲಿಲ್ಲ. ನ್ಯಾಯಕ್ಕಾಗಿ ಹೋರಾಡಿದುದೇ ತಪ್ಪೇ? ಕಳೆದ ನಾಲ್ಕು ತಿಂಗಳಿನಿಂದಲೂ ವಾಸುದೇವನ ಮಾತು ತಲೆಯಲ್ಲಿ ಎದೆಯಲ್ಲಿ ಹೊಟ್ಟೆಯಲ್ಲಿ ನುಲಿನುಲಿದು ಬಿಗಿಗೊಂಡು....

"ಯಾವ ನ್ಯಾಯ? ಯಾರ ನ್ಯಾಯ? ಅತ್ತೇ, ಎಲ್ಲರದೂ ಅವರವರ ನಂಬಿಕೆ ವಿಶ್ವಾಸದ ಮೇಲೆ ನಡೆಸಿರುವ ಹೋರಾಟ ಎಲ್ಲರದೂ ನ್ಯಾಯವೇ-ಅವರವರ ದೃಷ್ಟಿಯಲ್ಲಿ ಇರುವೆ ಗೂಡಿಗಾಗಿ, ಇಲಿ ಬಿಲಕ್ಕಾಗಿ, ಆನೆ ಸಿಂಹ ವಾನರ ಕರಡಿ ಕಾಡುಜನ ನಾಡಜನ ಎಲ್ಲರೂ ಸ್ವಾರ್ಥಕ್ಕಾಗಿ ಹೋರಾಡುವವರೇ! ನೀನೇ ಹೇಳು-ತಮ್ಮನಾದ ಪಾಂಡುರಾಜ ಕಾಡಿಗೆ ಹೋದಾಗ ಪಟ್ಟವೇರಿದ ಹಿರಿಯ ಧೃತರಾಷ್ಟ್ರ ಅವನ ಮಗನಿಗೆ ಪಟ್ಟಕಟ್ಟಬೇಕೆಂಬುದರಲ್ಲಿ ಅನ್ಯಾಯವೇನು? ಆದರೆ ಅದಕ್ಕಾಗಿ ಹೊರಗಿನವ ಶಕುನಿಯ ಬೆಂಬಲದಿಂದ ಕುತಂತ್ರಗಳನ್ನು ಉಪಯೋಗಿಸುವುದು ನ್ಯಾಯವೇನು? ಒಮ್ಮೆ ತ್ಯಜಿಸಿ ಹೋದವನ ಪಟ್ಟಾಧಿಕಾರ ಅವನ ಮಗನಿಗೆ ಸಿಗಬೇಕೆಂಬುದು ನ್ಯಾಯವೇನು? ಹದಿಮೂರು ವರ್ಷದ ಗಡುವು ತೀರಿದ ಮೇಲೆ ಮರಳಿ ಕೊಡಬೇಕಾದ ರಾಜ್ಯ ಕೊಡದಿರುವುದು ನ್ಯಾಯವೇನು? ಎಲ್ಲಕ್ಕಿಂತ ಮೊದಲು ಕುರುರಾಜ್ಯದ ಗಡಿಯೊಳಗೇ ಖಾಂಡವಪ್ರಸ್ಥದಲ್ಲಿ ಮತ್ತೊಂದು ಸಿಂಹಾಸನ ಅಧಿಪತ್ಯ ಕೊಡಿಸಿಕೊಟ್ಟವರದು ನ್ಯಾಯವೇನು? ಪ್ರತಿಯೊಬ್ಬರಿಗೂ ಅವರದ್ದೇ ನ್ಯಾಯವೆನಿಸುವುದು ಸಹಜ.

'ಅಂದರೇನರ್ಥ? .....ದುರ್ಯೋಧನನಿಗೆ ರಾಜ್ಯವೇ?......"

ಧರ್ಮರಾಯನದೆಷ್ಟೋ ದುರ್ಯೋಧನನದ್ದೂ ಅಷ್ಟೇ ಹಕ್ಕಿದೆ ಎಂದೆ. ನಿನ್ನದು ರಾಜ್ಯಾಧಿಕಾರ ಯಾರಿಗೆ ಸಿಗಬೇಕೆಂಬ ಹಕ್ಕಿನ ಯೋಚನೆ, ನನಗೆ ರಾಜ್ಯಾಧಿಕಾರಕ್ಕೆ ಅರ್ಹರು ಯಾರು ಬರುತ್ತಾರೋ ಎಂಬ ಯೋಚನೆ..."

"ಹಾಗಾದರೆ ನೀನೇಕೆ ನಮ್ಮ ಪಕ್ಷ ನಿಂತು ಈ ಪರಿ ಯುದ್ಧದ ಸಿದ್ಧತೆ ನಡೆಸಿರುವೆ?"

ತುಂಟನಗೆ ನಕ್ಕು "ನೀನೇ ಕೇಳಿಕೊಂಡಂತೆ ನಿನ್ನ ಮಕ್ಕಳನ್ನು ಗೆಲ್ಲಿಸಲು..." ಇಂತಹ ಹೊತ್ತಿನಲ್ಲೂ ಹಾಸ್ಯ ಬಿಡಲೊಲ್ಲದ ಪ್ರಸನ್ನಚಿತ್ತ ನನ್ನಳಿಯ.

"ನೀನು ಪಾಂಡುರಾಜನ ಉತ್ತರಾಧಿಕಾರಿಯಾಗಿ ಧರ್ಮರಾಯ ಪಟ್ಟಕ್ಕೆ ಬರಬೇಕೆನ್ನುವೆ. ನಾನು ಅರ್ಹ ಧರ್ಮಾಧಿಕಾರಿಯಾಗಿ ಧರ್ಮರಾಯ ಪಟ್ಟವೇರಬೇಕೆನ್ನುವೆ... ಅತ್ತೇ, ನಿನ್ನ ಮಕ್ಕಳೈವರೂ ಐದು ಬೆರಳಾದರೆ ಅವರನ್ನು ಮುಷ್ಟಿಯಾಗಿಸಿರುವ ಹಸ್ತ ನೀನು. ದ್ರೌಪದಿ ಈ ಮುಷ್ಟಿಯಲ್ಲಿರುವ ವಜ್ರವಾದರೆ ಈ ವಜ್ರಧರ ಮುಷ್ಟಿಯನ್ನು ಚಲಾಯಿಸುವ ಬುದ್ಧಿಯೇ ನಾನು ಅತ್ತೇ... ನನ್ನ ಕಾರ್ಯಕ್ಕೆ ಅನುಕೂಲವಾಗಿಸಿಕೊಂಡ ಅವಕಾಶವೇ ಈ ಯುದ್ಧ!"

ನಾನು ಹಸ್ತ, ಪಾಂಡವರು ಬೆರಳುಗಳು! ದಿಟ. ಒಂದೊಂದು ಬೆರಳಿನ ಗುಣಾವಗುಣಗಳನ್ನು ಬಲ್ಲದು ಹಸ್ತ. ಧರ್ಮಜನದು ಧರ್ಮ ನಿಷ್ಠುರತೆ–ಮನೋಕಾಠಿಣ್ಯ. ನನ್ನೊಡನೆ ಸೇರಿಗೆ ಸೇರು–ಸವಾಸೇರಿನ ನಿಲುವು. ಅದೇ ಭೀಮನದು ಹೆಂಗರುಳು. ದೇಹಕಾಠಿಣ್ಯವಿದ್ದರೂ, ಮಾತೂ ಗಡಸಾದರೂ ಮನಸ್ಸು ಮೃದು. ಮಗನಾಗಿ ಸೇವೆ ಮಾಡುವಂತೆ ತಂದೆಯಾಗಿ ರಕ್ಷಣೆ ಕೊಡುವವ. ಊಟದಲ್ಲಿ ಹೊಟ್ಟೆಬಾಕನಾದರೂ ಇನ್ನಾವುದರಲ್ಲೂ ತನಗೆ ಬೇಕೆಂದು ಏನನ್ನೂ ಕೇಳಿದವನಲ್ಲ. ನನ್ನ ಮನದಾಳದವರೆಗೆ ಇಳಿಯಬಲ್ಲವ. ಅರ್ಜುನನದು ನಾಜೂಕು ಸ್ವಭಾವ–ವರ್ತನೆ. ಬೇಗ ಯಾವುದನ್ನೂ ಹೊರಹಾಕುವುದಿಲ್ಲ. ನನ್ನೊಡನೆ ಕಿರಿಯ ಸ್ನೇಹಿತನಂತೆ. ಎಷ್ಟೋ ಅಷ್ಟು, ಮನಸ್ಸಿನ ವಿಷಯದಲ್ಲಿ ಹೊರಹೊರಗೇ! ತನ್ನದೇ ಲೋಕದಲ್ಲಿ ಒಬ್ಬನೇ ವಿಹರಿಸುವ ಕನಸುಗಾರ. ನಕುಲ ಸಹದೇವರು ಇಂದಿಗೂ ನನಗೆ ಮುದ್ದು ಮಕ್ಕಳು. ತಾಯಿಯ ರಕ್ಷೆ, ಹಿತವಾದ ಅಪ್ಪುಗೆ ಬೇಡವೆನ್ನದ ಮನಸು. ತಾಯಿ ಎಲ್ಲವನ್ನು ತಿಳಿದವಳು. ಅವಳು ಮಾಡುವುದೆಲ್ಲ ನಮ್ಮ ಹಿತಕ್ಕೇ ಎನ್ನುವ ಅಪಾರ ನಂಬಿಕೆ... ನಿಜ. ಎಲ್ಲ ಬೆರಳುಗಳಿಗೆ ಹಸ್ತ ಆಧಾರ ನೀಡಿದರೂ ಒಂದೊಂದು ಬೆರಳಿಗೂ ಒಂದೊಂದು ರೀತಿ ಶಕ್ತಿಯೂಡುವಂತೆ, ತಾಯಿ ಎಲ್ಲ ಮಕ್ಕಳನ್ನೂ ಸಮನಾಗಿ ಜೀವ ಒತ್ತೆಯಿಟ್ಟು ನೋಡಿಕೊಳ್ಳುತ್ತಾಳೆಯೇ ಹೊರತು ಸಮಾನ ಪ್ರೀತಿ ಹರಿಸುವುದು ಸಾಧ್ಯವಿಲ್ಲವೇನೋ? ಪ್ರತಿಯೊಬ್ಬನ ಸ್ವಭಾವ ವಿಶಿಷ್ಟವಾದರೂ ಒಬ್ಬರಿಗೊಬ್ಬರು ಸಹಕರಿಸುತ್ತಿರುವುದೇ ನನ್ನ ಭಾಗ್ಯ! ಇದನ್ನು ವ್ಯಾಸಾದಿಗಳು ಗಮನಿಸಿರುವುದೇ ನನ್ನ ಯಶಸ್ಸು. ಈ ಸಹಕಾರವನ್ನು ಅಪೇಕ್ಷಿಸುವ ಕಾರ್ಯವು ಯುದ್ಧಮಾತ್ರವಲ್ಲವೇ? ಇನ್ನೇನು?

"ನಿನ್ನ ಕಾರ್ಯಕ್ಕೆ ಒದಗಿದ ಪಾಂಡವರು ನಿಮಿತ್ತ ಕಾರಣರು! ಅವರ ಈ ಮಹಾಯುದ್ಧವೂ ಭಾಗವೆಂದಾದ ನಿನ್ನ ಮಹತ್ಕಾರ್ಯವಾದರೂ ಏನು ವಾಸುದೇವ"?

"ಲೋಕ ಸಂಗ್ರಹ!"–

ಈ ಮಹಾಯುದ್ಧ ಲೋಕಸಂಗ್ರಹವೋ–ಲೋಕಸಂಹಾರವೋ? ಹದಿನೆಂಟು ಅಕ್ಷೋಹಿಣಿ ಸೈನ್ಯ, ಅದಕ್ಕೆ ತಕ್ಕ ಸಂಖ್ಯೆಯಲ್ಲಿ ಆನೆ ಕುದುರೆಗಳು, ಸೈನ್ಯಕ್ಕೆ ಆಹಾರವಾಗಿ ಆಡುಕುರಿಕೋಣಗಳು ಎಲ್ಲವೂ ರಣಚಂಡಿಗೆ ನೈವೇದ್ಯವಾದರೆ ಊರಲ್ಲಿ ಉಳಿವವರಾರು? ಕಾಗೆ ಗೂಬೆ ಹದ್ದು ನಾಯಿ ನರಿ ಕಳ್ಳಕಾಕರು ತಬ್ಬಲಿ ಮಕ್ಕಳು ಬಲತ್ಕಾರದ ಬಸುರಿನ ಹೆಂಗಸರು ಮಸಣದಲ್ಲಿ ಒಂದು ಕಾಲಿಟ್ಟ ಮುದುಕರು. ಇದು ಲೋಕ ಸಂಗ್ರಹವೇ? ಆರ್ಯಾವರ್ತದ ಸ್ಥಿತಿಯೇ! ಈ ಯುದ್ಧವೇ ಒಂದು ವಿಡಂಬನೆಯಾಗಿದೆ. ಕೊಟ್ಟ ರಾಜ್ಯವನ್ನು ಜೂಜಿನಲ್ಲಿ ಕಳೆದುಕೊಂಡು ಬರಿಗೈಲಿ ನಿಂತವ ಧರ್ಮರಾಯ. ಕಪಟದಲ್ಲಿ ಕಿತ್ತುಕೊಂಡ ರಾಜ್ಯವನ್ನು ಕಾಲಗಡುವು ಮುಗಿದ ಮೇಲೂ ಹಿಂದಿರುಗಿಸದೆ ಅದನ್ನು ಅನುಭವಿಸಲು ನೀತಿ ಮಾರ್ಗ ಬಿಟ್ಟು ನಿಂತವ ದುರ್ಯೋಧನ. ಒಂದು ದೀನ–ಒಂದು ಹೀನ, ಎರಡೂ ಅತ್ತತ್ತ ಹಾಕು ಎಂದಾಯಿತೇ! ವ್ಯಾಸ–ವಾಸುದೇವರೇ ರಾಜಸೂಯಕ್ಕೆ ಬೆಂಬಲಿಸಿ ನಿಲ್ಲಿಸಿದ ಚಕ್ರವರ್ತಿ ಧರ್ಮರಾಯನೇ ಈ ಯುದ್ಧಕ್ಕೆ ಎಡೆಮಾಡಿಕೊಟ್ಟವರಲ್ಲಿ ಮೊದಲಿಗನು. ತನ್ನಲ್ಲಿ ನ್ಯಾಸವಾಗಿದ್ದ ಧರ್ಮರಾಜ್ಯವನ್ನೇ ದ್ಯೂತದಲ್ಲಿ ಪಣವಾಗಿಟ್ಟ! ಧಾರ್ತ್ಯರಾಷ್ಟ್ರರ ದುಷ್ಕೃತ್ಯಗಳನ್ನು ತಡೆದವರಾರು? ಅವರ ಮೋಸದ ಬಲೆಗೆ ತಿಳಿದೂ ತಿಳಿದೂ ನಡೆದು ಬಂದ ಧರ್ಮರಾಯನನ್ನು ತಡೆದವರಾರು? ಭೀಷ್ಮಪಿತಾಮಹ? ಆಚಾರ್ಯ ದ್ರೋಣ? ಪಿತ ಧೃತರಾಷ್ಟ್ರ? ಧರ್ಮಜ್ಞ ಮಂತ್ರಿ ವಿದುರ– ಯಾರೂ ತಡೆಯಲಿಲ್ಲ. ವನವಾಸದಲ್ಲಿದ್ದ ನನ್ನ ಮಕ್ಕಳನ್ನು ಕಂಡಾಗ ಕೃಷ್ಣ ಹೇಳಿದನಂತಲ್ಲ "ನಾನು ಹತ್ತಿರವಿದ್ದಿದ್ದರೆ ಈ ದ್ಯೂತಕ್ಕೇ ಆಸ್ಪದ ಕೊಡುತ್ತಿರಲಿಲ್ಲ.." ದುಷ್ಕೃತ್ಯ ಆಗುವ ಮೊದಲೇ ಎಚ್ಚರ ವಹಿಸಿ ನಿವಾರಿಸುವ ಯೋಗ್ಯತೆ ಕೇವಲ ವಯಸ್ಸಿನಿಂದ ಅಥವಾ ಶಾಸ್ತ್ರ ವ್ಯಾಸಂಗದಿಂದ ಬರುವುದಿಲ್ಲ. ಆತ್ಮಬಲ ಋಜು ಸ್ವಭಾವವೂ ಬೇಕು. ದುಷ್ಟರನ್ನು ಸರಿದಾರಿಗೆ ತರುವ, ಸಭ್ಯರನ್ನು ಸರಿದಾರಿಯಲ್ಲೇ ಹಿಡಿದಿಡುವ ಸಾಮರ್ಥ್ಯ ಆತ್ಮಸ್ಥೈರ್ಯವಿರುವ ವಾಸುದೇವನಂತಹ, ವ್ಯಾಸರಂತಹ ಧೀರರಿಗೆ ಮಾತ್ರ ಲಭ್ಯ. ಇಂತಹ ಧೀರರು ಮಾತ್ರ ಲೋಕಸಂಗ್ರಹ ಬೃಹತ್ ಯೋಜನೆಯನ್ನು ಕಲ್ಪಿಸಿ ಕಾರ್ಯಗತ ಮಾಡುವರು.

ವೇದವ್ಯಾಸರ ಲೋಕಸಂಗ್ರಹದ ಮಹಾಯೋಜನೆಯಲ್ಲಿ ಯುದ್ಧದ ಸುಳಿವೇ ಇರಲಿಲ್ಲವಂತೆ. ಆದರೆ ಈಗಿನ ಸಮಯದ ಆರ್ಯಕ್ಷತ್ರಿಯರ ಜೀವನ ರೀತಿಯ ದೋಷಗಳು, ವ್ಯಸನಗಳು, ಅಧಃಪತನದ ಗುಣಗಳಿಂದಾಗಿಯೇ ಈ ಮಹಾಯುದ್ಧ ನಡೆದಿರುವುದು.

ರಾಜ್ಯ ವಿಸ್ತರಣೆಯೆಂದು ಆಳುತ್ತಿರುವ ರಾಜರ ಮೇಲೆ ದಂಡೆತ್ತಿ ಹೋಗಿ ಕೊಲೆ ಅಥವಾ ಸೆರೆಹಿಡಿದು, ಸೋತ ರಾಜ್ಯದ ಸುಲಿಗೆ ಮಾಡುವ ರೀತಿ; ಅಂತೆಯೇ ಗಿರಿ ಕಾನನಗಳಿಗೆ ನುಗ್ಗಿ ಅಲ್ಲಿಯ ಆರ್ಯೇತರ ಜನರನ್ನು ಹಿಂಸಿಸಿ ಹಿಡಿದುತಂದು ಪ್ರಾಣಿಗಳಂತೆ ನಡೆಸಿಕೊಂಡು ಊಳಿಗಕ್ಕೆ ಹಚ್ಚುವುದು; ರಾಜಕುವರಿಯರನ್ನು ತಮ್ಮ ರಾಜಕೀಯ ಸಂಚು–ಸಹಕಾರಗಳಿಗೆ ಒತ್ತೆಯಿಡುವ ವಿವಾಹ ಪದ್ಧತಿ; ಅವರ ಇಚ್ಛೆಯಿಲ್ಲದೆ ಶತ್ರುವಿಗೋ ಮಿತ್ರನಿಗೋ ಸಾಗಹಾಕಿ ಲಾಭ ಪಡೆವ ವಿವಾಹನೀತಿ; ತಮಗೆ ಬೇಕೆಂದು ಸ್ವಯಂವರ ಮಂಟಪದಿಂದ ವಧುಗಳನ್ನು

ಹಾರಿಸಿಕೊಂಡು ಹೋಗುವ ಕ್ಷತ್ರಿಯ ನೀತಿ; ರಾಜ್ಯದ ಆಡಳಿತವನ್ನು ದಕ್ಷ ಧರ್ಮಿಷ್ಠನೆಂದು ಚುನಾಯಿತ ವ್ಯಕ್ತಿಗೆ ವಹಿಸುವ ಬದಲು ವಂಶಾನುಗತವೆಂದು ಹೇಳಿ ದುಷ್ಟ ಅಶಿಕ್ಷಿತ ಅಯೋಗ್ಯವ್ಯಕ್ತಿಗೆ ಕೊಡುವ ರೀತಿ; ವಂಶದಲ್ಲಿ ಯಾರೂ ಉಳಿಯದೆ ಇದ್ದರೆ ವಿಧವೆಯರಲ್ಲೇ ಇಷ್ಟವಿಲ್ಲದಿದ್ದರೂ ಮತ್ತೊಬ್ಬರಿಂದ ಗರ್ಭ ಬೆಳೆಸಿ, ರಾಜ್ಯಾಧಿಕಾರ ವಂಶದಲ್ಲೇ ಉಳಿಯಬೇಕೆಂಬ ಆಗ್ರಹ; ಅಧಿಕಾರದ ಆಸೆಯಿಂದ ವಾನಪ್ರಸ್ಥ ಸಂನ್ಯಾಸದ ವಯಸ್ಸಾದರೂ ಇನ್ನೂ ಪಟ್ಟು ಬಿಡುಲೊಲ್ಲದ ಹಿರಿಯರಾಜರು; ಅಂತೆಯೇ ಅಧಿಕಾರದ ಆಸೆಗೆ ಹಿರಿಯರನ್ನೇ ಸೆರೆಯಲ್ಲಿಡುವ ಕಿರಿಯರು; ರಾಜ್ಯದ ಕ್ಷೇಮಾಭಿವೃದ್ಧಿಗಾಗಿ ಆಡಳಿತದ ಹೊಣೆ ಹೊರುವ, ಹೊರಗಿನ ಉಪಟಳವನ್ನು ಹತ್ತಿಕ್ಕುವ ಪ್ರಜಾಸೇವಕರೆಂದು ತಮ್ಮನ್ನು ತಿಳಿಯದೆ ಪ್ರಜೆಗಳ ಮೇಲೆ ಅಧಿಕಾರವಿರುವ ಪ್ರಭುಗಳೆಂದು, ರಾಜ್ಯದ ಬೊಕ್ಕಸ ತಮ್ಮ ವೈಯಕ್ತಿಕ ಬಳಕೆಗೆನ್ನುವ ಉಡಾಳರ ನೀತಿ ರೀತಿ; ದನ ಮೇಯುವಂತೆ ರಾಣೀವಾಸದ ಸ್ತ್ರೀಯರನ್ನು ಮೇಯುವ ರಾಜಪುರುಷರ ಅತಿ ಕಾಮುಕತೆ, ಹಿಡಿತವಿಲ್ಲದ ವಿಷಯಲೋಲುಪತೆ, ಮದ್ಯಪಾನ, ಮನರಂಜನೆಯೆಂದು ಆಡುವ ಜೂಜು, ಅದಕ್ಕಾಗಿ ಇಡುವ ಪಣ ಮೃಗಯಾ ವಿಹಾರವೆಂದು ಕಾಡನ್ನೇ ಹಾಳುಗೆಡುವ ವ್ಯಸನ. ಮೊದಲು ಈ ದೋಷಗಳನ್ನು ಹೆರೆದು ಹಾಕಿದ ನಂತರವೇ ಸಂಗ್ರಹಕಾರ್ಯ ಸಾಧ್ಯವಲ್ಲವೇ?

ನನ್ನ ಸಂಸಾರ, ನನ್ನ ಮಕ್ಕಳು, ನನ್ನ ಕಷ್ಟ, ನನ್ನ ದುಃಖ-ಸಂಕಟ ಎಂದು ಕೂಪಮಂಡೂಕದಂತೆ 'ನನ್ನ'ಲ್ಲೇ ಇದ್ದ ಕುಂತಿಗೆ ಒಂದು ಯುದ್ಧದ ಹಿಂದೆ ಎಷ್ಟೆಲ್ಲ ರಾಜಕೀಯವಿದೆ, ಸಮಾಜದ ಉಳಿವು-ಅಳಿವು ನಿರ್ಭರವಾಗಿದೆ ಎಂದು ಅರಿವಾದದ್ದು ವಾಸುದೇವ ಸಂಧಾನಕ್ಕೆಂದು ಇಲ್ಲಿಗೆ ಬಂದಾಗಲೇ. ಈ ಯುದ್ಧದ ಕಾರಣ ಧರ್ಮಜನ ರಾಜಸೂಯಯಾಗದಲ್ಲೇ ಮೊಳಕೆಯೊಡೆಯಿತಂತೆ.

ಹಾಗೆಯೇ ಅಲ್ಲಿಯವರೆಗೆ ಯಾದವ ಜನಪದದ ಏಳಿಗೆಗೆ ಸೀಮಿತವಾಗಿದ್ದ ವಾಸುದೇವನ ಸಂಗ್ರಹಕಾರ್ಯ ಇಡೀ ಆರ್ಯಾವರ್ತಕ್ಕೇ ಹಬ್ಬಿಕೊಂಡಿದ್ದೂ ಇದೇ ಯಾಗದಲ್ಲಿ. ಅದಕ್ಕಾಗಿಯೇ ಎಷ್ಟೋ ಹಿರಿಯ ತಲೆಗಳಿದ್ದರೂ ಜನಹಿತವನ್ನು ಕಾರ್ಯಗತ ಮಾಡುವ ಯುವಪೀಳಿಗೆಗೆ ಮನ್ನಣೆ ಕೊಟ್ಟು ವಾಸುದೇವ-ಕೃಷ್ಣನಿಗೆ ಅಗ್ರಪೂಜೆ ಮಾಡಿದುದಂತೆ. ಪ್ರಜಾಹಿತ ಯೋಜನೆಗಳಿಗೆ ಯಾರೇ ಅಡ್ಡ ಬಂದರೂ ಶಿಕ್ಷಿಸಿ ಅಡೆತಡೆಗಳನ್ನು ನಿವಾರಿಸಿ ಮುನ್ನುಗ್ಗುವ ಸಾಹಸ ಚಾತುರ್ಯ ಕೃಷ್ಣನಲ್ಲಿದ್ದುದನ್ನು ಕಂಡ ವ್ಯಾಸಾದಿಮುನಿಗಳು ಭೀಷ್ಮಾದಿ ಕ್ಷತ್ರಿಯರು ಒಮ್ಮತದಿಂದ ಕೃಷ್ಣನನ್ನು ಅಗ್ರಪೂಜೆಗೆ ನಿಲ್ಲಿಸಿ ಸಂಗ್ರಹಕಾರ್ಯವನ್ನು ಆರ್ಯಲೋಕಕ್ಕೆ ವಿಸ್ತರಿಸುವ ಅಧಿಕಾರ-ಹೊಣೆ ಎರಡನ್ನೂ ಅವನ ಮೇಲಿರಿಸಿದ್ದರು. ಕೃಷ್ಣನಿಗೆ ತನ್ನ ಈ ಗುರುತರ ಕಾರ್ಯವನ್ನು ನಿರ್ವಹಿಸಲು ಕಂಡ ವಿಶ್ವಾಸಾರ್ಹ, ದಕ್ಷ, ಕಾರ್ಯಕುಶಲಿ ಯುವಕರು-ಸಾತ್ಯಕಿ, ಉದ್ಧವ, ಶ್ವೇತಕೇತು, ದೃಷ್ಟದ್ಯುಮ್ನ ಮುಂತಾಗಿ. ಅವನ ಸಂಪೂರ್ಣ ಭರವಸೆ ಪಾಂಡವರಲ್ಲಿ-ಅನೇಕ ಕಾರಣಗಳಿಗಾಗಿ. ಕೃಷ್ಣನೇ ವಿದುರನಲ್ಲಿ ಹೇಳಿಕೊಂಡಿದ್ದನಂತೆ... "ಅತ್ತೆ ಕುಂತಿ ಮಕ್ಕಳನ್ನು ಬೆಳೆಸಿರುವ ರೀತಿ ಬಹು ಶ್ಲಾಘನೀಯ. ಪಾಂಡವರೈವರು ಕುರುರಾಜ್ಯಕ್ಕೆ ಅವಳಿತ್ತ ದತ್ತಿ... ಅವರಿಗೊದಗಿದ

ಕಷ್ಟಗಳೆಲ್ಲವನ್ನೂ ಪಾಂಡವರನ್ನು ಪುಟಕ್ಕಿಟ್ಟ ಚಿನ್ನವಾಗಿಸುವ ಬೆಂಕಿಯನ್ನಾಗಿಸಿಕೊಂಡಳು. ಅಸಹಾಯಕರನ್ನಾಗಿಸಲಿಲ್ಲ. ಕಷ್ಟ ಸಹಿಷ್ಣುತೆ; ವಿಷಮ ಸಮಯದಲ್ಲೂ ಧರ್ಮ ಕಾಯ್ದುಕೊಳ್ಳುವ ತಾಳ್ಮೆ; ದುಷ್ಟದಾಯಾದಿಗಳ ಬಗ್ಗೆಯೂ ಮಾತ್ಸರ್ಯ ಬೆಳೆಯಗೊಡದ ಎಚ್ಚರ; ಅವರಲ್ಲಿರುವ ಐಕ್ಯತೆ; ಹಿರಿಯರಲ್ಲಿ ತೋರುವ ಗೌರವ; ವಿನಯ ವಿಧೇಯತೆ; ಶಸ್ತ್ರ ಶಾಸ್ತ್ರಗಳೆರಡರಲ್ಲೂ ಪಾಂಡಿತ್ಯ; ಕೊಟ್ಟ ಭಾಷೆ ತೊಟ್ಟ ಶಪಥ ಉಳಿಸಿಕೊಳ್ಳುವ ಸತ್ಯಪ್ರಿಯತೆ; ಜಂಬವೆನಿಸಿಕೊಳ್ಳದ ಆತ್ಮಾಭಿಮಾನ; ಶ್ರೇಯಸ್ಸಿಗಾಗಿ ಪ್ರೇಯಸ್ಸನ್ನು ತ್ಯಾಗಮಾಡುವ ವಿವೇಕ, ದೂರದೃಷ್ಟಿ; ಸ್ತ್ರೀಯರಲ್ಲಿ ಗೌರವ–ಪರದಾರಾ ಸೋದರತ್ವ; ಪರರ ಕಷ್ಟಕ್ಕೆ ಮಿಡಿಯುವ ಮನ ಮತ್ತು ಅವರ ಕಷ್ಟನಿವಾರಣೆಗೆ ತಕ್ಷಣವೇ ಕಾರ್ಯಕ್ಕಿಳಿಯುವ ಉತ್ಸಾಹ, ಅನುಕಂಪ; ಧೈರ್ಯ, ಸ್ಥೈರ್ಯ, ಆರೋಗ್ಯ; ಎಲ್ಲವೂ ನನ್ನನ್ನು ಅವರೊಂದಿಗೆ ಪ್ರೀತಿ ಸ್ನೇಹದಲ್ಲಿ ಬಂಧಿಸಿದ ಸರಪಳಿಗಳು. ಧರ್ಮರಾಜ್ಯ ಸಾಧ್ಯವಾಗುವುದಾದರೆ ಅದು ಪಾಂಡವರಿಂದ ಮಾತ್ರ. ಅದಕ್ಕಾಗಿಯೇ ಅವರಿಗೇನೇ ಕಷ್ಟ ಬಂದರೂ ನನ್ನ ಸಹಾಯ ಸಿದ್ಧ. ಅವರೇನೇ ಕೇಳಿದರೂ ನಾನು ಕೊಡಲು ಸಿದ್ಧ."

ನನ್ನಳಿಯನ ಲೋಕಸಂಗ್ರಹಕಾರ್ಯದ ರೂಪರೇಷೆ ಮನದಟ್ಟಾಗುವಂತೆ ವಿದುರ ವಿವರಿಸಿ ಹೇಳಿದಾಗಲೇ ಗೊತ್ತಾದದ್ದು ಅದರ ಆಳ ಅಗಲ–ಅನಿವಾರ್ಯತೆ.

ಸುಮಾರು ಸಾವಿರದೈನೂರು ಮೈಲಿಗಳ ಉದ್ದಕ್ಕೂ ಹರಿವ ಗಂಗಾನದಿಯ, ಉಪನದಿಗಳ ಇಕ್ಕೆಲದ ಫಲವತ್ತಾದ ವಿಶಾಲ ಬಯಲು ಭೂಮಿ ಕುರು, ಪಾಂಚಾಲ, ಮಥುರ, ಮತ್ಸ್ಯ, ಚೇದಿ, ಕಾಶಿ, ಮಗಧ, ಅಂಗ ಎಂದೆಲ್ಲ ಹಂಚಿ ಹೋಗಿದ್ದು ಪದೇ ಪದೇ ಅಂತರ್ಯುದ್ಧಗಳಾಗುತ್ತಿದ್ದು ಬೆಳೆದದ್ದೆಲ್ಲಾ ತಿಂದದ್ದೆಲ್ಲಾ ಕಾದಾಡಿ ಸಾಯಲಿಕ್ಕೇ ಎಂದಾಗಿ ಜನರ ಕ್ಷೇಮಾಭ್ಯುದಯ ಅಷ್ಟು ಕುಂಠಿತವಾಗಿತ್ತು. ಉತ್ತರದ ಗಾಂಧಾರ, ಬಾಹ್ಲೀಕ, ಮದ್ರದವರೂ ದಕ್ಷಿಣದ ವಿದರ್ಭ, ಕಳಿಂಗದವರೂ ಗಂಗಾಬಯಲಿನ ಕೃಷಿಕಭೂಮಿಗೆ ಮುತ್ತಿಗೆಯಿಡುವ ಬದಲಿಗೆ ಅವರನ್ನು ಒಂದೇ ಅಧಿಕಾರವ್ಯಾಪ್ತಿಗೆ ಸೇರಿಸಿ ಒಂದೇ ಆರ್ಯಾವರ್ತ ಮಾಡಿದರೆ ಸರ್ವಜನಾನ್ವಯ ವ್ಯವಸ್ಥಿತ ಆಡಳಿತದಿಂದ ಹೆಚ್ಚು ಕ್ಷೇಮಕರ, ಲಾಭದಾಯಕ ಜನಜೀವನ; ವೈದಿಕ ಸಂಸ್ಕೃತಿ; ವಿಜ್ಞಾನದ ವಿಕಾಸಕ್ಕೆ ಅನುಕೂಲ ಸ್ಥಿತಿ ಎಂದು ಮನಗಂಡು ಅದಕ್ಕಾಗಿ ಯೋಜನೆ ಹಾಕಿದ ಮೂಲವ್ಯಕ್ತಿ ವ್ಯಾಸರಂತೆ. ಈ ಯೋಜನೆಯ ಸುಳಿವು ಇತರ ಋಷಿಮುನಿಗಳಿಗೆ ಗೊತ್ತಿದ್ದು, ಪೂರ್ಣ ಸಹಮತಿ ಸಹಕಾರ ಸಿಕ್ಕಿತು. ಈ ಯೋಜನೆಯಂತೆ ಮೊದಲು ಆರ್ಯಾವರ್ತದ ಹಿರಿಯ ಕಿರಿಯ ರಾಜರನ್ನು ರಾಜಸೂಯಯಾಗದ ಮೂಲಕ ಒಂದುಗೂಡಿಸಿದ್ದು.

ಆರ್ಯಧರ್ಮಾನುಸಾರ ರಾಜಸೂಯ ಯಾಗ ಅತಿ ಮಹತ್ವದ ಸಂಗತಿ. ರಾಜಸೂಯ ಯಾಗ ಮಾಡುವ ರಾಜನು ತನ್ನ ಸಮಕಾಲೀನ ರಾಜರನ್ನೆಲ್ಲ ಯಾಗಕ್ಕೆ ಆಹ್ವಾನಿಸುವನು. ಕಪ್ಪಕೊಟ್ಟು ಆಹ್ವಾನ ಸ್ವೀಕರಿಸಿದವರು ಮಿತ್ರರಾಜರಾದರೂ ಆ ರಾಜನ ಅಧಿಕಾರವನ್ನು ಸ್ವೀಕರಿಸಿದಂತೆ. ತನ್ನ ಆಹ್ವಾನ ಸ್ವೀಕರಿಸದವನನ್ನು ಯುದ್ಧದಲ್ಲಿ ಗೆದ್ದು ಅಧಿಕಾರವನ್ನು ಸ್ಥಾಪಿಸಬೇಕಾಗುವುದು. ಯುದ್ಧದಲ್ಲಿ ಸೋತ ರಾಜನಿಗೆ ರಾಜ್ಯವನ್ನು ಮರಳಿಸುವುದರ ಮೂಲಕ ಅವನನ್ನು ಮಿತ್ರವರ್ಗಕ್ಕೆ ತರುವುದು. ಯುದ್ಧದಲ್ಲಿ ಹತನಾದರೆ ಅವನ ಉತ್ತರಾಧಿಕಾರಿಗೆ

ಪಟ್ಟಕಟ್ಟಿ, ರಾಜ್ಯವನ್ನು ವಹಿಸುವುದು ನೀತಿಮಾರ್ಗ. ಹೀಗೆ ಸಮಕಾಲೀನ ರಾಜ್ಯಗಳೆಲ್ಲ ರಾಜಸೂಯಯಾಗ ಮಾಡಿದ ರಾಜನ ಅಧಿಕಾರವ್ಯಾಪ್ತಿಗೆ ಒಳಪಡುತ್ತವೆ. ಹೀಗೆ ಸಾಮ್ರಾಟ ಯಾ ಚಕ್ರವರ್ತಿಯಾದ ರಾಜನಿಗೆ ಮಿತ್ರ ರಾಜರಿಂದ ಜನಬಲ, ಧನಬಲ, ಸೈನ್ಯಬಲ, ಅಧಿಕಾರಬಲದೊಂದಿಗೆ ನೈತಿಕಬಲವೂ ಸಿಗುವುದು. ನೈತಿಕ ಅಧಿಕಾರವಿರುವ ಸಾಮ್ರಾಟನಿಗೆ ನೈತಿಕ ಹೊಣೆಯೂ ಅನಿವಾರ್ಯ, ವಿವೇಕಪೂರ್ಣ ಪ್ರಜಾಹಿತ ನಿರ್ಧಾರಕಾರ್ಯಗಳು ಅವನ ಹೊಣೆ. ಈ ಹೊಣೆಯನ್ನು ನಿಭಾಯಿಸಲು ನೀತಿ ಸಂಹಿತೆಗಳು, ಧರ್ಮಶಾಸ್ತ್ರಗಳೇ; ಅನುಭವಿ ತತ್ವಜ್ಞಾನಿಗಳೇ ಮಾರ್ಗದರ್ಶಿಗಳು.

ರಾಜಸೂಯಯಾಗ ಮಾಡಬಲ್ಲ, ವೈದಿಕ ನೀತಿಸಂಹಿತೆಯನುಸಾರ ರಾಜ್ಯಭಾರ ಮಾಡುತ್ತಿರುವ ಸನ್ಮಾರ್ಗಿ ರಾಜನೊಬ್ಬನನ್ನು ಬೆಂಬಲಿಸಿ ರಾಜಸೂಯಯಾಗದ ಮೂಲಕ ಸಾಮ್ರಾಟ ಪದವಿ ಕೊಟ್ಟು ಮುಂದೆ ತರುವುದು. ಈ ಸುವ್ಯವಸ್ಥಿತ ರಾಜ್ಯಗಳ ಎಲ್ಲೆಯಾಚೆಯಿರುವ ಆರ್ಯೇತರ ಜನಾಂಗವನ್ನು ಈ ಆಡಳಿತದ ತೆಕ್ಕೆಗೇ ತರುವುದು. ಬಲವಂತದಿಂದಲ್ಲ, ಸ್ನೇಹ ಪ್ರೀತಿ ತೋರಿಸಿ–ಅವರ ಕಷ್ಟ ಆತಂಕಗಳಿಗೆ ಸ್ಪಂದಿಸಿ ಸೂಕ್ತ ಪರಿಹಾರ ಕೊಟ್ಟೋ–ಸೂಚಿಸಿಯೋ ಅವರ ಮನವೊಲಿಸಿಕೊಂಡು ಅವರ ನಂಬಿಕೆ ಶ್ರದ್ಧೆ ಗಳಿಸಿಕೊಂಡು, ಅವರ ಜೀವನ ವಿಧಾನವನ್ನು ಅಹಿಂಸಾಮಾರ್ಗದಲ್ಲೇ ಆರ್ಯನೀತಿಗೆ ತಿದ್ದುವುದು. ಇಡೀ ಭಾರತವರ್ಷವನ್ನು ಆರೋಗ್ಯವಂತ, ದೃಢಮನಸ್ಕ, ಸಮೃದ್ಧ, ವಿವಿಧ ಸಾಂಸ್ಕೃತಿಕ ಜನತೆಯ ದೇಶವಾಗಿ ಮಾಡುವುದು. ಭರತ ಖಂಡಕ್ಕೆ ಸೀಮಿತವಾಗಿಡದೆ, ಹೊರದೇಶಗಳಿಗೂ ಆಯಾ ಜೀವನಶೈಲಿ ಹಬ್ಬಿಸುವುದು. ಈ ತರಹದ ಬೃಹತ್ ಯೋಜನೆಗೆ ಕಾಲಮಿತಿ ಇಲ್ಲ ಸಲ್ಲ. ಜನಬಲಿಯ ಇತಿಮಿತಿಯೂ ಇಲ್ಲ!

ಈ ಯೋಜನೆಯಂತೆ ಆರ್ಯರಾಜರನ್ನು ಒಗ್ಗೂಡಿಸುವುದೇ ಮಹಾಪ್ರಯಾಸವಾಗಿತ್ತು. ಮೊದಲ ಹಂತದಲ್ಲೇ ಅಡ್ಡಗಾಲಿಟ್ಟವ ಮಥುರೆಯ ಕ್ರೂರ ದೊರೆ ಕಂಸ. ರಾಜ್ಯದ ಅಧಿಕಾರಕ್ಕಾಗಿ ತನ್ನ ತಂದೆಯನ್ನು ಸೆರೆಯಲ್ಲಿಟ್ಟವ. ತನ್ನ ತಂಗಿ–ಭಾವರನ್ನು ಸೆರೆಮನೆಗೆ ದೂಡಿದವ. ಸ್ವಂತ ತಂಗಿಯ ಹಸುಳೆಗಳನ್ನು ನೆಲಕ್ಕಪ್ಪಳಿಸಿ ಕೊಂದವ. ಒಂದು ಮಗುವನ್ನು ಹುಡುಕಿಸಲಾರದೆ ಅದೇ ವಯಸ್ಸಿನ ನೂರಾರು ಮಕ್ಕಳನ್ನು ನಿರ್ದಯನಾಗಿ ಕೊಲ್ಲಿಸಿದವ. ಇವೆಲ್ಲ ಹಿಂಸಾಚಾರದ ಬಗ್ಗೆ ಚಕಾರವೆತ್ತುವವರನ್ನು ಇಲ್ಲವಾಗಿಸುತ್ತ ಬಂದವ. ಇವನ ದಬ್ಬಾಳಿಕೆಗೆ ಒತ್ತಾಸೆ ನಿಂತವ ಹೆಣ್ಣುಕೊಟ್ಟ ಮಾವ ಜರಾಸಂಧ.

ಮಗಧರಾಜ ಜರಾಸಂಧ ನಿರಂಕುಶಪ್ರಭು, ಹಿಂದೆಂದೂ ಕೇಳಿರದ ನೋಡಿರದ ಕ್ರೂರ ಯಾಗದ ಸಿದ್ಧತೆ ನಡೆಸಿದ್ದ. ನೂರುಜನ ರಾಜರ ಬಲಿಯೊಂದಿಗೆ ರಾಜಸೂಯ ಮಾಡಿ ಚಕ್ರವರ್ತಿಯಾಗುವವನಿದ್ದ. ಆಗಲೇ ತೊಂಬತ್ತಕ್ಕೂ ಮೀರಿ ಸೋಲಿಸಿದ ರಾಜರನ್ನು ಸೆರೆಯಲ್ಲಿಟ್ಟಿದ್ದ. ಕಂಸ–ಜರಾಸಂಧರ ಹಿಂಬಾಲಕರು–ದಂತವಕ್ರ ಶಿಶುಪಾಲ ರುಕ್ಮಿ, ಭಗದತ್ತ. ತನ್ನ ಪ್ರಾಣಕ್ಕೇ ಅಪಾಯ ಬಂದಾಗ ಕಂಸನನ್ನು ಕೊಂದ ಕೃಷ್ಣ. ಅವನ ಜಯಕಾರ ಮಾಡಿತ್ತು ಒಗ್ಗೂಡಿದ ಯಾದವ ಜನತೆ. ಕಂಸನ ಸಾವಿನಿಂದ ಜರಾಸಂಧನ ಹಂಚಿಕೆ ಅಸ್ತವ್ಯಸ್ತವಾಗಿ ಅಧಿಕಾರ ಪ್ರಭಾವ ಬದಲಾಗಿದ್ದು ಅವನ ತಲೆಕೆಡಿಸಿತು. ವ್ಯಾಸರ ಯೋಜನೆಯಂತೆ ದುಷ್ಟರನ್ನೂ

ದಾರಿಗೆ ತರಬೇಕಾಗಿದ್ದದ್ದು ಹೋಗಿ, ಅವರನ್ನು ನಿವಾರಿಸುವುದು ಅನಿವಾರ್ಯವಾಯಿತು. ಈ ಕಾರ್ಯವೂ ಕೃಷ್ಣನಿಂದಲೇ. ಮೊದಲಿಗೆ ಜರಾಸಂಧನಿಗೆ ಮರಣದಂಡನೆ ಭೀಮನ ಮೂಲಕ. ನಂತರವೇ ಧರ್ಮಜನ ರಾಜಸೂಯಯಾಗದ ಸಿದ್ಧತೆ ಸುಸೂತ್ರವಾದದ್ದು. ಆದರೇನು, ಯಾಗಸಭೆಯಲ್ಲೇ ಕೃಷ್ಣನಿಂದ ಮತ್ತೊಂದು ದುಷ್ಟಸಂಹಾರ–ಶಿಶುಪಾಲನದು. ಒಟ್ಟಿನಲ್ಲಿ ಧರ್ಮಜ ನಡೆಸಿದ ರಾಜಸೂಯಯಾಗದಿಂದ ಧರ್ಮಜನ ಚಕ್ರವರ್ತಿ ಪಟ್ಟ ಸುಸ್ಥಿರವಾಗಿ ವ್ಯಾಸರು ಬಯಸಿದ ಧರ್ಮಯುತ ಆಡಳಿತದ ನಾಂದಿಯಾಯಿತು. ಅಂತೆಯೇ ಕೌರವರಲ್ಲಿ ಹೊಟ್ಟೆಕಿಚ್ಚು ಅಂಕುರವಾಯಿತು. ಧರ್ಮಜನ ಆಡಳಿತಾಧಿಕಾರಕ್ಕೆ ಮುಳ್ಳಾಗಿ ಬೆಳೆಯಿತು. ವ್ಯಾಸರ ಕನಸು ಕೃಷ್ಣನ ಪ್ರಯತ್ನ ರಾಜಸೂಯದೊಂದಿಗೆ ಫಲಿಸಿದರೂ ಧರ್ಮಜನ ಒಂದು ಲೆತ್ತದಾಟದ ದುಡುಕಿನಿಂದಾಗಿ ಒಂದು ಘಳಿಗೆಯಲ್ಲಿ ಕೈಜಾರಿ ಮಣ್ಣುಗೂಡಿತ್ತು. ಲೋಕಸಂಗ್ರಹಕಾರ್ಯ ಹದಿಮೂರು ವರ್ಷಗಳವರೆಗೆ ಕುಂಟಿತ್ತಲ್ಲದೆ ದುರ್ಯೋಧನಾದಿಗಳ ಹಟದಿಂದಾಗಿ ಈಗ ಯುದ್ಧ ಅನಿವಾರ್ಯ! ಅಹಿಂಸಾಮಾರ್ಗದಲ್ಲಿ ನಡೆಯಬೇಕಿದ್ದ ಲೋಕಸಂಗ್ರಹ ಹಿಂಸಾಮಾರ್ಗಕ್ಕೆ ಇಳಿದಿದೆ. ಯಾವಾಗಲೂ ಅಹಿಂಸಾ ಪರಮೋಧರ್ಮ ಎನ್ನುವ ಧರ್ಮರಾಯ ಚಕ್ರವರ್ತಿ ಪದವಿಗೆ ಅರ್ಹನೇ? ಈ ಯುದ್ಧದಲ್ಲಿ ಮತ್ತೆ ಗಳಿಸಿಕೊಟ್ಟ ರಾಜ್ಯವನ್ನು ಆಳುವ, ಕಾಪಾಡಿಕೊಳ್ಳುವ ಕೆಚ್ಚೆದೆ ಇದೆಯೇ? 'ನೀವು ಹಿರಿಯರಿದ್ದೀರಿ. ನೀವೇ ಸಿಂಹಾಸನವನ್ನೇರಿ' ಎಂದು ಧೃತರಾಷ್ಟ್ರನಿಗೇ ಕೊಟ್ಟು ಕೈಕಟ್ಟಿ ನಿಲ್ಲುವ ಹಿಂಜರಿಕೆ! ಕ್ಷಾತ್ರಗುಣವಿಲ್ಲದವನನ್ನು ನಂಬಿದರೆ ಮಣ್ಣದೋಣಿಯಲ್ಲಿ ಗಂಗಾಸಾಗರ ದಾಟಿದಂತೆ ಲೋಕಸಂಗ್ರಹವಾದೀತೆ! ಸುತ್ತಿ ಬಳಸಿ ಮತ್ತೆ ಅಲಿಗೇ... ನನಗೆ ಧರ್ಮರಾಯನಲ್ಲೇಕಷ್ಟು ಅಪನಂಬಿಕೆ? ಅವನ ಒಳಗೊಳಗನ್ನು ನಾನಲ್ಲದೆ ಮತ್ತಾರು ಬಲ್ಲರು?

ಧರ್ಮರಾಯ ಪಾಪಭೀರು. ಭೀಷ್ಮ, ವಿದುರ, ದ್ರೋಣ ಎಲ್ಲರೂ ಪಾಪಭೀರುಗಳೇ. ಆಗುತ್ತಿರುವ ಪಾಪವನ್ನು ನೋಡುತ್ತ ಕುಳಿತವರು ಅಷ್ಟೇ! ಸಭಾಮಧ್ಯಕ್ಕೆ ಒಂಟಿ ಬಟ್ಟೆಯಲ್ಲೇ ಎಳೆದು ತರಲ್ಪಟ್ಟ ದ್ರೌಪದಿ ದುಶ್ಶಾಸನನ ದುಷ್ಟಕೈಗಳನ್ನು ನಿವಾರಿಸುತ್ತ ಅತ್ತಿಂದಿತ್ತ ಕೊಸರಿಕೊಳ್ಳುತ್ತ ಒಂದುಕೈಯಲ್ಲಿ ತನ್ನ ಕೂದಲನ್ನು ಬಿಗಿ ಹಿಡಿದುಕೊಳ್ಳುತ್ತ ಹಿರಿಯರೆನಿಕೊಂಡವರಲ್ಲಿ ರಕ್ಷಣೆ ಬೇಡಿದರೆ, ಪಾತಕಿಗಳನ್ನು ಶಿಕ್ಷಿಸುವುದಿರಲೀ ಒಂದು ಗದ್ದರಿಕೆಯನ್ನೂ ಹಾಕದೆ, ಬದಲಿಗೆ ಧರ್ಮದ ಬಗ್ಗೆ ವಿಮರ್ಶಿಸುತ್ತ ದ್ರೌಪದಿಗೆ ಧರ್ಮಸೂಕ್ಷ್ಮ ಹೇಳುತ್ತ... ಅಷ್ಟರಲ್ಲಾಗಲೇ ಹುಲ್ಲೆ ಮೇಲೆರಗಿದ ಕತ್ತೆಕಿರುಬನಂತೆ ದುಶ್ಶಾಸನ ಗಹಗಹಿಸಿ ನಗುತ್ತ ದ್ರೌಪದಿಯ ಸೆರೆಗನ್ನೆಳೆಯ ಹತ್ತಿದಾಗಲೂ ಈ ಧರ್ಮರಾಯ ಕೈಕಟ್ಟಿ ನಿಂತಿದ್ದ. ಇವನು ಸಾಮ್ರಾಟ್ ಪದವಿಗೆ ಅರ್ಹನೇ? ಅಥವಾ ಹಾಳೂರಿಗೆ ಉಳಿದವನೇ ಗೌಡನೋ! ಧರ್ಮರಾಯನ ಬದಲಿಗೆ ಕೃಷ್ಣನಿಗೇ ಸಾಮ್ರಾಟ ಪದವಿ ಕೊಟ್ಟಿದ್ದರೆ? ಅವನಲ್ಲಿ ಸಾಮ್ರಾಟನಿಗಿರಬೇಕಾದ ಎಲ್ಲ ಗುಣಗಳು ಇವೆಯಲ್ಲ? ತಲೆಯಾಡಿಸಿದ್ದ ವಿದುರ..

"ಮೊದಲಿಗೆ, ಕೃಷ್ಣನು ರಾಜನಲ್ಲವಲ್ಲ! ಅವನಲ್ಲಿ ಯಾವ ರಾಜ್ಯವೂ ಇಲ್ಲ. ಬಲರಾಮ ಅಗ್ರಜನಾದ್ದರಿಂದ ಯುವರಾಜನಾಗಿರುವನು. ಮತ್ತೆ, ಸಾಮ್ರಾಟನೆಂದರೆ ಸಮಾಜದ ನೀತಿನಿಯಮಗಳನ್ನು ಪಾಲಿಸುತ್ತ ತನ್ನ ಅಧೀನ ರಾಜ್ಯಗಳ ಐಕ್ಯತೆ ಸಾಧಿಸುವ ಪ್ರಜಾರಕ್ಷಕ.

ಅವನು ಆ ಸಮಾಜದ ಮೊದಲ ಪ್ರಜೆಯಾಗಿ ಆ ನೀತಿನಿಯಮಗಳಿಗೆ ಒಳಪಟ್ಟವನು. ಒಂದು ರೀತಿಯಲ್ಲಿ ಸಮಾಜದ ಕಟ್ಟುಕಟ್ಟಳೆಗಳು ಅವನ ವೈಯಕ್ತಿಕ ಸ್ವಾತಂತ್ರ್ಯವನ್ನು ಕುಂಠಿತ ಗೊಳಿಸುತ್ತವೆ. ಅವನು ಸಂಪೂರ್ಣ ಸ್ವತಂತ್ರನಲ್ಲ. ಇವತ್ತಿನ ಪರಿಸ್ಥಿತಿಯಲ್ಲಿ ಸಾಮ್ರಾಟ್ ಪದವಿಗೆ ಕುರುಕುಲದ ಪಾಂಡವಾಗ್ರಜನಾದ ಧರ್ಮಜನೇ ಸೂಕ್ತವ್ಯಕ್ತಿ. ಲೋಕಸಂಗ್ರಹಕಾರ್ಯಕ್ಕೆ ಆದರಲ್ಲೂ ಈಗಿನ ದೋಷನಿವಾರಣಾಹಂತದಲ್ಲಿ ಸಮಾಜದ ಹೊರಗೆ ನಿಂತು ನಿರ್ಣಯ ತೆಗೆದುಕೊಳ್ಳುವ ಪೂರ್ಣಸ್ವಾತಂತ್ರ್ಯ ರಾಜನಲ್ಲದ ಕೃಷ್ಣನಿಗಿದೆ. ಅನೇಕವೇಳೆ ಸಂದಿಗ್ಧ ಪರಿಸ್ಥಿತಿಯಲ್ಲಿ ವಿಪರೀತ ಮಾರ್ಗ ಬಳಸಬೇಕಾಗುವುದು. ಇಂತಹ ನಿರ್ಧಾರಗಳನ್ನು ನೈತಿಕಬಲದ ಜೊತೆಗೆ ನಿರ್ಧಾರದ ಪರಿಣಾಮವನ್ನು ಮೊದಲೇ ಕಾಣುವ, ಅಂತೆಯೇ ಅಂತಿಮ ಗುರಿಯ ಸ್ಪಷ್ಟತೆಯಿರುವ ಪೂರ್ಣದೃಷ್ಟಿಯೂ ಅಗತ್ಯ. ಇವೆರಡೂ ಕೃಷ್ಣನಲ್ಲಿ ಮೇಳೈಸಿದೆ. ಅವನು ನಿರ್ಮಮತ್ವ ಸಾಧಿಸಿದ್ದಾನೆ. ಅವನೊಬ್ಬನೇ ಲೋಕಸಂಗ್ರಹ ಕಾರ್ಯದ ನೇತಾರನಾಗಬಲ್ಲ.

ನಾವು ಇದು ಧರ್ಮವೇನು?... ಇದಾವ ಧರ್ಮ? ಇದಾರ ಧರ್ಮ?... ಇದೆಲ್ಲಿಯ ಧರ್ಮ? ಇದು ಹೇಗೆ ಧರ್ಮವಾದೀತು? ಎಂದು ಮೀನ ಮೇಷ ಎಣಿಸುತ್ತ ಸಕಾಲದಲ್ಲಿ ಇತ್ಯರ್ಥಕ್ಕೆ ಬರದೆ ಧರ್ಮಸಂಕಟ ಎನ್ನುತ್ತ ಪರಿಸ್ಥಿತಿಯ ಆಳಾಗಿ ನಿಲ್ಲುವ ಮೂಢಮತಿಗಳು. ಸಂದಿಗ್ಧ ಪರಿಸ್ಥಿತಿಗಳನ್ನು ಧೈರ್ಯವಾಗಿ ಎದುರಿಸಿ ಸಮಾಜಹಿತದಲ್ಲಿ ಮುನ್ನಡೆವುದು, ಅದಕ್ಕಾಗಿ ಅಪಖ್ಯಾತಿ ಬಂದರೂ ಸ್ವೀಕರಿಸಿದವ 'ರಣಹೇಡಿ' ಕೃಷ್ಣ. ಜರಾಸಂಧ ಮತ್ತೆ ಮಥುರೆಯ ಮೇಲೆ ದಂಡೆತ್ತಿ ಬರುವನೆಂದು ತಿಳಿದಾಗ ವೃಷ್ಣಿಕುಲವೇ ಮಥುರೆ ಬಿಟ್ಟು ದೂರದ ಸಮುದ್ರತಟದ ದ್ವಾರಕೆಗೆ ವಲಸೆ ಹೋಗುವುದು ಕ್ಷೇಮ ಎಂದನಂತೆ ಕೃಷ್ಣ. ಅವನನ್ನು 'ನೀನೊಬ್ಬ ರಣಹೇಡಿ –ಶತ್ರುವಿಗೆ ಹೆದರಿ ಪಲಾಯನ ಸೂತ್ರ ಹಿಡಿದೆಯಾ? ಯುದ್ಧದಲ್ಲಿ ಮಡಿದು ವೀರಸ್ವರ್ಗ ಸೇರುವುದು ಲೇಸು'. ಎಂದವರೇ ಇಂದು ದ್ವಾರಕೆಯಲ್ಲಿ ನೆಲೆಯೂರಿ, ಅವರ ಕುಲವರ್ಧಿಸಿ ಸ್ವರ್ಗಸಮಬಾಳು ನಡೆಸಿರುವರು. ನರಕಾಸುರನನ್ನು ಕೊಂದು ಅವನ ಅಂತಃಪುರದಲ್ಲಿ ಸೆರೆಯಾಗಿದ್ದ ಅಪಹೃತ ಮಹಿಳೆಯರನ್ನು ಅವರವರ ಮನೆಗಳಿಗೆ ಕರೆದೊಯ್ದರೆ, ಅವರೆಲ್ಲ 'ಪರಪುರುಷನೊಡವಿದ್ದವರನ್ನು ನಾವು ಮತ್ತೆ ಸೇರಿಸಿಕೊಳ್ಳೆವು' ಎಂದು ತಿರಸ್ಕರಿಸಿದರಂತೆ. ಆ ಮಹಿಳೆಯರ ಅತಂತ್ರ ಸ್ಥಿತಿಯನ್ನು ಹೋಗಲಾಡಿಸಲು ವಿವಾಹದ ಮೂಲಕ ಅವರಿಗೆ ತನ್ನ ಹೆಸರು ಕೊಟ್ಟು ಉದರನಿರ್ವಹಣೆಗೆ ದ್ವಾರಕೆಯ ಸುತ್ತಮುತ್ತ ಭೂಮಿಕಾಣಿ ಕೊಟ್ಟು ನೆಲೆನಿಲಿಸಿದ ಕೃಷ್ಣನಿಗೆ ಬಂದ ಅಪಖ್ಯಾತಿ 'ಸಾವಿರ ಹೆಂಡಿರ ಗಂಡ'! ಎಷ್ಟೆಲ್ಲ ವಿವಾದಗಳ ವಿಚಿತ್ರವ್ಯಕ್ತಿ ನಿನ್ನಳಿಯ ಕೃಷ್ಣ ಸಾಮ್ರಾಟನಾಗೆಂದರೂ 'ಒಲ್ಲೆ'ನೆನ್ನುವ ಬೀಸಾಳು ವಾಸುದೇವ..."

ನನ್ನ ಮನದಾಳದ ಸಂದೇಹ ಮುಖದಲ್ಲಿ ಕಂಡನೇನೋ.. "ಧರ್ಮಜನಲ್ಲಿ ಮತ್ತೆ ಸಂದೇಹ? ಈ ಸಂದೇಹ ಪರಿಹಾರವಾಗುವವರೆಗೆ ನಿನಗೆ ತೊಳಲಾಟ ತಪ್ಪಿದ್ದಲ್ಲ. ವ್ಯಾಸರಲ್ಲೇ ಹೋಗಿ ನಿನ್ನೀ ಪ್ರಶ್ನೆ ಕೇಳಿದರೆ ಬಿಡಿಸಿ ಹೇಳುವರು. ಲೋಕೋದ್ಧಾರದ ರೂವಾರಿ ಅವರೇ ಸ್ಪಷ್ಟವಾಗಿ ವಿವರಿಸಬಲ್ಲರು..." ಎಂದು ಹೇಳುತ್ತ ನನ್ನ ಮುಂದಿನ ಪ್ರಶ್ನೆಗಳಿಗೆ ತಡೆಹಾಕಿ ಎದ್ದುಬಿಟ್ಟಿದ್ದ ವಿದುರ.

ಚಿಕ್ಕಂದಿನಿಂದಲೂ ಧರ್ಮಜನೇ ನನಗೆ ಹೆಚ್ಚಿನ ಆತಂಕ ಕೊಟ್ಟವ. ಬೊಟ್ಟುಮಾಡಿ ತೋರಿಸಲಾಗದಂತಹ ಏನೋ ಒಂದು ಕೊರತೆ ಅವನಲ್ಲಿ. ಅವನ ಜೊತೆ ಸದಾ ಕಾಲ ಇದ್ದವರಿಗೆ ಮಾತ್ರ ಅನುಭವಕ್ಕೆ ಬರುವಂತಹುದು. ವಿದುರನ ಅನುಭವಕ್ಕೂ ಬಂದದ್ದೇ. ಆದರೆ ಒಪ್ಪಲೊಲ್ಲ. ವ್ಯಾಸ ಮುನಿಗಳು ಬಂದಾಗಲೆಲ್ಲ ಧರ್ಮಜನ ತಲೆ ಆಘ್ರಾಣಿಸಿ ಬೆನ್ನುತಟ್ಟಿ 'ಧರ್ಮನಂದನ' ಎಂದು ಬಾಯ್ತುಂಬಿ ಕರೆದು 'ಹೆಸರಿಗೆ ತಕ್ಕಂತೆ ಬಾಳು ಮಗು, ನಮ್ಮೆಲ್ಲರ ಸದಾಶಯ ನಿನಗೆ ರಕ್ಷೆಯಾಗಲಿ' ಎಂದು ಹರಸುತ್ತಿದ್ದುದು ನೆನಪಿದೆ. ವ್ಯಾಸರಿಗೆ ವಿದುರನಿಗೆ ಭೀಷ್ಮರಿಗೂ ಅವನಲ್ಲಿರುವ ನಂಬಿಕೆ ನನಗೇಕಿಲ್ಲ? ಹುಟ್ಟಿನಿಂದಷ್ಟೇ ಮಗನಾಗಿ ಯಾರಲ್ಲೋ ಬೆಳೆದ ಕರ್ಣನ ಸ್ವಭಾವದಲ್ಲಿರುವಷ್ಟು ನಂಬಿಕೆ ನಾನೇ ಬೆಳೆಸಿದ ಮಗ ಧರ್ಮಜನ ಸ್ವಭಾವದಲ್ಲಿ, ಅವನು ಪ್ರತಿಕ್ರಿಯಿಸುವ ರೀತಿಯಲ್ಲಿ ಏಕಿಲ್ಲ? ನನ್ನ ಹಾಗೇ ಕೃಷ್ಣನಿಗೂ ಧರ್ಮಜನ ರೀತಿಯಲ್ಲಿ ಕಾತರವಿದೆ ಎನಿಸುವುದೇಕೆ?

ಪದೇ ಪದೇ ವಿದುರ ನನಗೆ ಹೇಳುತ್ತಿರುವ ಮಾತು – "ನಿನ್ನ ಬುದ್ಧಿ ಮನಸ್ಸು ವಿಕಾಸವಾದಂತೆ ಧರ್ಮಜನ ವಿಶಿಷ್ಟತೆ–ಉಪಯುಕ್ತತೆ ಅರ್ಥವಾದೀತು. ಅಲ್ಲಿಯವರೆಗೆ ಅವನ ಸ್ವಭಾವದಲ್ಲಿ ತಾಳ್ಮೆ ಇರಲಿ" ತಾಳ್ಮೆಯಿಂದಲೇ ತಾನೇ ಅವನಿಂದಾದ ಅವಗಢಗಳನ್ನೆಲ್ಲ ಅನುಭವಿಸಿದ್ದು. ನನ್ನೊಂದಿಗೆ ದ್ರೌಪದಿಯೂ! ಈಗೀಗ ವಿದುರನ ಈ ಸಾಂತ್ವನದಲ್ಲಿ ಮತ್ತೊಂದು ನುಡಿಯ ಸೇರ್ಪಡೆ. "ಧರ್ಮಜನ ಯೋಗ್ಯತೆಯನ್ನು ಶಂಕಿಸದಿರು. ನಿನ್ನ ಅಪನಂಬಿಕೆಯ ಭಾವವನ್ನು ಬೇರೆಯವರಲ್ಲೂ ಹೂಡದಿರು. ವ್ಯಾಸರ, ಕೃಷ್ಣನ ನಿರ್ಧಾರಕ್ಕೆ ನಿನ್ನ ಪೂರ್ಣ ಬೆಂಬಲವಿರಲಿ."

ವಾಸುದೇವ ಸಂಧಾನಕ್ಕೆಂದು ಬಂದಾಗಲೇ ಅವನಲ್ಲಿ ಧರ್ಮಜನ ಬಗ್ಗೆ ನನ್ನ ಸಂದೇಹ ತೋಡಿಕೊಂಡೆ....

"ಅತ್ತೇ, ನಿನ್ನ ಸ್ತ್ರೀ ಚೈತನ್ಯದ ಸೂಕ್ಷ್ಮ ಅರಿವಿಗೆ ತಲೆಬಾಗುತ್ತೇನೆ. ಒಂದು ಸಂಗತಿ ತಿಳಿದಿರಲಿ. ಧರ್ಮಜನ ಈ ಸ್ವಭಾವವೇ ಇಂದು ನಮಗೆ ಶ್ರೀರಕ್ಷೆ. ಅವನಲ್ಲಿರಬಹುದಾದ ಕೊರತೆಗಳನ್ನು ಅವನ ತಮ್ಮಂದಿರು ಪೂರೈಸಿದ್ದಾರೆ. ಒಟ್ಟಾಗಿ ನಿಂತ ಪಾಂಡವರು ಅಜೇಯರಾಗಿದ್ದಾರೆ. ನಿನ್ನ ಸಂದೇಹ ಸಹಜವಾದರೂ ಅನಗತ್ಯ..." ಎಂದು ಧೈರ್ಯ ತುಂಬಿಹೋದ. ಆದರೇನು? ಮತ್ತೆ ನನ್ನ ಒಂಟಿ ಕ್ಷಣಗಳಲ್ಲಿ ಯೋಚನೆಗಳು ಧಾಳಿ ನಡೆಸಿದಾಗ ಅದೇ ಶಂಕೆ–ಆತಂಕ–ಸೊಳ್ಳೆಗಳಂತೆ ಕಚ್ಚಿ ಕಚ್ಚಿ ರೊಚ್ಚಿಗೆಬ್ಬಿಸುತ್ತವೆ.

ಇದೇ ಮಾತಿಗೆ ವಿದುರನದು ಇನ್ನೊಂದು ರೀತಿಯ ವಿಶದೀಕರಣ. "ಧೃತರಾಷ್ಟ್ರನೂ ಸೇರಿದಂತೆ ಕೌರವರಿಗೆ ಗೊತ್ತು–ಪಾಂಡವರಲ್ಲಿ ಒಗ್ಗಟ್ಟು ಇರುವವರೆಗೆ ಅವರನ್ನಾರೂ ಜಯಿಸಲಾರರೆಂದು. ಒಗ್ಗಟ್ಟಿನ ಬಲದೊಂದಿಗೆ ಧರ್ಮಯುತ ನಡವಳಿಕೆಯೂ ಸೇರಿದರೆ ಸುರಾಸುರರೂ ಅವರನ್ನು ಜಯಿಸಲಾರರು. ಅದಕ್ಕಾಗಿಯೇ ನೇರಮಾರ್ಗ ಬಿಟ್ಟು ಜೂಜಿನ ಮೂಲಕ ಅವರನ್ನು ಗೆಲ್ಲುವ ಪ್ರಯತ್ನ ನಡೆಸಿದರು. ಪಾಂಡವರ ಐಕ್ಯತೆಯನ್ನು ಮುರಿಯುವ ಮೊದಲ ಯತ್ನವೇ ತಮ್ಮಂದಿರನ್ನು ಪಣಕ್ಕಿಡಿಸುವುದು. ತಮ್ಮಂದಿರೂ ತಲೆಬಾಗಿದರು ಅಣ್ಣನ

ನಿರ್ಣಯಕ್ಕೆ. ನಂತರ ದ್ರೌಪದಿಯನ್ನು ಪಣಕ್ಕೆ-ಆಗಲೂ ನಾಲ್ವರದೂ ಒಂದೇ ಪ್ರತಿಕ್ರಿಯೆ. ಅಣ್ಣನ ಆಣತಿಯಂತೆ ಕಡೆಯದಾಗಿ ದ್ರೌಪದಿಯನ್ನು ಅವಮಾನಿಸಿದಾಗಲೂ ಅಣ್ಣನ ಆಣತಿಯಂತೆ ನಡೆದು ಐಕ್ಯತೆ ಸಾಧಿಸಿಕೊಂಡರು. ದ್ರೌಪದಿಯನ್ನು ಸಭೆಗೆಳೆದು ಅವಮಾನಿಸುವುದು ಪೂರ್ವಯೋಜಿತವಾಗಿರಲಿಲ್ಲ. ಅಂದಿನ ಆವೇಶ-ಹೇಗಾದರೂ ಪಾಂಡವರನ್ನು ಮುರಿಯ ಬೇಕೆಂಬ ಉನ್ಮತ್ತ ಸ್ಥಿತಿಯಲ್ಲಿ ಆ ಕುಕಾರ್ಯ ಮಾಡಿದರು, ಧರ್ಮದ ಎಲ್ಲೆ ಮೀರಿದರು. ಎಲ್ಲೆ ತಿಳಿಯದ ಅವಿವೇಕಿಗಳು! ಈ ಕಾರಣಕ್ಕಾಗಿಯೇ ಅವರೆಲ್ಲ 'ಆತತಾಯಿ'ಗಳು-ಮರಣದಂಡನೆಗೆ ಭಾಜನರು. ನೀನು ಧರ್ಮಜನಲ್ಲಿನ ಯಾವುದನ್ನು ವ್ಯವಹಾರಿಕವಾಗಿ ಕೊರತೆಯೆನ್ನುವೆಯೋ ಅದೇ ಈಗ ಕೌರವರಿಗೆ ನುಂಗಲಾರದ ತುತ್ತಾಗಿದೆ. ಅದೇ ಅವನ ಧರ್ಮಪ್ರಜ್ಞೆ."... -ಪ್ರಾಣ ಹೋದರೂ ಧರ್ಮನೀತಿ ಬಿಡದ ದೃಢನಿಶ್ಚಯ.. ಅವನ ಈ 'ಧರ್ಮಪ್ರಜ್ಞೆ'ಗೆ ಬೆಲೆ ತೆತ್ತವರು? ತಾಯಿ, ತಮ್ಮಂದಿರು, ಮಡದಿ ಮಕ್ಕಳು ಕುರುರಾಜ್ಯದ ಪ್ರಜೆಗಳು!

ಯಾವ ತಾಯಿಯೂ ತನ್ನ ಮಗುವಿನ ವಿಶೇಷತೆಯನ್ನು ಗುರುತಿಸಲಾರಳೇನೋ! ಹುಟ್ಟಿದಾಗಿನಿಂದ ನೋಡುತ್ತ ಪ್ರತಿಕ್ರಿಯಿಸುತ್ತ ಬೆಳೆಸುವವಳಿಗೆ ಕ್ರಮೇಣ ರೂಪುಗೊಳ್ಳುವ ವಿಶೇಷತೆಯು ಗಮನಕ್ಕೇ ಬರಲಾರದೇನೋ. ತಾಯಿಗೆ ಮಗುವಿನ ವಿಶೇಷತೆಯು ಸ್ವಾಭಾವಿಕ ವಾಗಿ ಹೋಗುವುದು. ಬೇರೆಯವರು ಹೇಳಿದಾಗ ಹೆಮ್ಮೆ ಎನಿಸಿದರೂ ದಿನನಿತ್ಯದ ಅನುಭವದಲ್ಲಿ ಪ್ರತ್ಯೇಕವಾಗಿ ನಿಲ್ಲಲಾರದು. ಎಷ್ಟೋ ಸಲ ಈ 'ವಿಶೇಷತೆ' ತೊಡಕಾಗಿ ಮುಗ್ಗರಿಸುವಂತಾಗುವುದು. ನನ್ನ ಅದೃಷ್ಟಕ್ಕೆ ಧರ್ಮಜನ ಈ ವಿಶೇಷತೆ ಮುಗ್ಗರಿಸುವುದಿರಲಿ ಕಾಲು ಮುರಿದು, ಹಲ್ಲು ಉದುರಿ ವಿದುರನ ಮನೆಯಲ್ಲಿ ಮುದಿಹಸುವಾಗಿ ಕಾಲ ನೂಕುವ ಪರಿಸ್ಥಿತಿ. ಆರು ಮಂದಿ ಮೊಮ್ಮಕ್ಕಳಿದ್ದೂ ಇಬ್ಬರು ಸೊಸೆಯರಿದ್ದೂ ಸ್ವಂತ ಸಂಸಾರವಿಲ್ಲದ ಒಂಟಿ ಬಾಳು.

"ಧರ್ಮಜನ ಬಗ್ಗೆ, ಧರ್ಮದ ಬಗ್ಗೆ ಈ ರೀತಿಯ ಅಂತಿಮ ನಿಲುವು ಸರಿಯಲ್ಲ. ನಮ್ಮ ಮನಸ್ಸು, ಬುದ್ಧಿ ಪ್ರೌಢವಾದಂತೆ ಧರ್ಮದ ಅರ್ಥವೂ ಪಕ್ವವಾಗುತ್ತ ಬರುತ್ತದೆ. ಪರಿಣಾಮವಾಗಿ ಧರ್ಮದ ಬಗೆಗಿನ ನಮ್ಮ ನಿಲುವೂ ಹೊಸದೊಂದು ನೆಲೆ ಕಂಡುಕೊಳ್ಳುತ್ತದೆ-ಕಂಡುಕೊಳ್ಳಬೇಕು. ಆಗಲೇ ಜೀವನವನ್ನು ಅರ್ಥೈಸುವ ಶಕ್ತಿ, ಸಮತಾಭಾವವೂ ಬರುವುದು. ಈಗ ಯುದ್ಧದ ಆರಂಭದ ಸ್ಥಿತಿಯಲ್ಲಿ ನಾನು ನೀನು ಏನೇ ಚರ್ಚೆ ಮಾಡಿದರೂ ಅದಕ್ಕೆ ದಮ್ಮಡಿಯ ಬೆಲೆ ಇಲ್ಲ. ಧರ್ಮದ ನಿಜಸ್ವರೂಪವನ್ನು ಸಮಗ್ರತೆಯಲ್ಲಿ ಕಾಣುವ 'ಪೂರ್ಣದೃಷ್ಟಿ' ನಮ್ಮಲ್ಲಾರಿಗಿದೆ? ಭೀಷ್ಮರಿಗೂ ಇಲ್ಲವೇನೋ! ಕೇವಲ ಕೃಷ್ಣದ್ವೈಪಾಯನ ವ್ಯಾಸರಿಗೆ, ಬಹುಶಃ ಅವರ ಗರಡಿಯಲ್ಲಿ ಪಳಗಿರುವ ವಾಸುದೇವನಿಗೆ ಇರುವುದು. ಇವರಿಬ್ಬರೂ ಸೇರಿ ಯೋಜಿಸಿರುವ 'ಲೋಕಸಂಗ್ರಹ' ಕಾರ್ಯದ ಬಿಡಿ ಭಾಗಗಳು ನಾವು. ನಮ್ಮ ಬುದ್ಧಿಶಕ್ತಿ, ಮನಃಶಕ್ತಿ, ದೇಹಶಕ್ತಿಗನುಸಾರ ಕೊಟ್ಟಿರುವ ಕೆಲಸವನ್ನು ಆತ್ಮನಿಷ್ಠೆಯಿಂದ ಶ್ರದ್ಧೆಯಿಟ್ಟು ಮಾಡಿ ಮುಗಿಸುವುದು ನಮ್ಮ ಧರ್ಮವಲ್ಲವೇ?.. ಧರ್ಮಸ್ಥಾಪನೆಗೆ ನಿನ್ನಿಂದ ಕೊಡಲಾಗುವ-ಆದ್ದರಿಂದ ಕೊಡಲೇಬೇಕಾದ ಸಹಕಾರದ ಪಾಲು ಇದು. ಸ್ವಇಚ್ಛೆಯಿಂದ ಕೊಟ್ಟರೆ ನೋವು ಇರುವುದಿಲ್ಲ. ಕೊಟ್ಟೆನೆಂಬ

ಕೃತಾರ್ಥಭಾವ ಇರುತ್ತದೆ. ಇಲ್ಲವಾದರೆ ಸಂಕಟ ಮಾತ್ರ ಸಿಗುತ್ತದೆ. ಆಯ್ಕೆ ನಿನ್ನದೇ.. .. .." ವಿದುರನ ವಿಚಾರಮಂಡನೆ. ಹಾಗೆಯೇ "ಧರ್ಮರಾಯ ಗುರಾಣಿಯಂತೆ. ಶಸ್ತ್ರಾಸ್ತ್ರ ಹಿಡಿದು ಕಾದಾಡದಿದ್ದರೂ ಎದುರಾಳಿಯ ಏಟನ್ನು ತಡೆದು ರಕ್ಷಿಸುವ ಧರ್ಮಗುರಾಣಿ. ಭೀಮ ಧರ್ಮದ ಬಾಹುಬಲ. ಅರ್ಜುನ ಧರ್ಮದ ಖಡ್ಗ ಶಸ್ತ್ರಾಸ್ತ್ರ ಸಂಗ್ರಹ. ನಕುಲ ಸಹದೇವರು ಧರ್ಮದ ಶಿರಸ್ತ್ರಾಣ ಕವಚದಂತೆ. ಕೃಷ್ಣ ಇವೆಲ್ಲವನ್ನೂ ಧರಿಸಿ, ಕಾದು, ಜಯಿಸುವ ಧರ್ಮಯೋಧ. ಈ ಐವರೂ ಧರ್ಮಸ್ಥಾಪನೆಯ, ಲೋಕಸಂಗ್ರಹದ ಪಂಚ ಅಂಗಗಳು. ಒಬ್ಬೊಬ್ಬರೇ ಸಾಧಿಸಲಾಗದ ಕಾರ್ಯವನ್ನು ಐವರೂ ಸೇರಿ ಧರ್ಮಗುರಾಣಿಯನ್ನು ಮುಂದಿಟ್ಟುಕೊಂಡು ಲೀಲಾಜಾಲವಾಗಿ ಸಾಧಿಸುವರು. ಇವರೆಲ್ಲರ ಒಕ್ಕೂಟ ಸಾಧ್ಯವಾದದ್ದು ನಿನ್ನ ಮತ್ತು ದ್ರೌಪದಿಯ ಸಹಯೋಗದಿಂದ–ಸ್ತ್ರೀಶಕ್ತಿಯ ಬೆಸುಗೆಯಿಂದ."

ಏನಾದರೂ ಒಳ್ಳೆಯ ಕೆಲಸಕ್ಕೆ ಸ್ತ್ರೀಯರ ಸಹಕಾರವೂ ಬೇಕೆಂಬ ಸಂಗತಿ ಒಪ್ಪಿಕೊಳ್ಳುವಂತಾದರೇ 'ಆರ್ಯ'ರು? ಅಹೋಭಾಗ್ಯ!

ಒಟ್ಟಿನಲ್ಲಿ ಈ ಮಹಾಯುದ್ಧ ಆಗಬೇಕು. ಜೀವಹಾನಿಯಾಗಿ ರಕ್ತಕೋಡಿ ಹರಿಯಬೇಕು. ಏಕೆ? ಎಲ್ಲರಿಗೂ ವ್ಯಾಸರ 'ಲೋಕಸಂಗ್ರಹ'ದ ಯೋಜನೆಯನ್ನು ತಿಳಿಯಹೇಳಿದರೆ ಆಗದೇ? ತಲೆಯಾಡಿಸಿದ ವಿದುರನ ವರಸೆ–"ತಮ್ಮ ಆಡಳಿತವೇ ಸೂಕ್ತ. ತಾವು ಹಾಕಿದ, ಪಾಲಿಸಿದ ಶಾಸನ ನಿಯಮಗಳೇ ಉತ್ತಮ ಎಂದು ಸಾಧಿಸುವ ಅರೆಬರೆ ವಿಚಾರದ ನಾಯಕರೇ ಹೆಚ್ಚಿರುವ ಈ ಸಮಯದಲ್ಲಿ ಯುದ್ಧವೊಂದೇ ನಿರ್ಣಾಯಕವಾಗಿ ನಾಯಕನೊಬ್ಬನನ್ನು ಕೊಡಬಲ್ಲುದು. ಹೇಳಿದರೆ ಅರ್ಥಮಾಡಿಕೊಳ್ಳುವವರು ಕೃಷ್ಣನೊಂದಿಗೆ ಸಹಕರಿಸುವರು. ಅಡ್ಡಗಾಲು ಹಾಕುವವರನ್ನು ದಂಡಿಸಿ ದಾರಿಗೆ ತರಬೇಕಾಗುವುದು. ಕಾರ್ಯವನ್ನೇ ನಡೆಯಗೊಡದ ದುಷ್ಟರನ್ನು ಸಂಹಾರ ಮಾಡಬೇಕಾಗುವುದು. ಜರಾಸಂಧ–ಶಿಶುಪಾಲರನ್ನು ಅನುಸರಿಸಿ ಈಗ ಧಾರ್ತರಾಷ್ಟ್ರರ ಸರದಿ–"

ಕೃಷ್ಣ ಮತ್ತು ವ್ಯಾಸರ ದೃಷ್ಟಿಯಲ್ಲಿ ದುರ್ಯೋಧನ ಕುರುರಾಜ್ಯ ಸಿಂಹಾಸನಕ್ಕೆ ಬಡಿದಿರುವ ಪೂರ್ಣಗ್ರಹಣ. ಏನಕೇನಪ್ರಕಾರೇಣ ಧಾರ್ತರಾಷ್ಟ್ರರ ಅಂತ್ಯವಾಗಿ ಈ ಗ್ರಹಣ ಬಿಡಲೇ ಬೇಕು. ಇದು ಈ ಯುದ್ಧದ ಮೂಲಕ ಏಕಾಗಬಾರದು? ಪಾಂಡುರಾಜ ತಪಸ್ಸಿಗೆಂದು ಹೊರಟದಿನ ಹಿಡಿಯಲು ಮೊದಲಾದ ಗ್ರಹಣ – ಧೃತರಾಷ್ಟ್ರನ ದೃಷ್ಟಿಯ, ವಿಚಾರದ ಗ್ರಹಣ. ಅಂಧನು ಅಧಿಕಾರಕ್ಕೆ ಅರ್ಹನಲ್ಲವೆಂಬುದನ್ನು ಸತ್ಯಮಾಡಿಬಿಟ್ಟ 'ದೃಷ್ಟಿ' ದೋಷ: ಮಗನಲ್ಲಿಟ್ಟ ವ್ಯಾಮೋಹ; ಅಧಿಕಾರದ ಮೇಲೆ ನೆಟ್ಟ ಸ್ವಾರ್ಥ; ತಮ್ಮನ ಮಕ್ಕಳ ಮೇಲಿಟ್ಟ ಮಾತ್ಸರ್ಯ; ಹಿರಿಯರು ಹಿತೈಷಿಗಳಲ್ಲಿದ್ದ ಶಂಕೆ ಅಪನಂಬಿಕೆ; ಹೊರಗಿನವರ (ಶಕುನಿ, ಕರ್ಣ) ಮಾತಿನಲ್ಲಿ ಕಾರ್ಯದಲ್ಲಿ ಆಸಕ್ತಿ–ಶ್ರದ್ಧೆ; ದೈಹಿಕ ಕುರುಡನ್ನೇ ಮುಂದಿಟ್ಟುಕೊಂಡು ಮಾನಸಿಕ ಬೌದ್ಧಿಕ ಕುರುಡನ್ನು ಮುಚ್ಚಿಟ್ಟುಕೊಂಡ ಆತ್ಮವಂಚನೆ; ನಿಜವಾಗಿಯೂ ಕುರುರಾಜ್ಯಕ್ಕೆ ಹಿಡಿದ ಗ್ರಹಣವೇ! ತನ್ನ ಬದುಕಿನಲ್ಲಿ ಈಡೇರಿಸಿಕೊಳ್ಳಲಾಗದ ಎಲ್ಲ ಬಯಕೆಗಳನ್ನೂ ಮಗ ದುರ್ಯೋಧನನ ಮೂಲಕ ತೀರಿಸಿಕೊಳ್ಳುವ ದುರಾಸೆ. ದುರ್ಯೋಧನನಲ್ಲಿ ತನ್ನ

ಇಷ್ಟಾನಿಷ್ಟಗಳನ್ನು ನೆಟ್ಟು ಪೋಷಿಸಿದ ಅಂಧರಾಜನಿಗೆ ಮಗನನ್ನು ತಪ್ಪುದಾರಿಗೆಳೆಯುತ್ತಿದ್ದೇನೆಂಬ ಪರಿವೆಯಿರಲಿಲ್ಲವೇ? ದುರ್ಯೋಧನನಲ್ಲಿ ಎಷ್ಟೋ ಒಳ್ಳೆಯ ಗುಣಗಳಿದ್ದರೂ ಅವು ಲೆಕ್ಕಕ್ಕೆ ಬಾರದಂತೆ ಮಾಡಿದ್ದು 'ತಂದೆ'ಯೆನಿಸಿಕೊಂಡ ಶತ್ರು. ಸುರೂಪದೇಹದಲ್ಲಿ ಬಲದೊಂದಿಗೆ ಚುರುಕುತನ; ಶಸ್ತ್ರಾಸ್ತ್ರವಿದ್ಯೆ; ವೈದಿಕಶಾಸ್ತ್ರಜ್ಞಾನ; ಆತ್ಮಾಭಿಮಾನ-ಧೈರ್ಯ-ಛಲ-ಬುದ್ಧಿ-ಚಾತುರ್ಯ; ಸ್ನೇಹ-ಪ್ರೀತಿ-ವಿಶ್ವಾಸ; ...ಎಲ್ಲಾ ವ್ಯರ್ಥ! ತಿರುಪಿನಲ್ಲಿ ತಪ್ಪಾಗಿ ತಿರುಗಿಸಿ ಬಿಗಿದುಬಿಟ್ಟ ಮುಚ್ಚಳದ ಭರಣಿ ಸೋರುವಂತೆ ಕೆಲಸಕ್ಕೆ ಬಾರದಂತಾದ ವ್ಯಕ್ತಿ. ಅಂಧನ 'ನೇತೃತ್ವ'ದಲ್ಲಿ ಸ್ವಾರ್ಥದ ಮಸುಕುಬೆಳಕಿನಲ್ಲಿ ಪುತ್ರಮೋಹದ ಮಡಿಲಲ್ಲಿ ಮೂಡಿಬಂದ ವ್ಯಕ್ತಿತ್ವ ಇನ್ನು ಹೇಗೆ ರೂಪಗೊಳ್ಳಲು ಸಾಧ್ಯ? ತಾಯಿಯಾದವಳು ಎರಡು ರೀತಿಯಲ್ಲಿ ಅಸಹಾಯಕಳು. ಒಂದು ತಾನೇ ತಂದುಕೊಂಡ ಅಸಹಾಯಕತೆ. ಪತಿಯು ಜನ್ಮತಃ ಕುರುಡನಾದರೆ ಅವನಿಗೆ ಕಣ್ಣಾಗಿ ನಿಲ್ಲುವ ಬದಲಿಗೆ ತಾನೂ ಕಣ್ಣಿಗೆ ಬಟ್ಟೆಕಟ್ಟಿಕೊಂಡು ಇಲ್ಲದ ಕುರುಡತ್ವ ಸಾಕಿಕೊಂಡಳು. ಎರಡು-ಸೇರಿದ ಮನೆಯಲ್ಲಿ ಹೆಂಗಸರಿಗೆ ಕೊಟ್ಟಿದ್ದ ಎರಡನೇ ಮಟ್ಟದ 'ಸ್ವಾತಂತ್ರ್ಯ'; ಗಾಂಧಾರಿಯ ಸಲಹೆ ಬುದ್ಧಿವಾದಗಳಿಗೆ ಕಿಲುಬುಕಾಸಿನ ಬೆಲೆಯಲ್ಲ. ಅವಳದು ಗಂಡನಿಗೆ, ಮಗನಿಗೆ ಬುದ್ಧಿ ಹೇಳಿ ಹೇಳಿ ಮೆತ್ತಗಾದ ಜೀವ. ಅಸಹಾಯಕ ಬೊಂಬೆಯಂತೆ, ಗಾಂಧಾರಿಗೂ ಒಳಗೊಳಗೇ ದುರ್ಯೋಧನನೇ ಪಟ್ಟಕ್ಕೆ ಬರಲೆಂಬ ಆಸೆಯಿತ್ತೇ?

ದುರ್ಯೋಧನನದು ದುರಭಿಮಾನ-ಅನರ್ಹರಲ್ಲಿಟ್ಟ ಶ್ರದ್ಧೆ ವಿಶ್ವಾಸ; ಅಪಾತ್ರರಲ್ಲಿಟ್ಟ ಸ್ನೇಹ-ಪ್ರೀತಿ; ನಿರ್ದೋಷಿಗಳಲ್ಲಿಟ್ಟ ಅಕಾರಣ ದ್ವೇಷ-ಅಸೂಯೆ; ಬಂಧು ಏಳಿಗೆಯಲ್ಲಿದ್ದ ಮಾತ್ಸರ್ಯ; ತನ್ನ ಮಾತೇ ನಡೆಯಲೆಂಬ ದುರಾಗ್ರಹ; ಗುರುಹಿರಿಯರಲ್ಲಿ ಅವಿಧೇಯತೆ; ಎದುರುತ್ತರಿಸಿ ಧಿಕ್ಕರಿಸುವ ದುರ್ನಡತೆ; ಸ್ವಾರ್ಥ ಸಾಧನೆಗಾಗಿ ಕಪಟ, ಕೊಲೆಗೂ ಹಿಂಜರಿಯದ ಧೃಷ್ಟತೆ-ಮಾರ್ಗದರ್ಶನವಿಲ್ಲದೆ ಎಡಚೆಡಚಾಗಿ ಗುಣಗಲೇ ಅವಗುಣಗಳಾದವು. ದುರ್ಯೋಧನನು ನಡೆಸಿರುವ ಜೀವನವೇ ಅವನ ವಿಚಾರ-ನಿಲುವುಗಳೇ ಗೆಲುವಿಗೆ ವಿರುದ್ಧ ದಿಕ್ಕಿನವು. ಅವನ ದುರ್ಗುಣಗಳೇ ಅವನ ಬೆಂಬತ್ತಿ ಯುದ್ಧಭೂಮಿಯಲ್ಲಿ ಕೆಡವಿಸುತ್ತಿವೆ.

ಧೃತರಾಷ್ಟ್ರನು ಬಿತ್ತಿ ಬೆಳೆಸಿದ ಮಕ್ಕಳು, ಗುಣಗಳು, ಬಯಕೆಗಳು, ವಿಚಾರಗಳು, ಯೋಜನೆಗಳು, ಪ್ರಯತ್ನಗಳು ಎಲ್ಲವೂ ವಿಷಪೂರಿತವಾಗಿದ್ದು ಕುರುಸಿಂಹಾಸನಕ್ಕೆ ಹಾನಿಕಾರಕವಾಗಿರುವುದರಿಂದ ಅವೆಲ್ಲವುಗಳ ಪೂರ್ಣನಾಶ ಅತ್ಯಾವಶ್ಯಕ ಎನ್ನುವುದು ಭೀಷ್ಮ, ವ್ಯಾಸ, ವಿದುರ, ಕೃಷ್ಣ ಮುಂತಾದವರ ಮತ. ಈ ನಿರ್ಮಲೀಕರಣಕಾರ್ಯಕ್ಕೆ ಸಾಧನ ಪಾಂಡವರು. ಯಾವ ರೀತಿ? ಯುದ್ಧ ಮಾಡಿ!

ಯಾವುದೇ ಸಮಸ್ಯೆಗೆ 'ಆರ್ಯ'ರು ತಿಳಿದಿರುವ ಪರಿಹಾರ ಒಂದೇ – ಯುದ್ಧಮಾಡಿ. ಇದೇನೇ ಆರ್ಯ ಸಂಸ್ಕೃತಿ? ಇದೇನೇ ಆರ್ಯಧರ್ಮ? ಸಭ್ಯತೆ, ನಾಗರೀಕತೆ ಸಂಸ್ಕಾರ ಎಂದೆಲ್ಲ ಕೂಗುತ್ತಿರುವ ಆರ್ಯಸಮಾಜ ನಿಜದಲ್ಲಿ ಪ್ರಕೃತಿ ಸಹಜ ಸರಳತೆಯಿಂದ, ಸ್ನೇಹಭಾವದಿಂದ, ಮಾನವೀಯತೆಯಿಂದ ಬಹುದೂರ ಸಾಗಿ ಮನುಷ್ಯತ್ವಕ್ಕೇ ಹೊರತಾಗಿ ಹೋದಹಾಗಿದೆ. 'ಯುದ್ಧ' ಎನ್ನುವ ಪರಿಕಲ್ಪನೆಯೇ 'ಆರ್ಯ'ರದ್ದು. ಎದುರೆದುರು ನಿಂತು

ಒಬ್ಬರನ್ನೊಬ್ಬರು ತಿವಿದು ಕೊಚ್ಚಿ ಚಚ್ಚಿ ಸಾಯಿಸುವ-ಸಾಯುವ ಭೀಭತ್ಸ ಪದ್ಧತಿ. ಯುದ್ಧಕ್ಕೆಂದೇ ಶಸ್ತ್ರಾಸ್ತ್ರಗಳನ್ನು ರಚಿಸಿ, ಅದನ್ನು ಪ್ರಯೋಗಿಸುವ ರೀತಿಯನ್ನು ಎಳವೆಯಲ್ಲೇ ಕಲಿಸಿ, ಅಭ್ಯಾಸಮಾಡಿ, ಯುದ್ಧದ ರೀತಿ-ನೀತಿ ಎಂದು 'ಯುದ್ಧಶಾಸ್ತ್ರ'ವನ್ನೇ ರೂಪಿಸುವಷ್ಟು ಮುಂದುವರೆದಿದೆ ಆರ್ಯರ ಹಿಂಸಾವೃತ್ತಿ. ತಿಂಗಳುಗಟ್ಟಲೆ ಕಾದು ಶುಭಮುಹೂರ್ತ ನೋಡಿ ದಂಡೆತ್ತಿ ಹೋಗುವಂತಹ ಪೂರ್ವಯೋಚಿತ - ಸುಯೋಜಿತ ಯುದ್ಧವು ಆರ್ಯರು ತಮ್ಮ 'ಪ್ರತಿಷ್ಠೆ'ಗೆ ಕೊಡುವ-ಪಡೆವ ತೋಳ್ಬಲದ ಉತ್ತರ. ಸಣ್ಣ ಪುಟ್ಟ ಮನಸ್ತಾಪ, ಅಸೂಯೆ ಅಪರಾಧಗಳಿಗೆ ಮನೆಮನೆಯವರಲ್ಲೇ ಇತ್ಯರ್ಥವಾಗದೆ ಊರಿಗೆ ಊರೇ ಸೇರಿ-ಅಲ್ಲಲ್ಲ-ರಾಜ್ಯಕ್ಕೆಲ್ಲ ಹರಡಿ ಅದೂ ಸಾಲದೆ ನೆರೆರಾಜ್ಯದವರನ್ನೂ ಬಳಸಿಕೊಂಡು 'ಯುದ್ಧ'ಕ್ಕೆ ಇಳಿಯುವ ಜನ 'ಆರ್ಯ'ರು! ಇದು ಗುಂಪುಕಟ್ಟಿ ನಡೆಸುವ ಹಿಂಸಾಚಾರವಾದರೆ ಒಬ್ಬೊಬ್ಬರೇ ನಡೆಸುವ ಹಿಂಸೆ? ಅನೇಕ ಆರ್ಯೇತರ ಜನರಲ್ಲಿನ 'ಆರ್ಯ'ನೆಂದುಕೊಂಡವ ಹೊರಗಿನವರನ್ನು ಪ್ರಾಣಿಗಳಿಗಿಂತಲೂ ಕೀಳಾಗಿ ನಡೆಸಿಕೊಳ್ಳುವ ಹೇಯರೀತಿಯನ್ನು ನಾನೇ ಕಂಡಿದ್ದೇನಲ್ಲ. ಹಿಮಾಲಯ ತಪ್ಪಲಿನ ಗುಡ್ಡಗಾಡಿನಲ್ಲಿ ದಿನವೆಲ್ಲ ಭಾರಹೊತ್ತು ಸಾಗುತ್ತಿರುವವರ ಮೈಮೇಲೆ ಬೀಸುವ ಚಾಟಿ ಏಟು! ತಮ್ಮ ಹೊಲದೊಳಗೆ ಹುಲ್ಲುಗಾವಲಿನೊಳಗೆ ಬಂದರೆಂದು ಅವರನ್ನು ಮರಕ್ಕೆ ಬಿಗಿದು ಅನ್ನ ನೀರಿಲ್ಲದೆ ಸತಾಯಿಸುವುದು. ಬೇಟೆ ನಾಯಿಗಳನ್ನು ಛೂ ಬಿಟ್ಟು ಬಟ್ಟೆಬೊಂಬೆಯಂತೆ ಚಿಂದಿ ಚಿಂದಿ ಮಾಡುವುದನ್ನು ನೋಡಿ ಆನಂದಿಸುವರು 'ನಾಗರಿಕ'ರು! ಕಾಡುಜನರ ಹಳ್ಳಿಗಳಿಗೆ ನುಗ್ಗಿ ಅವರು ಸಂಗ್ರಹಿಸಿಟ್ಟ ಖಾದ್ಯಗಳನ್ನಷ್ಟೇ ಅಲ್ಲದೆ ಹದಿಹರೆಯದ ಮಕ್ಕಳನ್ನೂ ಅಪಹರಿಸಿ ಊರಿನಲ್ಲಿ ಜೀತಕ್ಕೆ-ಭೋಗಕ್ಕೆ 'ದಾಸ್ಯ'ಕ್ಕೆ ಉಪಯೋಗಿಸುವವರು 'ಆರ್ಯ'ರು!

ತಮ್ಮನ್ನು ತಾವು ನಾಗರೀಕರೆಂದುಕೊಂಡವರ ವರ್ತನೆಗೂ ಅನಾಗರಿಕರೆನಿಸಿಕೊಂಡವರ ವರ್ತನೆಗೂ ಅಜಗಜಾಂತರ. ಆರ್ಯರಿಗೆ ಹೊರಗಿನವರ ನಡಾವಳಿ 'ಬರ್ಬರ'ವೆನಿಸಿದರೆ ಹೊರಗಿನವರು ಆರ್ಯರ ನಡತೆಗೆ ಹೆದರಿ ಹೇಸಿ, ಇವರು ಮಾನವರೇ ಹೌದೇ? ಎನ್ನುವುದನ್ನು ನಾನೇ ಕಂಡಿದ್ದೇನಲ್ಲ. ಆರ್ಯಕುಲದಲ್ಲಿ ಹುಟ್ಟಿ ಆರ್ಯರಾಜಮನೆತನಕ್ಕೆ ಸೇರಿದರೂ ಆರ್ಯರ ರೀತಿನೀತಿಗೆ ಇಂದಿಗೂ ಹೊಂದಾಣಿಕೆ ಬಂದಿಲ್ಲ. ಏನೋ ಪರಕೀಯ ಭಾವವಿದ್ದೇ ಇದೆ. ಹೊರಗಿನವರೊಂದಿಗೆ ನನ್ನ ನಿಕಟ ಸಂಪರ್ಕದ ಕಾಲದಲ್ಲಿ ನಾನೇ ಮನಗಂಡಂತೆ ಆರ್ಯೇತರರರದು ಸೌಹಾರ್ದಯುತ ವ್ಯವಹಾರ, ಸಂತುಷ್ಟ ಬಾಳುವೆ. ಜನರೊಡನೆ ಪಶುಪಕ್ಷಿಗಳೊಡನೆ ಮರಗಿಡಗಳೊಡನೆ ಪ್ರೀತಿಪೂರ್ವಕ ಭಾವನೆ. ಪ್ರಕೃತಿಯಲ್ಲಿದ್ದು ಅದರೊಂದಿಗೇ ಬಾಳುವವರು. ಅವರದು ಮಮತೆಯ ಮಡಿಲು. ಏನೇ ಮನಸ್ತಾಪ ಬಂದರೂ ಅಲ್ಲೇ ಆಗಲೇ ತೀರ್ಮಾನವಾಗಿ ಪ್ರಸಂಗ ಮುಗಿಸಿಬಿಡುವರು. ಅದನ್ನು ಕಹಿನೆನಪಾಗಿ ದ್ವೇಷ ಅಸೂಯೆ ಮಾತ್ಸರ್ಯ ಕೋಪ ಎಂದೆಲ್ಲ ಬೆಳೆಯಗೊಡದೆ ಅಂತರ್ಯವನ್ನು ಹುಳುಕು ಮಾಡಿಕೊಳ್ಳದೆ ನಿರ್ಮಲಚಿತ್ತರಾಗಿರುವವರು. ರಾತ್ರಿಯ ನಿದ್ರೆಯಲ್ಲಿ ಮನತೊಳೆದು ದಿನವನ್ನು ಹೊಸದಾಗಿ ಸ್ವಾಗತಿಸುವವರು. ಆರ್ಯರ ದುರ್ನಡತೆಯನ್ನೂ ಕ್ಷಮಿಸಿ ಮರೆತು ಬಿಡುವಷ್ಟು ಸರಳರು. ಏಕಲವ್ಯನೇ ಇದ್ದಾನಲ್ಲ! ಗುರುವೆಂದು ಹೋದರೆ 'ನೀನು ಶಿಷ್ಯನಾಗಲು ಅರ್ಹನಲ್ಲ' ಎಂದರೂ

ಆಶೀರ್ವಾದವೇ ಸಾಕೆಂದು ಹಿಂದಿರುಗಿ ತನಗೆ ತಾನೇ ಕಲಿತವನು. ಅವನ ಬಿಲ್ಲುಗಾರಿಕೆ ನೋಡಿ ಹೆದರಿ ಗುರುವಾಗದಿದ್ದರೂ ಗುರುದಕ್ಷಿಣೆ ಎಂದು ಹೆಬ್ಬೆರಳು ಕೇಳಿದ 'ಆಚಾರ್ಯ'ರಿಗೆ ತತ್ಕ್ಷಣವೇ ಕತ್ತರಿಸಿಕೊಟ್ಟನಲ್ಲ! ಹಿಡಂಬಿ-ರಾಕ್ಷಸ ಕುಲದವಳು. ಪ್ರಾಣಸಂರಕ್ಷಣೆಗಾಗಿ ತನ್ನ ಅಣ್ಣನನ್ನು ಕೊಂದ ಭೀಮನನ್ನು ಕ್ಷಮಿಸಿ ಅವರ ಸಂಪ್ರದಾಯವೆಂದು ಗೆದ್ದವನನ್ನು ವಿವಾಹವಾದವಳು. ಈ ಯುದ್ಧದಲ್ಲಿ ತಂದೆಗೆ ಬಲವಾಗಿ ನಿಂತು ಯುದ್ಧಕ್ಕೆ ಸಹಕರಿಸೆಂದು ಇರುವ ಒಬ್ಬನೇ ಮಗ ಘಟೋತ್ಕಚನನ್ನು ಕಳಿಸಿರುವವಳಲ್ಲ. ಅವಳನ್ನು ನನ್ನ ಹಿರಿಸೊಸೆಯೆಂದು ಎಂದೂ ಮಾನ್ಯಮಾಡಲಿಲ್ಲ. ಅಕ್ಕರಿಸಲಿಲ್ಲ. ಸಂಪರ್ಕವನ್ನೇ ಇಟ್ಟುಕೊಂಡಿರದ 'ಗಂಡನ ಮನೆಯವರ'ಲ್ಲಿ ತೋರಿರುವ ಪ್ರೇಮ ವಾತ್ಸಲ್ಯ ಆರ್ಯರೆಂದಾದರೂ ತೋರಿಸಿದ್ದಾರೆಯೇ? ಹಿಮಾಲಯದ ತಪ್ಪಲಿನ ಹಳ್ಳಿಯ ಸಂಸಾರಗಳು? ಮೊದಲು ಕುತೂಹಲದಿಂದ ಸನಿಹ ಬಂದವರು ಹೂವು ಹಣ್ಣು ಜೇನು ಎಂದು ಆಗಾಗ ಭೇಟಿಮಾಡಿ ಸ್ನೇಹ ಬೆಳೆಸಿದರು. ಪ್ರೀತಿ ಕೊಟ್ಟರು. ನನ್ನ ಬಸಿರು ಬಾಣಂತನದ ದಿನಗಳಲ್ಲಿ ಆರೈಕೆಮಾಡಿದ ಮಹಿಳೆಯರು ಅಕ್ಕತಂಗಿಯರೇ ಆಗಿಹೋದರು. ನನ್ನ ಮಕ್ಕಳನ್ನು ತಮ್ಮದೆಂದೇ ಎತ್ತಿ ಮುದ್ದಾಡಿ ಸಂತೋಷಿಸಿದರು. ಭೀಮನಂತೂ ಅವರ ಅಚ್ಚುಮೆಚ್ಚಿನ ಮಗು. ಯಾವ ಅಂಜಿಕೆಯಿಲ್ಲದೆ ಅವರ ಕಂಕುಳೇರಿ, ಅವರ ಹಳ್ಳಿಯಲ್ಲಿ ಗೆಳೆಯರೊಡನೆ ಆಡಿ ಕುಣಿದು ಬೆಳೆದವ.

ಗುಡ್ಡಗಾಡಿನ-ಕಾಡಿನ ಜನಾಂಗದವರ ನೇರವ್ಯವಹಾರ, ಸರಳ ಸ್ವಭಾವ, ಸ್ನಿಗ್ಧಹೃದಯ, ಪ್ರಕೃತಿ ಸಹಜ ಜೀವನ ವಿಧಾನ-ನಿಜವಾದ ಸಭ್ಯತೆ ಕಾಣಬರುವುದು ಇವರಲ್ಲೇ. ಹರಿವ ನೀರು, ಬೆಳೆವ ಭೂಮಿ, ಸುಳಿವ ಗಾಳಿ, ಉರಿವ ನೇಸರ, ಜೀವನ ಕೊಡುವ ಕಾಡು ಎಲ್ಲರಿಗೂ ಸೇರಿದ್ದೆನ್ನುವ ಸಮಾನತೆಯ ಮನಸ್ಸು. ಪ್ರಕೃತಿಯೊಳಗೊಂದಾಗಿ ಜೀವಿಸುವ ರೀತಿಯರಿತವರು. ತಮ್ಮ ಬುಡಕಟ್ಟಿನ 'ದೈವ'ವೆಂದು ಪ್ರಾಣಿಯೊಂದನ್ನು ದಿನವೂ ಪೂಜಿಸಿ ಅದರ ಹೆಸರಿನಿಂದಲೇ ತಮ್ಮನ್ನು ಗುರುತಿಸಿಕೊಳ್ಳುವಷ್ಟು ನಿಸರ್ಗಪ್ರಿಯರು. 'ಜೀವ'ದ ಬೆಲೆಯರಿತವರು. ಜೀವ ತೆಗೆಯುವುದು ಆಹಾರಕ್ಕಾಗಿ ಇಲ್ಲವೇ ಆತ್ಮರಕ್ಷಣೆಗಾಗಿ, ವ್ಯರ್ಥ ರಕ್ತಪಾತಕ್ಕಲ್ಲ. ಇವರು ಬೇಟೆಯಾಡುವುದು ಆಹಾರಕ್ಕಾಗಿ. ಕ್ರೀಡೆಗಲ್ಲ! ಕೊಂದ ಪ್ರಾಣಿಯ ಮಾಂಸ ವ್ಯರ್ಥವಾಗದಂತೆ ಹಂಚಿ ತಿನ್ನುವರು. ಮರಗಿಡ ಕೀಳುವುದೂ ಕೇವಲ ಮನೆ ಕಟ್ಟಲಿಕ್ಕೆ. ಅದಕ್ಕೆ ಬದಲಾಗಿ ಬೇರೊಂದು ಮರ ಹುಟ್ಟುಹಾಕಿದ ನಂತರ. ಸಂಗ್ರಹ ಬುದ್ಧಿ ಕಿಂಚಿತ್ತೂ ಇಲ್ಲ. ವರ್ಷಪೂರಾ ಸಮೃದ್ಧಿಯಾಗಿ ಕೊಡುವ 'ಬನದೇವಿ' ಇರುವಾಗ ಕೂಡಿಟ್ಟು ಹಳತು ಮಾಡುವುದೇಕೆ? ಇಂಥ ಮುಗ್ಧ ಜನರಿಗೂ 'ಯುದ್ಧ'ಕ್ಕೂ ಏನು ಸಂಬಂಧ?

"ದೊಡ್ಡ ಯುದ್ಧ ಆಗಲಿದೆಯಂತೆ".. "ನೂರಕ್ಕೂ... ಅಲ್ಲ, ನೂರರ ನೂರಕ್ಕೂ.. ಎಷ್ಟೋ ಆನೆಗಳು ಬೇಕಂತೆ-ನಮ್ಮ ಕಾಡಿಗೇ ಬಂದು ಕೇಳಿ ಹೋದರು.." "ತುಂಬಾ ತುಂಬಾ ಬಾಡು ದಿನಾ ಬೆಳಿಗ್ಗೆ ಒದಗಿಸಬೇಕಂತೆ..." "ದಿನಾ ಬೆಳಿಗ್ಗೆ ಹುಲ್ಲು ಕಂತೆ ತಂದರೆ ಧಾನ್ಯ ಕೊಡುವರಂತೆ.. ನಾವೇನು ಕೇಳಿದರೂ ಕೊಡುವರಂತೆ..." "ಬೇಕಿದ್ದರೆ ನಾವೂ ಯುದ್ಧಕ್ಕೆ ಸೇರಬಹುದಂತೆ.." ಇವರಿಗೆ ಯುದ್ಧ ಕುತೂಹಲಕಾರೀ ಸಂಗತಿಯಷ್ಟೆ. ರಾಕ್ಷಸ ಕುಲದವರು, ನಾಗರು, ಬೇಡರು, ಮಾತಂಗರು, ಅಂಬಿಗರೂ ಕುರುಕ್ಷೇತ್ರಕ್ಕೆ ಧಾವಿಸುತ್ತಿದ್ದಾರೆ.

ಯುದ್ಧದ ಭೀಕರತೆಯ ಅರಿವಿಲ್ಲದ, ಅಲ್ಲಿ ಉಪಯೋಗಿಸುವ ಮಾರಕಾಸ್ತ್ರಗಳ ಕಲ್ಪನೆಯೂ ಇಲ್ಲದ ಈ ಅಮಾಯಕರನ್ನೂ ತಮ್ಮ ಯುದ್ಧದ ಸುಳಿಗೆ ಸೆಳೆದುಕೊಂಡಿರುವ 'ಆರ್ಯ'ರು ಸಂಸ್ಕೃತರೇ? ಈ ಯುದ್ಧದ ಕಾರಣ ಉದ್ದೇಶವೇನು? ನಾವು ಯಾವ ಆರ್ಯಗುಂಪಿನ ಪರ ಹೋರಾಡಲಿದ್ದೇವೆ? ಆ ಗುಂಪಿನ ನಿಲುವು ಸರಿಯೇ? ಯುದ್ಧದಲ್ಲಿ ನಾವು ಸತ್ತರೆ ನಮ್ಮ ಜನರಿಗೇನು ರಕ್ಷಣೆಯಿದೆ? ಇದಾವುದರ ಪರಿವೆಯಿಲ್ಲದೆ ವೃಥಾ ಘಾಸಿಗೊಳ್ಳಲು ಬಂದಿದ್ದಾರೆ. ಇನ್ನೇನೂ ಕಲಿಯದಿದ್ದರೂ ಆರ್ಯರ 'ಹೊಡಿ-ಕೊಲ್ಲು' ಕಲಿತು ಮರಳುವವರಿದ್ದಾರೆ. ಇದೂ 'ಲೋಕಸಂಗ್ರಹ' ರೀತಿಯೇ? ಹಿಂಸಾ ಮನೋಭಾವವನ್ನು ಸಾಧುಸ್ವಭಾವದವರಲ್ಲೂ ಬಿತ್ತುವ ಈ ಮಹಾಯುದ್ಧ ಬೇಕೇ ಬೇಕೆ? ಹಿಂಸಾವೃತ್ತಿ ಸೋಂಕಿನಂತೆ ಇತರ ಜನಾಂಗಕ್ಕೂ ಪಸರಿಸಿರುವುದು ನನ್ನಿಂದಲೇ, ನನ್ನದೇ ತಪ್ಪು.. ನಾನೇ ಯುದ್ಧ ಬೇಕೆಂದವಳು. "ಬಿಕ್ಕೆಯಂತೆ ಬೇಡಿ ಐದು ಗ್ರಾಮಗಳೇ! ಐದು ಗ್ರಾಮಗಳಲ್ಲ, ಇಂದ್ರಪ್ರಸ್ಥವೂ ಸಾಲದು, ಹಸ್ತಿನಾವತಿಯೇ ಬೇಕು" ಎಂದು ನನ್ನ ಹಟವಾಗಿತ್ತಲ್ಲ! ನಾನು ಹಟ ಹಿಡಿದದ್ದು ಕೌರವ ಪಾಂಡವರಲ್ಲಿ ಯುದ್ಧ. ಈಗ ಆಗುತ್ತಿರುವುದು ಯುದ್ಧದ ಹೆಸರಿನಲ್ಲಿ ಸೇನೆಗಳ ಮಾರಣಹೋಮ. ಜನಬಲ-ಧನಧಾನ್ಯಬಲದ ಹ್ರಾಸ. ರಾಜ್ಯಲಕ್ಷ್ಮಿಯ, ಭೂದೇವಿಯ ಬಸಿರನ್ನೇ ಸುಡುವ, ಮತ್ತೆ ಬೆಳೆಯಲಿಕ್ಕಾಗದಂತೆ ಬೇರಿಗೇ ನಷ್ಟ ಉಂಟುಮಾಡುವ ನರಮೇಧ.

ನನ್ನೊಬ್ಬಳಿಗೇ ಅಲ್ಲ, ಹಿರಿಯರೆಲ್ಲರಿಗೂ ಈ ಯುದ್ಧ ಆಗಬೇಕಾದದ್ದೇ ಎನಿಸಿತ್ತಲ್ಲವೇ? ವಿದುರ ಹೇಳಿದ್ದು ನೆನಪಿದೆ. "ನಿನ್ನ ತಪ್ಪಿಲ್ಲ ಬಿಡು. ನಿನ್ನ ಆತ್ಮಗೌರವ ಎದ್ದು ನಿಂತಿತ್ತು. ಕ್ಷತ್ರಾಣಿ ಸ್ವಭಾವವದು. ಅಂತೆಯೇ ನಿನ್ನ ಮಕ್ಕಳದೂ. ದುರ್ಯೋಧನ ಹಿರಿಯರ ಬಲವಂತಕ್ಕೆ ಈಗ ಐದು ಗ್ರಾಮಗಳನ್ನು ಕೊಟ್ಟರೂ ಮತ್ತೆ ಕಾಲು ಕೆರೆದು ಜಗಳ ತೆಗೆಯುವವನೇ. ಇಲ್ಲವೆ ಸಂಚು ಮಾಡಿ ಕೊಟ್ಟದ್ದನ್ನು ಲಪಟಾಯಿಸುವವನೇ. ಅವನ ಸ್ವಭಾವವೇ ಹಾಗೆ. ಇಂದಲ್ಲ ನಾಳೆ ಈ ಯುದ್ಧ ಇದ್ದದ್ದೇ. ಒಂದೇ ಸಲ ನಿರ್ಣಯವಾಗಿ ಹೋಗಲಿ.." ಹಳತು, ಕೊಳಕು ಎಲ್ಲಾ ಹರಿದು ಹೋಗಲಿ ಈ ರಕ್ತದ ಹೊಳೆಯಲ್ಲಿ. ಇದೂ ಲೋಕಸಂಗ್ರಹದ ಭಾಗವೇ! ವಿದುರ ವಿವರಿಸಿದಂತೆ ಮೊದಲಿಗೆ ವೈದಿಕ ಜೀವನ ರೀತಿಯೂ ಪ್ರಕೃತಿ ನಿಕಟವಾಗಿಯೇ ಅಹಿಂಸಾ ರೀತಿಯೇ ಜನಹಿತವಾಗಿಯೇ ಜೀವನ ವಿಧಾನ ರೂಪಿಸಿಕೊಂಡಿತ್ತು. ಪ್ರಜಾಸತ್ತೆಯಿತ್ತು. ಮಾಡುವ ಕೆಲಸವನ್ನನುಸರಿಸಿ ಪ್ರಜಾವರ್ಗೀಕರಣವಿತ್ತು. ಈ ವರ್ಗೀಕರಣವೂ ಜನರ ದೈನಂದಿನ ಜೀವನದ ಅನುಕೂಲಕ್ಕಾಗಿ ಇತ್ತೇ ವಿಹಃ ಅವರನ್ನು ವಿಭಾಗಿಸಿ ದೂರ ಸರಿಸಲಿಕ್ಕಲ್ಲ. ಮೇಲುಕೀಳೆಂಬ ಭಾವನೆಯಿರಲಿಲ್ಲವಾಗಿ ವರ್ಣಗಳಲ್ಲಿ, ಹೊರಗಿನವರಲ್ಲೂ ವಿವಾಹ ಸಂಬಂಧಗಳಿದ್ದವು. ವಿಚಾರಗಳ ವಿನಿಮಯವಿತ್ತು. ಒಳಿತಾಗುವ ಸಲಹೆ ಎಲ್ಲಿಂದ ಯಾರಿಂದ ಬಂದರೂ ಸ್ವಾಗತಾರ್ಹವಿತ್ತು. ಈಗೀಗ ಕೆಲಸದಿಂದಲ್ಲ. ಹುಟ್ಟಿನಿಂದ ವರ್ಣನಿರ್ಧಾರ ಎಂದಾಗಿದೆ. ಅಷ್ಟೇ ಅಲ್ಲ. ವರ್ಣಗಳ ಮಧ್ಯದ ರೇಖೆ ನಿಷ್ಠುರವಾಗುತ್ತಿದ್ದು ಜನರನ್ನು ಭಾಗಮಾಡಿಬಿಟ್ಟಿದೆ. ಮೇಲು ಕೀಳುಭಾವನೆ ಬರುವಂತಹ ವರ್ತನೆ ತಾನೇ ತಾನಾಗಿದೆ. ಹುಟ್ಟಿನಿಂದ ವರ್ಣವೆಂದು ಮಾಡಿದರೂ ಅದನ್ನಾದರೂ ಪಾಲಿಸುತ್ತಿದ್ದರೆ ಎಷ್ಟೋ ನೆಮ್ಮದಿಯಿರುತ್ತಿತ್ತು. ಇಲ್ಲವಲ್ಲ. ಹುಟ್ಟಿದ್ದು ಬ್ರಾಹ್ಮಣ ಕುಲದಲ್ಲಾದರೂ ಕ್ಷತ್ರಿಯನಂತೆ ಶಸ್ತ್ರಾಸ್ತ್ರ ಹಿಡಿದು ಯುದ್ಧಕ್ಕೆ ನಿಲ್ಲುವುದು ವೈಯಕ್ತಿಕ

ದ್ವೇಷ ಅಸೂಯೆಗೆ ಯುವಕರನ್ನು ಯುದ್ಧಕ್ಕೆ ಪ್ರೇರೇಪಿಸುವುದು; ಮಾಸಾಶನ ವರ್ಷಾಶನ ಪಡೆದು ವಿದ್ಯೆಯನ್ನು ಕಲಿಸುವುದು; ಕ್ಷತ್ರಿಯ ಕುಲದಲ್ಲಿ ಹುಟ್ಟಿದ ನೆವವೊಡ್ಡಿ ನೆರೆರಾಜ್ಯದ ಮೇಲೆ ದಂಡೆತ್ತಿಹೋಗಿ 'ರಾಜ್ಯವಿಸ್ತಾರ' ಮಾಡುವುದು – ಅನ್ಯಾಯದ ಕರ ವಿಧಿಸಿ ತಮ್ಮ ಬೊಕ್ಕಸ ತುಂಬಿಕೊಳ್ಳುವುದು; 'ರಾಜ'ನೆಂದು ಪ್ರಜಾಪೀಡನೆ ಮಾಡುವುದು; 'ನಾನೇ ದೇವರು. ಅನ್ಯದೈವ ಮಾನ್ಯ ಮಾಡುವವರಿಗೆ ತಲೆದಂಡ.." ದಬ್ಬಾಳಿಕೆ; ಜಯದ್ರಥ–ಕೀಚಕ–ದುಶ್ಶಾಸನರಂತಹ ಪರಸ್ತ್ರೀಲಂಪಟರು ಅಧಿಕಾರವರ್ಗದಲ್ಲಿ! ಸಹಿಸುವಷ್ಟು ಸಹಿಸಿದ ಅನ್ಯವರ್ಗದ ಜನರು ಹೊಟ್ಟೆಪಾಡಿಗಾಗಿ ಮೋಸ–ಕಳ್ಳತನ, ಸುಲಿಗೆ, ವೇಶ್ಯಾವೃತ್ತಿ–ತಿರುಪೆಗೂ ಇಳಿದಿದ್ದಾರೆ. ರಾಜ್ಯದ ಪಾಲಕರು ಪೋಷಕರನ್ನು ಅನುಸರಿಸಿಯೇ ತಾನೆ ಅಲ್ಲಿನ ಸಾಮಾನ್ಯರ ವರ್ತನೆ ಭಾವನೆ ವಿಚಾರಗಳು ರೂಪಗೊಳ್ಳುವುದು. ಮೇಲ್ಪಂಕ್ತಿಯೇ ಸರಿಯಿಲ್ಲದೆ ದಾರಿತಪ್ಪಿದರೆ ಆ ಪಂಕ್ತಿಯನ್ನು ಅಳಿಸಬೇಕಾಗುವುದು. ಅದು ಲೋಪವಾಗುವುದಿಲ್ಲ. ಶ್ರುತಿಯಿಳಿದ ವೀಣೆಯ ತಂತಿಯನ್ನು ಬಿಗಿಮಾಡಿ ಶ್ರುತಿಬದ್ಧವಾಗಿಸುವಂತೆಯೇ ನೆಮ್ಮದಿಯ ಬಾಳ್ವೆಗಾಗಿ ಈಗಿನ ಜೀವನ ವಿಧಾನವನ್ನು ಧರ್ಮರೀತ್ಯಾ ಬಿಗಿಗೊಳಿಸುವ ಕಾರ್ಯವೇ ಲೋಕಸಂಗ್ರಹ! ಅಬ್ಬ, ನಿಧಾನವಾಗಿಯಾದರೂ ಅಲ್ಪ ಸ್ವಲ್ಪ ಅರ್ಥವಾಗುತ್ತಿರುವ, ವಿಚಾರ ಮಾಡಿದಷ್ಟೂ ಗಹನವಾಗುತ್ತ ಪದರ ಪದರವಾಗಿ ತೆರೆದುಕೊಳ್ಳುತ್ತಿರುವ ತತ್ವ – "ಲೋಕಸಂಗ್ರಹ".

ಮೊದಲಿಗೆ ಆಳುವ ಕ್ಷತ್ರಿಯರಲ್ಲಿರುವ 'ಗೋಮುಖವ್ಯಾಘ್ರ'ಗಳನ್ನು–ಪ್ರಜಾಪೀಡಕರು ಆತತಾಯಿಗಳನ್ನು–ಬೇರುಸಹಿತ ಕಿತ್ತೊಗೆಯಬೇಕು. ನಿಜ. ನಮ್ಮ ಯುದ್ಧ ಕೇವಲ ರಾಜ್ಯಕ್ಕಾಗಿ ಅಲ್ಲ. ಆತತಾಯಿಗಳೊಡನೆ, ಕೊಲೆಪಾತಕಿಗಳೊಡನೆ! ಶಸ್ತ್ರ ಹಿಡಿದು ಹೊಡೆದಾಡಲು ಅವಕಾಶ ಕೊಟ್ಟರೆ ಅಲ್ಲೂ ಮೋಸ ವಂಚನೆಮಾಡಿ ನಡೆಸಿರುವ ಹತ್ಯಾಕಾಂಡ. ಯುದ್ಧದ ಆರಂಭಕ್ಕೆ ಮೊದಲೇ ಎರಡೂ ಪಕ್ಷದ ಸೇನಾಪತಿಗಳ ಸಮ್ಮುಖದಲ್ಲಿ ನಾಯಕರು ನಿರ್ಧರಿಸಿದ ಯುದ್ಧದ ರೀತಿ ನೀತಿಗಳು ಏನಾದವು? ತಾವೇ ಹಾಕಿದ ನಿಬಂಧನೆಗಳನ್ನು ತಾವೇ ಮುರಿದು ಯುದ್ಧದಲ್ಲೂ ನೀತಿ ಮಾರ್ಗ ಧಿಕ್ಕರಿಸಿದವರಲ್ಲಿ ಮೊದಲಿಗರೇ ಆಚಾರ್ಯ! ಗುರುವೆನಿಸಿದ ದ್ರೋಣರು.

ಅಭಿಮನ್ಯು ಕೇವಲ ಹದಿನಾರರ ಪೋರ. ಅವನದು ಸಾವೇ? ಕಗ್ಗೊಲೆ! ಹುಡುಗ ಎರಡೂ ಕಡೆಯಿಂದ ವಂಚಿತನಾದವ. 'ಚಕ್ರವ್ಯೂಹ' ದ್ರೋಣರ ವಿಶಿಷ್ಟ ಸೇನಾರಚನೆ. ಅದನ್ನು ಭೇದಿಸಲು ತಿಳಿದಿದ್ದುದ್ದು ಅರ್ಜುನ, ಕೃಷ್ಣ ಮತ್ತು ಅಭಿಮನ್ಯುವಿಗೆ ಮಾತ್ರ. 'ನೀನು ವ್ಯೂಹವನ್ನು ಭೇದಿಸಿ ನುಗ್ಗು. ನಿನ್ನ ಹಿಂದೆಯೇ ನಾವಿರುತ್ತೇವೆ' ಎಂದು ಆಶ್ವಾಸನೆಯಿತ್ತ ದೊಡ್ಡಪ್ಪಂದಿರು ಯುದ್ಧದ ರೀತಿಯಲ್ಲಿ ಸೋತು ಅವನ ಹಿಂದೆ ನುಗ್ಗಲಾರದೆ ಅವನ ಪಾಡು ನೋಡುತ್ತ ಹೊರಗೇ ನಿಂತರು. ರೀತಿ ನೀತಿ ಹಾಳಾಗಲಿ. ಎಲ್ಲಿಂದಲೋ ಒಳನುಗ್ಗಿ ಹೋಗುವ ಬಲವಿರಲಿಲ್ಲವೇ ಭೀಮನಿಗೆ? ಒಳನುಗ್ಗಿದ ಅಭಿಮನ್ಯು ಒಬ್ಬನೇ ಎದುರು ಬಂದವರನ್ನೆಲ್ಲಾ ಬಗ್ಗು ಬಡಿಯುತ್ತಿದ್ದ ವೀರಾವೇಶವನ್ನು ಕಂಡ ಕರ್ಣ – 'ವೀರ' ದ್ರೋಣರಲ್ಲಿ ಅವನನ್ನು ಸೋಲಿಸುವ ಬಗೆ ಕೇಳಿದನಂತೆ. ಬ್ರಾಹ್ಮಣ–ಆಚಾರ್ಯನೆನಿಸಿಕೊಂಡ–ಸೇನಾನಿ ದ್ರೋಣ ಹೇಳಿಕೊಟ್ಟ ವಿಧಾನ? "ಹಿಂದಿನಿಂದ–ಅವನಿಗೆ ಕಾಣದಂತೆ–ಹೋಗಿ ಅಭಿಮನ್ಯುವಿನ ಧನುಸ್ಸು

ಮುರಿದು ಸಾರಥಿಯನ್ನು ಕೊಂದರೆ ಮಾತ್ರ ಅವನನ್ನು ಗೆಲ್ಲಬಹುದೇನೋ!" ಆಗಲೂ ಅವನು ಅಜೇಯನೇ ಎಂಬ ದನಿ-ಅದಕ್ಕೇ ಮೋಸಮಾಡಿ ಗೆಲ್ಲುವ ಪರಿ! ಇವರು 'ಆಚಾರ್ಯ'ರೇ? ಅನುಕರಣೀಯರೇ? 'ಅರ್ಜುನನ ಸಮ ನಾನು' ಎನ್ನುತ್ತಿದ್ದ ಕರ್ಣ ಹಿಂದೆ ನಿಂತು ಬಾಣ ಎಚ್ಚಿ ಅಭಿಮನ್ಯುವಿನ ಬಿಲ್ಲಿನ ಹಗ್ಗ ಹರಿದನಂತೆ. ಈ ಹೊಲೆಕೆಲಸ ಯಾರದೆಂದು ಹಿಂತಿರುಗಿದ ಕ್ಷಣದಲ್ಲೇ ದ್ರೋಣ ಅಭಿಮನ್ಯುವಿನ ಸಾರಥಿಗಳನ್ನು ಕೊಂದು ರಥದ ಗಾಲಿಗಳನ್ನು ತುಂಡರಿಸಿದ ವರೇಣ್ಯರು! ಖಡ್ಗ ಹಿಡಿದು ಕೆಳಗೆ ಬಂದು ಹೋರಾಡುತ್ತಿದ್ದ ಒಂಟಿ ಬಾಲಕನ ಮೇಲೆ ಆರು ಎಂಟು ಜನ – ಕೃತವರ್ಮ, ಕರ್ಣ, ಕೃಪ, ಅಶ್ವತ್ಥಾಮ, ದ್ರೋಣ, ದುಶ್ಯಾಸನ, ಶಕುನಿ ಇನ್ನಾರೋ.... ಒಟ್ಟಿಗೇ ಮುತ್ತಿಕೊಂಡರಂತೆ.. ಬೀದಿ ನಾಯಿಗಳಂತೆ... ಧನುಸ್ಸು ಮುರಿದರು. ಖಡ್ಗದ ಹಿಡಿ ಮುರಿದರು. ತಾನು ನಿರಾಯುಧನಾಗಿ ನಿಂತರೂ ಬಾಣಬಿಡುತ್ತಿದ್ದ ಹಿರಿಯರು – 'ಯುದ್ಧಕೋವಿದ'ರ ರೀತಿಗೆ ಹೇಸಿ 'ಒಬ್ಬೊಬ್ಬರೇ ನನ್ನೊಡನೆ ಹೋರಾಡಲಾಗದ ಹೇಡಿಗಳು ನೀವು!' ಎಂದು ಕಿರುಚಿದನಂತೆ! ರಥದ ಗಾಲಿಯನ್ನೇ ಎತ್ತಿ ಬಂದವನ ತೋಳುಗಳನ್ನೇ..? ಛೀ! ಮೂರ್ಛೆ ಹೋಗಿ ಎಚ್ಚರಾಗುತ್ತಿದ್ದಂತೆಯೇ ಎದ್ದು ನಿಲ್ಲಲೂ ಬಿಡದೆ ಗದಾಪ್ರಹಾರ! ಕರ್ಣ ದ್ರೋಣರೂ ಈ ಮಟ್ಟಕ್ಕೆ ಇಳಿವರೆಂದು ಎಣಿಸಿರಲಿಲ್ಲ. ಆಚರಣೆಯಲ್ಲಿ 'ಆರ್ಯ' ದ್ರೋಣಾಚಾರ್ಯ?! ಛೀ!...ಧರ್ಮಾದಿಗಳಿಗೆ ದಾರಿ ಸಿಗದಾಗಿ ವಂಚಿತನಾದರೆ ಶತ್ರುಪಕ್ಷದ 'ಹಿರಿಯರು' ತಿಳಿದೂ ತಿಳಿದೂ ವಂಚಿಸಿ ಕೊಂದರು.

ಕೊಲೆಪಾತಕಿಗಳು ಬ್ರಾಹ್ಮಣರೆನಿಸಿಕೊಂಡು, ರಾಜರೆನಿಸಿಕೊಂಡು ಭೂಮಿಯಮೇಲೆ ನಡೆದಾಡುವವರೆಗೆ ಲೋಕಸಂಗ್ರಹ ಸಾಧ್ಯವಿಲ್ಲ. ಮುಳ್ಳನ್ನು ಮುಳ್ಳಿಂದಲೇ ತೆಗೆಯುವಂತೆ ಪಾತಕಿಗಳನ್ನು ಅವರ ರೀತಿಯಿಂದಲೇ ಕೊಲ್ಲಬೇಕು. ಕೌರವಸೇನೆಯ ಮಹಾರಥಿಗಳು ಅಳಿದುಳಿದ ಕ್ಷತ್ರಿಯ ಧರ್ಮವನ್ನು ಗಾಳಿಗೆ ತೂರಿ ಆತತಾಯಿಗಳಲ್ಲಿ ಅಗ್ರೇಸರರಾಗಿದ್ದಾರೆ. ಇವರೊಡನೆ ಧರ್ಮಾಧರ್ಮವೆಂದು ವ್ಯವಹರಿಸುವುದೇ ಅಧರ್ಮವೆಸಗಿದಂತೆ. ಶ್ರೀಕೃಷ್ಣನೇ ಹೇಳಿದನಂತಲ್ಲ.

"ಅಭಿಮನ್ಯುವಿನ ಘೋರ ಹತ್ಯೆಯ ನಂತರ ಈ ಯುದ್ಧದಲ್ಲಿ ರೀತಿ-ನೀತಿಗೆ ಬೆಲೆಯಿಲ್ಲ. ಪಾತಕಿಗಳ ಮೂಲೋಚ್ಚಾಟನೆಯೇ ಗುರಿ. ಯಾವ ರೀತಿಯಾದರೂ ಸರಿ! ನನಗಿರುವ ಶಪಥವೊಂದೇ-ಪಾತಕಿಗಳನ್ನು ತರಿ. ಧರ್ಮರಾಯ, ಅರ್ಜುನ, ಭೀಮ ಕೇಳಿ. ಇನ್ನು ಮುಂದೆ ಯಾವುದೇ ಬಗೆಯ ಯುದ್ಧ ನಿಯಮಗಳಿಲ್ಲ. ಕೌರವರಿಗೂ ಉಳಿವಿಲ್ಲ. ರಾತ್ರಿಯಲ್ಲೂ ಯುದ್ಧ ನಡೆದುಹೋಗಲಿ!..." ಮಗ ಘಟೋತ್ಕಚನ ಸಾವಿನ ನಂತರ ಭೀಮನನ್ನು ಹಿಡಿದವರಿಲ್ಲ. ಈಗ ಕೃಷ್ಣನೇ ಅನುಮತಿಯಿತ್ತಿರುವನೆಂದ ಮೇಲೆ ಭೀಮ ರಾತ್ರಿಯಲ್ಲೂ ಶಿಬಿರಕ್ಕೆ ಹಿಂದಿರುಗಿಲ್ಲವಂತೆ..

ಈ ಸಂಜೆ ಹೊತ್ತಿನ ಬೆಳಕೂ ವಿಚಿತ್ರ. ಮನದಲ್ಲಿ ಹೀಗೆಂದು ಹೇಳಲಾಗದ ಭಾವನೆಗಳ ತಾಕಲಾಟ. ಹುಟ್ಟೂರಿನಿಂದ ಭೋಜರಾಜನರಮನೆಗೆ ಬಂದಾಗಿನಿಂದಲೂ ಸಂಜೆ ಬೆಳಕೆಂದರೆ ಮನಸು ಕದಡಿಹೋಗುವುದು. ಎಲ್ಲೋ ಒಯ್ದುಬಿಟ್ಟ ಕಳೆದುಹೋದ ಭಾವ. ಈಗಲೂ

ಪಾತಾಳಗರಡಿಯಂತೆ ಹಿಂದಿನ ಸಂಗತಿಗಳನ್ನು ಮತ್ತೆ ಮತ್ತೆ ಮೇಲಕ್ಕೆತ್ತಿ ತರುವ ಹಳದೀ ಬೆಳಕು. ಮೇಲಕ್ಕೆ ಬರುತ್ತಿದ್ದುದೆಲ್ಲ ಛಿದ್ರಚಿತ್ರಗಳು. ಪೃಥಿವಿಯು ರಾಜರಿಂದಾಗಿ ರಾಜ್ಯಗಳೆಂದು ಛಿದ್ರವಾದರೆ ಪೃಥೆಯೂ ರಾಜರಿಂದಾಗಿಯೇ ತುಣುಕುಗಳಲ್ಲಿ ಬದುಕಿರುವವಳು – ವಿಪತ್ತು ಘಟನೆಗಳ ಕಾಲಘಟ್ಟಗಳಾಗಿ; ಕಾಡು ನಾಡುಗಳಲ್ಲಿ; ಭಾಗಗಳಾಗಿ ಸಿಕ್ಕ ಸಂಬಂಧಗಳೊಡನೆ.. ಹಸ್ತಿನಾವತಿಯರಮನೆಯಿಂದ ಹಿಮಾಲಯದ ಕಾಡಿನ ಗುಡಿಸಲು; ಮತ್ತೆ ಹಸ್ತಿನಾವತಿ-ಮತ್ತೆ ವಾರಣಾವತ ಕಾಡು–ಪಾಂಚಾಲನಾಡು – ಇಂದ್ರಪ್ರಸ್ಥ ಭವನ – ಈಗ ವಿದುರ ಕುಟೀರ! ಇಂತೆಲ್ಲ ಪಡಿಪಾಟಲಲ್ಲಿ ಮಕ್ಕಳು ಸಂಸಾರದ ನೊಗಕ್ಕೆ ಜೊತೆ ನಿಂತವರು? ನತದೃಷ್ಟೆ ನಾನು. ಹೆತ್ತವರೊಬ್ಬರಾದರೆ ಬೆಳೆಸಿದವರಿನ್ನೊಬ್ಬರು. ಕನ್ಯತ್ವ ಬಿಡಿಸಿದವರೊಬ್ಬನಾದರೆ ವರಿಸಿದ್ದು ಬೇರೊಬ್ಬರು. ನಿಯೋಗದಲ್ಲಿ ಮಕ್ಕಳನ್ನು ಕೊಟ್ಟವರು ಒಬ್ಬರಲ್ಲ, ಇಬ್ಬರಲ್ಲ ಮೂವರು ಪರಕೀಯರು! ನನಗೆ ಮತ್ತು ಮಕ್ಕಳಿಗೆ ಬೆಂಗಾವಲಾಗಿ ನಿಂತು ರಕ್ಷಿಸಿದವರು ಸಲಹಿದವರು ಮತ್ತೊಬ್ಬರು. ಎಲ್ಲರಂತೆ ನನಗೇಕೆ ಈ ಎಲ್ಲ ಹೊಣೆಗಳನ್ನು ಹೊತ್ತ ಒಬ್ಬನೇ ಜೊತೆಗಾರನಿಲ್ಲ? ನನ್ನದೂ ಒಂದು ಜೀವನವೇ? ರೋಸಿಹೋಗಿದೆ ಜೀವ. ಈ ಛಿದ್ರತೆಯ ಒಡಕಲು ಭಾವ ಕುಂತಿಗೆ ಮಾತ್ರವೇ? ಹೋದ ಸಲ ಬಂದಾಗ ವಾಸುದೇವನಲ್ಲಿ ಅತ್ತುಕೊಂಡಿದ್ದೆ. ಅವತ್ತು ಅವನದೇ ವಿಚಾರದ ಮೋಡಿ ಹಾಕಿ ಮೇಲಕ್ಕೆತ್ತಿದ್ದ–....

"ಏತಕ್ಕೀ ಖಿನ್ನತೆ? ಪಾಂಡವರ ತಾಯಿಗೆ ತಕ್ಕುದಲ್ಲ ನೋಡು, ನೀನಿದುವರೆಗೆ ತೆಗೆದುಕೊಂಡಿರುವ ನಿರ್ಧಾರಗಳು, ಮಾಡಿರುವ ಕಾರ್ಯಗಳು ಸರಿಯಿದ್ದ ಮೇಲೆ ಈ ವಂಚಿತ ಭಾವವೇಕೆ? ಅದುಬಿಟ್ಟು ಕಷ್ಟಕಾಲದಲ್ಲಿ ದಾಟಿಸುವರೊಬ್ಬರು ಸಿಕ್ಕಿ ಕಾರ್ಯಸಾಧನೆ ಯಾದ ಬಗ್ಗೆ ತೃಪ್ತಿಯಿರಲಿ. ಸಂಬಂಧಗಳೇನಿದ್ದರೂ "ನಮ್ಮಿಂದ ಅವರಿಗೇನು ಹಿತ ಮಾಡಲು ಸಾಧ್ಯ?" ಎಂದು ಯೋಚಿಸಲಿಕ್ಕೇ ಹೊರತು ಅವರಿಂದ ನಮಗೇನು ಸಿಕ್ಕೀತು ಎನ್ನುವ ಅಪೇಕ್ಷೆ ನಿರೀಕ್ಷೆ ಎರಡೂ ದುಃಖದಾಯಿ.

ನಿನ್ನ ಬಾಳು ಹಸ್ತಿನಾವತಿಯಲ್ಲೇ ನಿಂತ ನೀರಾಗಿ ಕೊಳೆಯದೆ ಹರಿವ ನದಿಯಾಗಿ ಇಕ್ಕೆಲದ ನೆಲಕ್ಕೆ ನೀರುಣಿಸುವ ಜಲರಾಶಿಯಾಯಿತಲ್ಲವೇ? ಈ ಹತ್ತು ಹಲವು ಅನುಭವಗಳಿಂದ ತಾನೇ ನಿನ್ನ ಐವರು ಮಕ್ಕಳು "ಪಂಚಪಾಂಡವ'ರಾಗಿ ಧೀರವೀರರಾಗಿ ಕಂಗೊಳಿಸುತ್ತಿರುವುದು. ನೀ ಬಯಸುವಂತಾಗಿದ್ದರೆ ಕೇವಲ ಕುರುಮನೆತನದ ರಾಜಕುವರರಾಗಿ ಹತ್ತರ ಜೊತೆ ಹನ್ನೊಂದು ಎಂದಾಗಿರುತ್ತಿದ್ದರು. ನೀನು ಧೈರ್ಯವಂತೆ. ಯಾವ ರಾಜಕುಲಸ್ತ್ರೀಯೂ ಮಾಡದ ಹಲವು ಕಾರ್ಯಗಳನ್ನು ಸಮಾಜದ ಮನ್ನಣೆ ಪಡೆದುಕೊಂಡೇ ಮಾಡಿದ್ದೀಯೆ. ವಿಶೇಷ ರೀತಿಯ ಬಾಳು ನಡೆಸಿದ್ದೀಯೆ. ನಿನ್ನ ಅನುಭವಗಳೂ ವಿಶಿಷ್ಟ.

ಹುಟ್ಟಿದ ಮನೆಯಿಂದ ಹೊರತಂದ 'ದತ್ತು' ; ಸಂಪ್ರದಾಯದಿಂದ ಹೊರತಂದ 'ಕನ್ನೆಬಸಿರು'; ಹಸ್ತಿನಾವತಿಯರಮನೆಯಿಂದ ಹೊರತಂದ ಅಕಾಲಿಕ 'ವೈರಾಗ್ಯ–ತಪಸ್ಸು'; ಸಂತಾನಕ್ಕಾಗಿ ತಪಸ್ಸಿನಿಂದ ಹೊರತಂದ 'ನಿಯೋಗ'; ರಾಜ್ಯಕ್ಕಾಗಿ ಹಸ್ತಿನಾವತಿಗೇ ಮರಳಿ ತಂದ 'ವೈಧವ್ಯ'; ಮಕ್ಕಳ ಉಳಿವಿಗಾಗಿ ವಾರಣಾವತದಲ್ಲಿ ತಲೆಮರೆಸಿಕೊಂಡ 'ವನವಾಸ'; ಈ 'ಅಜ್ಞಾತವಾಸ'ದಿಂದ

ಹೊರತಂದ ದ್ರೌಪದಿ 'ಸ್ವಯಂವರ'; ಮತ್ತೊಮ್ಮೆ ಸಂಪ್ರದಾಯದಿಂದ ಹೊರತಂದ ಪಂಚಪಾಂಡವರೊಂದಿಗಿನ 'ದ್ರೌಪದೀ ವಿವಾಹ'; ಜೀವನದ ಸನ್ನಿವೇಶದಿಂದ ಹೊರಬಂದು ನೋಡಿ ಮತ್ತೆ ಅದನ್ನು ಪ್ರವೇಶಮಾಡುವ ಅವಕಾಶ ನಿನಗೆ ಮಾತ್ರ ಲಭಿಸಿದೆ. ಇವಕ್ಕೆ ಸಮಾಜದ ಸಮ್ಮತಿಯೂ ಸಿಕ್ಕಿದೆ. ಕಲಿತು ಮುಂದುವರೆಯಲು ಹೇರಳ ಸಾಮಗ್ರಿ!

ಈ ವಿಶೇಷ ಬಾಳಿನ ಪ್ರವಾಹದಲ್ಲೇ ಇರು. ಇದರಿಂದ ಹೊರಬಂದು ನಿಂತಾಗಲೆಲ್ಲ ಘಟ್ಟಗಳಾಗಿ ತುಂಡರಿಸಿದ ಬಾಳೆನಿಸುವುದು. ಈ ಬಾಳಿನ ಏಕಭಾವ-ಏಕಸೂತ್ರ-ಏಕಧ್ಯೇಯ ಯಾವುದೆಂದು ಗೊತ್ತುಮಾಡಿಕೊಂಡರೆ ಛಿದ್ರತೆಯ ಭಾವವಿರುವುದಿಲ್ಲ. ಬಾಳಿನ ಪ್ರವಾಹದಲ್ಲೊಂದಾಗಿ ಹರಿಯಬೇಕು. ಪ್ರವಾಹದ ಮಧ್ಯೆ ನಿಂತ ಬಂಡೆಯಾದರೆ ನೀರಿನ ರಭಸ ನಿನ್ನನ್ನು ಕೊಚ್ಚಿ ಕೊರೆದು ಅರೆಯುವ ದುಃಖ, ಕಷ್ಟ ಪ್ರವಾಹದಲ್ಲಿ ತೇಲುವ ವಸ್ತುವಾದರೆ ಅತ್ತಿಂದಿತ್ತ ಬಂಡೆ-ದಡಗಳಿಗೆ ಅಪ್ಪಳಿಸಿ ಹೊರಳಿ ಸಾಗುವ ತೊಳಲಾಟ; ಹರಿವ ನೀರಲ್ಲಿ ನೀರಾಗಿ ಹೋದರೆ ಯಾವ ದುಃಖ ನೋವು? ಯಾವ ಭಯ? ಕಾಲಪ್ರವಾಹದಲ್ಲಿನ ವರ್ತಮಾನದ ಕ್ಷಣದಲ್ಲೇ-ಕ್ಷಣವನ್ನೇ ಏರಿಬಿಟ್ಟರೇ? ಕ್ಷಣವೇ ಆಗಿಹೋದರೆ? ಅಂತಹ ಹರಿವಿನ ಆನಂದವೇ ಬೇರೆ. ಈ ಅನಂತತೆಯ ಆನಂದವೇ ಮಾನವನ ಗುರಿಯಲ್ಲವೇ, ಹೇಳು... ಅತ್ತೇ, ನಿನಗೆ ದೈವಕೃಪೆ ಅಪಾರವಾಗಿದೆ. ನಿನ್ನ ಧ್ಯೇಯಕ್ಕಾಗಿ ಪ್ರಯತ್ನಗಳನ್ನು ಒಮ್ಮುಖ ಮಾಡಿದ್ದೀಯೆ. ನಿರ್ವಂಚನೆಯಿಂದ ಕಾರ್ಯವೆಸಗಿದ್ದೀಯೆ. ಅದಕ್ಕನುಸಾರವಾಗಿ ಸಿಕ್ಕ ಫಲವನ್ನು ಸ್ವೀಕರಿಸು. ಅದರಲ್ಲಿನ ಒಳಿತನ್ನು ಆತುಕೋ. ಕೆಡುಕೇನಿದ್ದರೂ ಅದರಿಂದ ಪಾಠ ಕಲಿಯುವ ಉತ್ಸಾಹವಿರಲಿ. ಈ ಖಿನ್ನತೆಯಿಂದಾವ ಉಪಯೋಗವೂ ಇಲ್ಲ. ಹೊರಹಾಕು... ಅತ್ತೆ ನಿನಗೊಂದು ಸಂಗತಿ ಹೇಳಲೇ.. ನಮ್ಮ ಸ್ವಂತ ಹಿತಕ್ಕಾಗಿ ಮಾಡುವ ಕಾರ್ಯಗಳಿಗಿಂತ ಬೇರೆಯವರಿಗಾಗಿ ಹಮ್ಮಿಕೊಂಡ ಕಾರ್ಯಗಳು ಹೆಚ್ಚು ಆನಂದ ಕೊಡುತ್ತವೆ. ಇಲ್ಲಿಯವರೆಗೆ 'ನನ್ನ ಮಕ್ಕಳಿಗೆ ರಾಜ್ಯ ಬೇಕು' ಎಂದು ದುಡಿದೆ. ಇನ್ನು ಮುಂದೆ ಕುರುರಾಜ್ಯದಲ್ಲಿ – ಭಾರತ ದೇಶದಲ್ಲಿ ಸುಖ ಶಾಂತಿ ನೆಲೆಸಲಿ ಎಂದು ಕಾರ್ಯಮಗ್ನಳಾಗು. ನಿನ್ನ ತನುಮನ ಮುಡಿಪಿಡು. ಪೃಥೆ ಅನ್ವರ್ಥನಾಮಧೇಯಳಾಗಿ ಮಕ್ಕಳನ್ನು ಸನ್ಮಾರ್ಗಿಗಳಾಗಿ ಬೆಳೆಸಿದ್ದೀಯೆ. ಈಗ ಧರಿತ್ರೀಯಾಗು. ಎಲ್ಲವನ್ನೂ ಆತ್ಮಸಾತ್ ಮಾಡಿಕೊಳ್ಳುವ ಧರಿತ್ರೀ... ಧಾರಿಣಿಯಾಗಿ ಬೆಳೆದು ನಿಲ್ಲು. ಎಲ್ಲರ ನಡವಳಿಕೆಗಳನ್ನು, ಸನ್ನಿವೇಶಗಳನ್ನು ಅರಗಿಸಿಕೊಂಡು ನೆಲೆಕೊಡುವ ಉದಾರಿಯಾಗು-ಧರೆಯಾಗು. ಖಿನ್ನತೆ ನಿನಗೆ ಸಲ್ಲ. ನಿನಗೂ ಗೊತ್ತಿದೆ, ಪಡೆಯುವುದಕ್ಕಿಂತ ಕೊಡುವುದರಲ್ಲಿನ ಸುಖ ಆನಂದ ನೂರ್ಮಡಿ ಎಂದು..."

ಏನು ಆನಂದವೋ ಏನು ಸುಖವೋ...ಒಂದಂತೂ ಖಚಿತ. ಈಗಿನ ನೋವು ಸಂಕಟ ಒಂದೇ ಕಡೆ 'ನನ್ನ ಸಂಸಾರ'ದಲ್ಲೇ ಮಡುವಾಗಿ ನಿಂತಲ್ಲೇ ಸುಳಿಯಿಡದೆ ಎಲ್ಲೆಡೆ ಏಕರೀತಿ ವಿಶಾಲವಾಗಿ ಹರಡಿದೆ. ಯಾರೊಬ್ಬರಿಗೇ ಅಲ್ಲದೆ ಎಲ್ಲರಿಗೂ ಮಿಡಿವ ಅಂತರಾಳದ ದುಃಖವಾಗಿದೆ. ಉಳಿದಿರುವವರಾದರೂ ತಮ್ಮ ತಮ್ಮ ಬಾಂಧವರೊಂದಿಗೆ ಕ್ಷೇಮವಾಗಿ ಸೇರಿಕೊಳ್ಳಲಿ ಎಂದು ಮನಸ್ಸು ಹಾರೈಸುತ್ತಿದೆ. ಎಂದಿಗೆ ಮುಗಿವುದೋ ಈ ಸಮರ. ಒಂದೆರಡು

ದಿನಗಳಲ್ಲೇ ಎಲ್ಲವೂ ತೀರ್ಮಾನವಾಗಿ ಹೋಗುವುದೆಂಬ ನನ್ನೆಣಿಕೆಯೇ ತಪ್ಪಾಯಿತು. ಭೀಷ್ಮರ ನೇತೃತ್ವದಲ್ಲೇ ಹತ್ತು ದಿನಕ್ಕೆ ಎಳೆದುಕೊಂಡು ಹೋಯಿತು. ಎಷ್ಟು ಮಂದಿ ಜೀವ ತೊರೆದರೋ ಲೆಕ್ಕವಿಲ್ಲ. ಇದು ಸಮರವಲ್ಲ. ಸರ್ವನಾಶವೇ! ಹಸ್ತಿನಾವತಿ ಗುರುಹಿರಿಯರಿಲ್ಲದ ಹಾಳೂರು ಆಗಿ ಹೋಯಿತು. ಇಂದಿಗೆ ಹದಿನೇಳನೇ ದಿನದ ಕದನವೂ ಮುಗಿದಿದೆ. ಅಥವಾ.. ನೆನ್ನೆ ಮೊನ್ನೆಯಂತಾದರೆ ರಾತ್ರಿಯೂ ನಡೆದರೆ?..

"ಕುಂತೀ, ಇಂದಿನ ಸುದ್ದಿ ಬಂದಿದೆ. ಕರ್ಣ ಹತನಾದ. ಅರ್ಜುನ ಜಯಿಸಿದ. ಭೀಮ ದುಶ್ಯಾಸನನನ್ನು ಏರುಹೊತ್ತಿನಲ್ಲೇ ಕೊಂದನಂತೆ. ಕರ್ಣ ಇಳಿಹೊತ್ತಿನಲ್ಲಿ ಮಡಿದನಂತೆ. ಪಾಂಡವರು ಗೆದ್ದಂತೆಯೇ. ಕುಂತೀ ಕೇಳಿದೆಯ... ಕರ್ಣ ದುಶ್ಯಾಸನರು ಮಡಿದರು. ಕುಂತೀ...ಏಕೆ ಏನಾಯಿತು? ನಾ ಹೇಳಿದ್ದು ತಿಳಿಯಿತೇ... ನಿನ್ನ ಮಕ್ಕಳು ಕ್ಷೇಮ. ನಿಶ್ಚಿಂತಳಾಗು. ಕುಂತೀ...ಕುಂತೀ..."

ಪಾರ್ಶವಿಯ ಏರುದನಿ.. ಹೌದಲ್ಲ ಪಾರ್ಶವಿಯ ದನಿ... ಕಿವಿಗಳೇಕೆ ಗುಯ್ಗುಡುಟ್ಟುತ್ತಿವೆ? ಓಕರಿಕೆ... ಏನೂ ಕಾಣಿಸದಲ್ಲಾ... ಪಾರ್ಶವೀ... ಪಾರ್ಶವೀ... ನಿನ್ನ ಕೈಕೊಡಿಲ್ಲಿ...ವಿದುರನೆಲ್ಲಿ? ...ಕರ್ಣನನ್ನು ಕೊಂದವರಾರು?... ಕರ್ಣ ಹೋಗೇಬಿಟ್ಟನೇ?... ತನ್ನ ರಹಸ್ಯ ಹೊಟ್ಟೆಯಲ್ಲಿಟ್ಟು ಕೊಂಡೇ ಹೊರಟುಹೋದ ನತದೃಷ್ಟ.

ಎಲ್ಲಾ ವಿಧಿಯಾಟ.. ಕರ್ಣ ಸತ್ತು ಮಾತನುಳಿಸಿಕೊಂಡ. ಹೀಗಾಗುವುದೆಂದು ಗೊತ್ತಿದ್ದರೂ ಏಕೆ ಸಂಕಟ? ಅಭಿಮನ್ಯುವನ್ನು ಕೊಂದವರಲ್ಲೊಬ್ಬ ಪಾತಕಿ ಹೋದ ಎಂದುಕೊಳ್ಳಬೇಕು. ಆದರೂ ಮಾಣಿಕ್ಯವೊಂದು ಜತನ ಮಾಡದೆ ಗಾಜಿನ ಚೂರಿನಂತೆ, ನನ್ನಿಂದಾಗಿ ಮಣ್ಣುಪಾಲಾದದ್ದು ಸುಳ್ಳೆ? ದುರ್ಯೋಧನಾದಿಗಳನ್ನು ಮರಣದಂಡನೆಗೆಂದು ಎಳೆದು ತರಲು ಉಪಯೋಗಿಸಿದ ಹಗ್ಗವಾಗಿ ಕೆಲಸಕ್ಕೆ ಬಂದನೆಂದುಕೊಳ್ಳಲೇ? ಎಲ್ಲೋ ಮರೆಯಾಗಿ ಬದುಕಿಕೊಳ್ಳಲೆಂದು ಹಾರೈಸಿದ್ದು ಸಾಕಾಗಲಿಲ್ಲ. ಸುಡಲಿ! ಹೊಟ್ಟೆ ಉರಿದುಹೋಗಲಿ. ಯಾರು ಯಾರು ಸಾಯಬೇಕೆಂದಿದೆಯೋ ಸತ್ತೇ ಸಾಯುತ್ತಾರೆ. ರಣರಂಗದಲ್ಲಿ ಎಷ್ಟು ದುಶ್ಯಾಸನರು–ಎಷ್ಟು ಕರ್ಣರು–ಎಷ್ಟು ಅಭಿಮನ್ಯುಗಳು. ತಮ್ಮದೇ ಕುಕೃತ್ಯಗಳಿಗೆ ಜೀವಬೆಲೆ ತೆತ್ತ ದುಶ್ಯಾಸನರು; ದುಷ್ಟರ ಸಹವಾಸ ಮಾಡಿ ಜೀವ ಕಳೆದುಕೊಂಡ ಕರ್ಣರು; ತಮ್ಮ ಹಿರಿಯರು ಮಾಡಿದ ಕುಕರ್ಮಕ್ಕೆ ಬಲಿಯೇರಿದ ಅಭಿಮನ್ಯುಗಳು; ಯಾರಿಗಾಗಿ ಯಾವ ಕರ್ಮಕ್ಕಾಗೆಂದು ತಿಳಿಯದೇ ಜೀವಬಿಟ್ಟರು ಮಿಕ್ಕವರು. ಎಲ್ಲರೂ ರಣಚಂಡಿಗೆ ನೈವೇದ್ಯರು; ಮೇಲ್ನೋಟಕ್ಕೆ ಇದು ಯುದ್ಧವಾಗಿದೆ–ದಿಟವಾಗಿ ಕಳೆಯನ್ನು ಸುಡುವ ಕೊಳೆಯನ್ನು ತೊಳೆವ ಕೆಲಸ ನಡೆದಿದೆ. ಇದೂ ಮುಗಿದು ಹೋಗಲಿ. ಭೂಮಿ ಹಗುರಾಗಲಿ, ಹಗುರಾಗಿ, ಹಸನಾಗಿ ಮತ್ತೆ ಫಲದಾಯಿನಿಯಾಗಿ ನಳನಳಿಸಲಿ.

ವಿದುರನೇಕೆ ಇನ್ನೂ ಬರಲಿಲ್ಲ? ...ನನ್ನ ಊರುಗೋಲಾದ ವಿದುರನೆಲ್ಲಿ? ...ಇನ್ನೂ ಅರಮನೆಯಿಂದ ಬಂದಿಲ್ಲವೇ? ಧೃತರಾಷ್ಟ್ರನ ಗೋಳು ಕೇಳುತ್ತಿರಬೇಕು. ಅದೂ ಮತ್ತೊಂದು ಕುದಿಕುದಿವ ಜೀವ. ಜೊತೆಗೆ ಭೋರಿಡುವ ಗಾಂಧಾರಿ. ಯಾವಾವ ತಾಯೊಡಲ ಬಡಬಾಗ್ನಿ

ಹೊತ್ತಿಹುದೋ! ಹಾಳುಸುರಿವ ಅರಮನೆ; ಅರಮನೆಯೇ..ಸುಡುಮನೆ! ಎಲ್ಲ ಹೊತ್ತಿ ಉರಿಯುತ್ತಿದ್ದರೂ ಏನೂ ಕಾಣದಾಗಿರುವ ಕಣ್ಗತ್ತಲು. ವಾಸುದೇವ...ಇದೇನು ನಿನ್ನ ಮಹತ್ಕಾರ್ಯ? ನಿಂತಲ್ಲೇ ಕುಸಿದು ಕುಳಿತು...ಕುಳಿತಲ್ಲೇ ಒರಗಿ ಮಲಗಿ...ಮಲಗಿದಲ್ಲೇ ಕಣ್ಮುಚ್ಚಿ ಒಳಸೋರುವ ಸೋಲು–ನಿರ್ಬಲತೆ..ವಿದುರನೇಕೆ ತಳವಿದ್ದಾನೋ?...

ನನ್ನ ಆರು ಮಕ್ಕಳಲ್ಲಿ ಒಂದು ಮಗು ಸಮಾಜದಲ್ಲಿ ಜೊಳ್ಳಾಯಿತೆಂಬ ಸಂಕಟವೇ ಇಷ್ಟಿರುವಾಗ, ತನ್ನೆಲ್ಲ ಮಕ್ಕಳೂ ಜೊಳ್ಳಾದ ಗಾಂಧಾರಿಯ ಸಂಕಟ?.. ನರಕ..ನರಕ...ಸಕಾಲಕ್ಕೆ ಕಣ್ತೆರೆಯದೆ ಈಗ ಅತ್ತರೇನು? ಮುದಿ ತಂದೆತಾಯಿಗಳು ತಮ್ಮ ಮಕ್ಕಳು ಮೊಮ್ಮಕ್ಕಳ ಅಂತ್ಯಕ್ರಿಯೆಯನ್ನು ನೋಡುವ ಅಲ್ಲಲ್ಲ..ಮಾಡುವ ಗುರುತರ ಶಿಕ್ಷೆಯನ್ನು ಪಡೆಯುವ ಮಹಾಪರಾಧವಾದರೂ ಎಂತಹುದಿರಬೇಕು! ನಾನು..ನನ್ನದು..ನನಗಾಗಿ..ನನ್ನವರು.. ನನ್ನಾಸೆಗಳು ಎಂದು 'ನನ್ನ'ಲ್ಲೇ ನಿಂತುಬಿಟ್ಟದ್ದೇ ಧೃತರಾಷ್ಟ್ರನ ಗುರುತರ ಅಪರಾಧವೇ? ಬಂಧುತ್ವ ತಪ್ಪೇ? ಮಮಕಾರ ತಪ್ಪೇ? ಯೋಚಿಸಿದಷ್ಟೂ ಜಟಿಲ.. ನಾವು ನಡೆದ, ನಡೆದಿರುವ ದಿಕ್ಕೇ ತಪ್ಪು ತಪ್ಪಾದಂತೆ.. ವಿದುರ ಎಂದೋ ಹೇಳಿದ್ದ ಮಾತಲ್ಲವೇ?.. ಏನೆಂದಿದ್ದ?...

"ಬಂಧುತ್ವ ಬಂಧನವಾಗಬಾರದು. ನಂಟು ಅಂಟಾಗಬಾರದು." ನೊಣದಂತೆ ಅಂಟಿನಲ್ಲಿ ಸಿಕ್ಕಿಬಿದ್ದು ಒದ್ದಾಡುತ್ತಿರುವ ಜೀವ ಧೃತರಾಷ್ಟ್ರ, ರಣರಂಗದಿಂದ ಬರುತ್ತಿರುವ ಒಂದೊಂದು ಸುದ್ದಿಯೂ ಮಹಾರಾಜನನ್ನು ಜೀವಂತ ಸುಡುವ ಕೊಳ್ಳಿಯಾಗಿದೆ. ವಿದುರನಿದ್ದರೆ ಕೊಂಚ ಸಮಾಧಾನವಾದೀತು. ವಿದುರನ ಸಹವಾಸವೇ ಹಾಗೆ...ಚಂದನಲೇಪದಂತೆ ಒಡಲ ಉರಿಗೆ ಶೀತಲಕಾರಿ.. ನನಗೂ... ಮೊದಲಿನಿಂದಲೂ ಹೀಗೇ.. ತಡೆಯಲಾಗದ ಕಷ್ಟಸಂಕಟ ಬಂದಾಗ ಮಾತ್ರ ವಿದುರನಿಗೆ ಕರೆ ಮಹಾರಾಜನಿಂದ.. ಮಿಕ್ಕಾದಂತೆ ಶಕುನಿಯೇ ಸಲಹೆಗಾರ!

ಆಗೋ! ವಿದುರನ ನಾಯಿಯ ಉತ್ಸಾಹದ ಬೊಗಳಾಟ! ವಿದುರ ಬಂದನಲ್ಲವೇ?... ಒಂದೇ ವಾರದಲ್ಲಿ ವಿದುರ ಎಷ್ಟು ಸೊರಗಿ ಕುಗ್ಗಿ ಹೋಗಿದ್ದಾನೆ!

"ಧರ್ಮರಾಯ ಎಡವಟ್ಟು ಮಾಡಿಕೊಳ್ಳದಿದ್ದರೆ, ಪಾಂಡವರೊಂದಿಗೆ ಕೃಷ್ಣ ಆರಂಭಿಸಿದ 'ಸಮರಯಜ್ಞ' ಫಲಪ್ರದವಾಗಿ ಮುಗಿದಂತೆಯೇ.."

ಮತ್ತೇನಿದು... ವಿದುರನ ತೊಡಕಲು ಮಾತು?... 'ಧರ್ಮರಾಯ ಎಡವಟ್ಟು ಮಾಡಿಕೊಳ್ಳದಿದ್ದರೆ? .. ಇನ್ನೇನು ಎಡವಟ್ಟು ಸಾಧ್ಯ? ಕೃಷ್ಣ ಸಲಹೆಗಾರನಿದ್ದರೂ ಧರ್ಮರಾಯ ಎಡವಟ್ಟು ಮಾಡಿಕೊಳ್ಳಬಹುದೇ?... ನನ್ನಂತೆಯೇ ವಿದುರನಿಗೂ ಸಂದೇಹವೇ?... ಭೀಷ್ಮ...ದ್ರೋಣ...ಕರ್ಣ...ದುಶ್ಶಾಸನ...ನಾಲ್ವರೂ ದುರ್ಯೋಧನ ನಂಬಿದ್ದ, ನೆಚ್ಚಿ ಈ ಸಮರಕ್ಕೆ ಇಳಿದಿದ್ದ ನಾಲ್ವರೂ ಮಡಿದಿರುವಾಗಲೂ ವಿದುರನಿಗೆ ಸಂದೇಹವೇಕೆ? ದುರ್ಯೋಧನನಿನ್ನೂ ಬದುಕಿರುವನೆಂದೇ? ಉರಗಪತಾಕ ದುರ್ಯೋಧನ–ಯಾವ ಹುತ್ತದೊಳಗೆ ಅಡಗಿ ಸಮಯಕ್ಕೆ ಕಾದು ಕಚ್ಚುವನೋ!

ನಾಲ್ಕೂ ಆಧಾರಸ್ತಂಭಗಳು ಉರುಳಿಬಿದ್ದ ಮೇಲೂ ಸಗ್ಗದೆ, ಮುರಿಯದೆ ಸೆಣೆಸಿರುವ

ದುರ್ಯೋಧನನ ಆತ್ಮವಿಶ್ವಾಸ-ಬಲ, ಪರಾಕ್ರಮ ಎಷ್ಟಿರಬೇಕು! ಅವನು ಹೆಣವಾಗಿ ಬೀಳುವವರೆಗೂ ನೆಮ್ಮದಿಯ ಉಸಿರು ತೆಗೆಯಲಾರದು ಪಾಂಡವಪಕ್ಷ. ದುರ್ಯೋಧನ ನತದೃಷ್ಟನೇ ಸರಿ.. ಮಹಾರಾಜನಾಗುವವನಿಗೆ ತಕ್ಕಂತಹ ಅಂಗಸೌಷ್ಠವ, ದೇಹಬಲ, ಬುದ್ಧಿ, ಚಾತುರ್ಯ, ಆತ್ಮಾಭಿಮಾನ, ಶೌರ್ಯ, ...ಏನೆಲ್ಲ ಸುಗುಣಗಳು.. ತಂದೆ ಧೃತರಾಷ್ಟ್ರನ ಮಮಕಾರದ ಅಂಧತ್ವಕ್ಕೆ ಬಲಿಯಾಗಿ, ತಿರುಗು ಮುರುಗಾದ ದುರ್ಗುಣಗಳಾಗಿ ಹೋದವು. ಬಾಲ್ಯದಲ್ಲಿ ಸೂಕ್ತಮಾರ್ಗದರ್ಶನವಿಲ್ಲದೆ ನಷ್ಟವಾಗಿ ಹೋದ ಕುರುವಂಶದ ರತ್ನ ದುರ್ಯೋಧನ. ಐವರು ಪಾಂಡವರಲ್ಲಿ ಹಂಚಿರುವುದು ದುರ್ಯೋಧನನೊಬ್ಬನಲ್ಲೇ ಇದ್ದರೂ ಅವನು ಕೆಲಸಕ್ಕೆ ಬಾರದಂತಾದುದು ಧೃತರಾಷ್ಟ್ರನ 'ಕುರುಡುತನ'ದಿಂದಾಗಿ. ಯಾರೊಬ್ಬರ ಅಂತ್ಯವನ್ನು ಅವರ ಹಿರಿಯರೇ ಬಯಸುವಂತಾಗುವುದು ದುರ್ದೈವ-ದುರ್ದೈವ!



# ಅಧ್ಯಾಯ ೩

"ಕರ್ಣನಿಗೆ ತರ್ಪಣ ಕೊಡಬೇಕು ನೀನು."

"ಕರ್ಣನಿಗೆ? ಸೂತಪುತ್ರ ರಾಧೇಯನಿಗೆ? ದುರ್ಯೋಧನನ ಗೆಳೆಯ ಕರ್ಣನಿಗೂ ನಮಗೂ ಏನು ಸಂಬಂಧ?..."

ಐದೂ ಜನರ ಮುಖದಲ್ಲಿದ್ದ ಕರ್ಣನ ಬಗೆಗಿನ ತಿರಸ್ಕಾರ, ಪ್ರಶ್ನೆಯ ಧ್ವನಿಯಲ್ಲಿದ್ದ ತಾತ್ಸಾರ, ಇದೇನು ಅಸಂಬದ್ಧ ಆಣತಿಯಿತ್ತೆನೆಂಬ ಸಂದೇಹಪೂರ್ಣ ದೃಷ್ಟಿ ನನ್ನ ಮೇಲೆ-ನನ್ನಿಂದ ವಿವರಣೆಗಾಗಿ ಆಗ್ರಹ-ತರ್ಪಣಕ್ಕೆ ಕಾರಣ ಗೊತ್ತಾದರೆ ಏನು ಪ್ರತಿಕ್ರಿಯೆ? ಎದುರಿಸುವ ಶಕ್ತಿ ನನಗಿದೆಯೇ? ಈಗ ಇರುವುದೆಂದು ಕೃಷ್ಣನ ನಂಬಿಕೆ; ನನ್ನಲ್ಲೇ ನನಗಿಲ್ಲದ ನಂಬಿಕೆ. ಅವನ ಸಲಹೆಯ ಮೇರೆಗೆ ಈ ಹೆಜ್ಜೆ ಇಟ್ಟಾಯಿತು. ಇನ್ನೊಂದು ಹೆಜ್ಜೆ ವಿವರಣೆ ನೀಡಿದರೆ-ಆ ದಡಕ್ಕೆ ಬಿದ್ದಂತೆ. ನನ್ನ ಕೆಲಸ ಮುಗಿದಂತೆ. ಮುಂದಾಗುವುದೆಲ್ಲ ನನ್ನ ಕೈ ಮೀರಿದ್ದು ಎಂದು ತಿಳಿದು, ಸ್ವೀಕರಿಸಿ, ಕರ್ಣ ವೃತ್ತಾಂತಕ್ಕೆ ಶುದ್ಧಮನಸ್ಕಳಾಗಿ ನನ್ನ ಕಡೆಯಿಂದ ಜಲಾಂಜಲಿ ಕೊಡುವುದು. ಮನಸ್ಸೇ! ಸಮಾಹಿತವಾಗು. ನಿಜಸಂಗತಿ ಹೇಳುವಾಗ ಅಳುಕದಿರು. ಪೂರ್ಣ ಸತ್ಯ ಹೇಳು. ಹೇಳಿ ಶುದ್ಧಳಾಗಲು ಬಹುಶಃ ಇದೇ ಕಡೆಯ ಅವಕಾಶ. ಕರ್ಣನನ್ನು ಇಹಕ್ಕೆ ತಂದ ತಾಯಿಯಾಗಿ ಅಂತ್ಯಸಂಸ್ಕಾರವನ್ನಾದರೂ ಅವನಿಗೆ ಸಲ್ಲಿಸು. ಪಾಂಡವರಿಂದ, ಇತರರಿಂದ ಬರುವುದೇನಿದ್ದರೂ ಅವೆಲ್ಲವನ್ನೂ ಸಮಚಿತ್ತಳಾಗಿ ಸ್ವೀಕರಿಸುವುದೇ ಪ್ರಾಯಶ್ಚಿತ್ತ. ಹೆಜ್ಜೆಯಿಡು-ಅಳು ನಿಲ್ಲಿಸು.. ಮಾತನಾಡು, ಕತ್ತೆತ್ತು! ಧರ್ಮಜನಲ್ಲಿ ದೃಷ್ಟಿಯಿಟ್ಟು ಹೇಳು. ಅವನೆತ್ತರಕ್ಕೂ ನಿಡಿದಾಗಿ ನಿಲ್ಲು. ಈಗ ಹೇಳು, ಹ್ಞ-ಹೇಳಿಬಿಡು..

"ಕರ್ಣ ನಿಮ್ಮ ಹಿರಿಯಣ್ಣ... ನನ್ನ ಮೊದಲ ಮಗ. ಕಾನೀನ! ಸೂರ್ಯದೇವ ಅವನ ತಂದೆ. ಅವನಿಗೆ ನಿನ್ನಿಂದ ತರ್ಪಣ ಸಲ್ಲಬೇಕು.."

ತಾಯಿ ಗಂಗೇ. ಅಂದು ಜೀವಂತ ಮಗುವನ್ನು ನಿನ್ನ ಮಡಿಲಲ್ಲಿ ತೇಲಿಬಿಟ್ಟೆ. ಇಂದು ಅವನ ಸದ್ಗತಿಗಾಗಿ ನಿನ್ನಲ್ಲಿ ಬಿಡುತ್ತಿರುವೆ. ಸ್ವೀಕರಿಸು..

ಕುಸಿಯುತ್ತಿದ್ದವಳಿಗೆ ಆಸರೆಯಾಗಿ ವಿದುರನ ಕೈಗಳು-ಕಣ್ಣೆದುರು ಕೃಷ್ಣ ವಾಸುದೇವನ

ಮುಖ-ಮುಖದಲ್ಲಿನ ಅದೇ ಅರ್ಥಗರ್ಭಿತ ನಗೆ. ಆ ನಗೆಯೊಂದೇ ಕಷ್ಟಕ್ಷಣದಲ್ಲೆಲ್ಲ ಮುಳುಗುತ್ತಿದ್ದ ನನ್ನನ್ನು ಮತ್ತೆ ಮತ್ತೆ ಮೇಲೆತ್ತುತ್ತಿದ್ದ ಈಸುಬುರುಡೆ. ಇಬ್ಬರದೂ ನನ್ನೊಂದಿಗೆ ಬಂಧುತ್ವವನ್ನೂ ಮೀರಿದ ಮತ್ತೇನೋ ನಂಟು!

* * *

ಯುದ್ಧ ಮುಗಿಯಿತು. ಧರ್ಮಕ್ಕೇ ಜಯ ಎಂದರು! ಆಯಿತೇ? ಹಾಗಾದರೆ ಶಾಂತಿ ನೆಮ್ಮದಿ ಎಲ್ಲಿ? ಧರ್ಮಕ್ಕೆ ಜಯವಾದ ಸಂತೋಷವೆಲ್ಲಿ? ಯುದ್ಧದಲ್ಲಿ ಸತ್ತವರೇ ಗೆದ್ದರು! ವೀರಸ್ವರ್ಗ ಸೇರಿದರು. ಯುದ್ಧದಲ್ಲಿ ಗೆದ್ದು ಮರಳಿದವರಿಗೇಕೆ ಈ ಪರಿ ಅಶಾಂತಿ-ಕಳವಳ? ಸತ್ತವರಿಗೆ ಜಲತರ್ಪಣ ಕೊಟ್ಟು ದಿನಗಳೇ ಕಳೆದರೂ ದುಃಖದ ಶಾಪ-ತಾಪಗಳ ಕಾರ್ಮೋಡ ದಟ್ಟೈಸಿಯೇ ನಿಂತಿದೆ. ಅಶ್ವತ್ಥಾಮನ ಬ್ರಹ್ಮಾಸ್ತ್ರದ ವಿಪತ್ತು ಉತ್ತರೆಯ ಗರ್ಭದ ಮೇಲೇ ಕುಳಿತಿದೆ. ಗಾಂಧಾರಿಯ ಸಂಕಟದ ಕೋಪದ ಪ್ರಹಾರ ಕೃಷ್ಣವಾಸುದೇವನಷ್ಟೇ ಅಲ್ಲ, ಇಡೀ ಯಾದವ ಕುಲದ ಮೇಲೇ ಬಿದ್ದಿದೆ. ಧರ್ಮರಾಯನ ಕೋಪದ ಶಾಪ ಇಡೀ ಸ್ತ್ರೀಕುಲದ ಮೇಲೇ, ಶಾಶ್ವತವಾಗಿ! ಇವೇ ಧರ್ಮಯುದ್ಧದಲ್ಲಿ ಲಭಿಸಿದ ಫಲ! ಶೋಕಾಚರಣೆಗೆಂದು ಗಂಗಾತಟದಲ್ಲೇ ನಿಂತವರಿಗೆ ಸಮಾಧಾನ ಹೇಳಲು ಬಂದವರು ಇಲ್ಲೇ ನಿಂತು ಸಂತೈಸಿದರೂ ಧರ್ಮಜನ ದುಃಖ... ಇಳಿಮುಖವೇ ಇಲ್ಲ. ನಾರದಮುನಿಗಳು, ವ್ಯಾಸರು, ಯಾರ್ಯಾರು ಎಷ್ಟೆಷ್ಟು ಹೇಳಿದರೂ ಅವನದೊಂದೇ ಪಟ್ಟು- ಸಂನ್ಯಾಸ ಹಿಡಿದು ಕಾಡಿಗೆ ಹೋಗಬೇಕೆಂದು, ಅದುವೇ ಧರ್ಮವಂತೆ! ಇಷ್ಟು ವರ್ಷಗಳ ಇಷ್ಟೆಲ್ಲ ಜನರ ದುಡಿಮೆಯ ಫಲವಾಗಿ ಧರ್ಮದ ಜಯವಾಗಿ ಬಂದ ಈ ರಾಜ್ಯಭಾರ ಈಗ ಬೇಡವೇಕೆ? ಧರ್ಮಜನ ಸಂನ್ಯಾಸಕ್ಕೆ ಈಗಿನ ಕಾರಣ ಕರ್ಣನ ಸಾವು. ಅದಕ್ಕೆ ಕಾರಣ? ನಾನು ಬಚ್ಚಿಟ್ಟ ಕರ್ಣನ ಜನನದ ಗುಟ್ಟು! ನನ್ನ ಒಂದು ಸಂಗತಿಯಾಗಿ ಯುದ್ಧದ ಉದ್ದೇಶವೇ ಬೇರೆಯಾಗಿ ಹೋಗಲು ಸಾಧ್ಯವೇ? ಧರ್ಮಕ್ಕೆಂದು ಹೋರಾಡಿ ಮುಗಿದ ಮೇಲೂ ಸ್ಪಷ್ಟತೆಯಿಲ್ಲದ ನಿಶ್ಚಯವಿಲ್ಲದ ಇವನ ಧರ್ಮವಾದರೂ ಏನು? ಈಗೀಗ ಧರ್ಮ ಎನ್ನುವ ಮಾತೇ ತಲೆಶೂಲೆ ತರುವಂತಾಗಿದೆ.

ಧರ್ಮವೆಂದರೆ ನಮಗೆ ಬೇಕಾದ ಕಡೆ ತಿರುಗಿಸಿ ಅದರಡಿ ಮರೆಹೋಗುವ ಛತ್ರಿಯೇ? ಸನ್ನಿವೇಶಕ್ಕೆ ಬೇಕಾದಂತೆ ತಿರುಗಿಸಿ ಬಚ್ಚಿಟ್ಟುಕೊಳ್ಳುವುದಕ್ಕೇನು ಧರ್ಮವಿರುವುದು? ಧರ್ಮಜನ ಬಗೆಯೇ ಅರ್ಥವಾಗಲೊಲ್ಲದು. ಅವನಲ್ಲಿರುವ ತಳಮಳ ಬೇರೆಯವರಿಗೂ ಹಂಚಿಕೆ! ಬಸಿದೆಲ್ಲ ರಕ್ತವನ್ನೂ ಹೀರಿ ತಣ್ಣಗೆ ಮಲಗಿರುವ ಪೃಥಿವಿಯಂತೆ ನೆಮ್ಮದಿ-ಸ್ಮಶಾನ ನೆಮ್ಮದಿ ಬಂದುದು ಪೃಥೆಗೆ ಮಾತ್ರ! ಅದೂ ಹೇಗೆ? ಕರ್ಣನು ನನ್ನ ಮಗನೆಂದು ಒಪ್ಪಿಕೊಂಡು ಕೂಡಲೇ?

ಒಂದು ರೀತಿಯಲ್ಲಿ ಕರ್ಣ ತರ್ಪಣ ಪ್ರಸಂಗ ನನ್ನ ಅಸ್ತಿತ್ವದ ಹೊಸ ಆಯಾಮವನ್ನು ನನಗೇ ತೋರಿಸಿಕೊಟ್ಟಿತು. ನನ್ನಲ್ಲಿದ್ದ ಅದೆಷ್ಟೋ ಭಾವನೆಗಳು ಹೊರಬೇಕಾಗಿಲ್ಲದ ಭಾರ ಎನಿಸಿದೆ. ಸಾವಿರ ಸಾವಿರ ಬೇಕಿಲ್ಲದ ಭಾವನೆಗಳನ್ನು ತೊಳೆದದ್ದರಿಂದ ಬಂದ ನೆಮ್ಮದಿಯ ಕುಂತಿ ನಾನೀಗ. ಚಿಂತನೆ ನಡೆಸಿದಂತೆಲ್ಲ ತಾನೇ ತೆರೆದುಕೊಂಡ ಯಥಾರ್ಥದ ಅರಿವಿನಿಂದಾಗಿ ಸಿಕ್ಕ ನಿಶ್ಚಲತೆಯ ನೆಮ್ಮದಿಯೇ ಇದು?

ನಲವತ್ತು ವರ್ಷಗಳಿಂದ ಶತ್ರುವೆನಿಸಿ ತಮಗೆ ಅನ್ಯಾಯ ಮಾಡಿದವನೆಂದು ಯುದ್ಧದಲ್ಲಿ ಕಾದು ಕೊಂದವನನ್ನು ಈಗ ನಾನು ಹೇಳಿದೆನೆಂದು ಒಂದೇ ಕ್ಷಣದಲ್ಲಿ ಸೋದರನಾಗಿ ಸ್ವೀಕರಿಸುವುದು ಸಾಧ್ಯವೇ? ಅವನ ಕುಕೃತ್ಯಗಳೆಲ್ಲ ಈ ಸಂಬಂಧದಿಂದಾಗಿ ಅಳಿಸಿಹೋದವೇ? ಭ್ರಾತೃಹತ್ಯೆ ಮಾಡಿದೆವೆಂದು ಶೋಕಿಸುವುದಷ್ಟೇ ಅಲ್ಲದೆ ಯುದ್ಧ ಮಾಡಿದುದೇ ತಪ್ಪೆಂದರು. ನೀನು ತಾಯಿಯಾಗಿ ನಮ್ಮನ್ನು ವಂಚಿಸಿದೆಯೇಕೆ ಎಂದು ಪ್ರಶ್ನಿಸಿದರು.

ಹೊತ್ತು ಹೆತ್ತು ಸಾಕಿ ಸಲಹಿದ ತಾಯಿಯ ಸಂಬಂಧ ಇಷ್ಟುವರ್ಷಗಳ ಜೀವನ ನಂತರವೂ ಗಟ್ಟಿ ನಿಲ್ಲದೆ ಹೋಯಿತೇ? ಯಾವ ಕಾರಣಕ್ಕಾಗಿ ಹೀಗೆ ಮಾಡಿದೆ? ನಿನ್ನ ಕಷ್ಟವೇನಿತ್ತು? ಹೆತ್ತಮಗುವನ್ನು ಇಷ್ಟು ವರ್ಷ ದೂರವಿಡುವ ಸಂಕಟ ಏಕೆ ತಂದುಕೊಂಡೆ? ಅನಿವಾರ್ಯ ವಾದರೂ ಏನಿತ್ತು? ಬಿಡಿಸಿ ಹೇಳು.. ಎಂದು ಕೇಳಲಿಲ್ಲವೇ, ಅದು ಹೋಗಲಿ, ಅಷ್ಟಕ್ಕೇ ಸಾವರಿಸಿಕೊಳ್ಳದೆ, ನಿನ್ನ ಈ ಗುಟ್ಟಿನಿಂದಾಗಿ ಇಷ್ಟೆಲ್ಲ ಅನರ್ಥ ಆಗಿಹೋಯಿತು. ಇನ್ನು ಮುಂದೆ ಯಾವ ಸ್ತ್ರೀಯೂ ಗುಟ್ಟನ್ನು ಹಿಡಿದಿಡಲಾರಳು ಎಂದು ಶಪಿಸುವಷ್ಟು ನನ್ನಿಂದ ಸ್ವತಂತ್ರರಾದರು. ಇತ್ತೀಚಿನ ಕರ್ಣನ ಸೋದರತ್ವದ ಮುಂದೆ ಹುಟ್ಟಿದಾಗಿನಿಂದಲೂ ಕಂಡ ತಾಯಿಯ ಬಗೆಗಿನ ಭಾವನೆಗಳೇನಾದವು? ವಾಸುದೇವ ಹೇಳಿದಂತೆ ಸಂಬಂಧವೇನಿದ್ದರೂ ಕೊಡುವುದಕ್ಕಷ್ಟೇ ಹೊರತು ಏನನ್ನೂ ನಿರೀಕ್ಷಿಸುವುದಕ್ಕಲ್ಲ. ಸಾಂತ್ವನವೂ ಇಲ್ಲದಂತಾದ ನಮ್ಮ ಸಂಬಂಧ. ಆತ್ಮಾವಲಂಬನೆ ಬೇಕು. ಭಾವನಾತ್ಮಕವಾಗಿಯೂ ಆತ್ಮನಿರ್ಭರತೆ ಬೇಕು. ಎಲ್ಲ ಕಾಲದಲ್ಲೂ. ಚಿಕ್ಕಂದಿನಿಂದಲೇ ಅನುದ್ವಿಗ್ನತೆ ಬೆಳೆಸಿಕೊಳ್ಳಬೇಕು. ನನ್ನ ಗುಟ್ಟಿನಿಂದಾಗಿ ಪಾಂಡವರು ಅಸ್ತಿತ್ವಕ್ಕೆ ಬಂದದ್ದು ಯಾರಿಗೆ ಉಪಯೋಗವಾಯಿತೋ ಅವರು ನನ್ನ ಬೆನ್ನು ತಟ್ಟಿಯಾಯಿತು. ನನ್ನೆಲ್ಲ ಕಷ್ಟಕೋಟಲೆಗಳು ಅರ್ಥಪೂರ್ಣವಾದವು. ಅಷ್ಟು ಸಾಕು. ನನ್ನ ಮಕ್ಕಳೇ ಹೇಳಿದರೂ ನನ್ನಲ್ಲಿ ತಪ್ಪಿತಸ್ಥ ಭಾವನೆಗೆ ಎಡೆಯಿಲ್ಲ. ಕೊಡಲಾರೆ. ಈಗ ನಾನೂ ಅವರಿಂದ ಸ್ವತಂತ್ರಳು. ಕರ್ಣ, ತಾನು ಅರ್ಜುನನನ್ನು ಬಿಟ್ಟು ಬೇರಾವ ಪಾಂಡವನನ್ನೂ ಕೊಲ್ಲುವುದಿಲ್ಲವೆಂದು ಮಾತುಕೊಟ್ಟು, ಅಂತೆ ಉಳಿಸಿಕೊಂಡು ಮುಕ್ತನಾದ. ಕರ್ಣ ನಿಮ್ಮ ಅಣ್ಣನೆಂದು ಹೇಳಿ ನಾನು ಕರ್ಣನಿಂದ ಮುಕ್ತಳಾದೆ. ಕರ್ಣನ ತಮ್ಮಂದಿರು ಅವನ ತಾಯಿಗೆ ಶಾಪವಿತ್ತು ಅವನನ್ನು ಕೊಂದ ಪಾಪಪ್ರಜ್ಞೆಯಿಂದ ಮುಕ್ತರಾದರು. ಇಲ್ಲಿಗೆ ಕರ್ಣನ ಸಂಬಂಧ ಏಕೆ ಎಲ್ಲ ಸಂಬಂಧಗಳ ಮುಕ್ತಾಯ. ತಾಯ ನಿರ್ಣಯದಲ್ಲಿ ಎಳ್ಳಷ್ಟೂ ಅಪನಂಬಿಕೆಯಿರದಿದ್ದವರು ಮಾತೃವಾಕ್ಯವನ್ನು ಪರಿಪಾಲಿಸಲು ಐವರೂ ಒಬ್ಬಳೇ ವಧುವನ್ನು ಮದುವೆಯಾದವರು ಇಂದು ಅವಳ ನಿರ್ಣಯವನ್ನು ಪ್ರಶ್ನಿಸುವುದಿರಲಿ, ಅವಳ ವಿವರಣೆಗೂ ಕಾಯದೆ ತಪ್ಪೆಂದು ನಿರ್ಧರಿಸುವಷ್ಟು, ಅದರಂತೆ ದಂಡಿಸುವಷ್ಟು ಹಿರಿಯರಾದರು. ಬಂಧುತ್ವ ಯಾವುದರಿಂದ? ಒಡನಾಟದಿಂದಲೋ ರಕ್ತಸಂಬಂಧದಿಂದಲೋ? ನನ್ನ ಜೀವಮಾನದುದ್ದಕ್ಕೂ ಅಣಗಿಸುತ್ತ ಹುಚ್ಚೆಬ್ಬಿಸಿದ ಸಂಬಂಧಗಳ ಪ್ರಶ್ನೆಗಳು ಮುಖವಾಡಗಳಷ್ಟೆ! ಹುರುಳಿಲ್ಲದ ಬುರುಡೆಗೆ ಬೆಲೆಕೊಟ್ಟು ನಾನೇ ಮೂಢಳಾದೆನಲ್ಲವೇ. ಆದುದಕ್ಕೆ ಚಿಂತೆ ಬಿಡು. ಮುಂದಿನದಕ್ಕೆ ಗಮನಕೊಡು... ಎಂದು ವಿದುರ ಹೇಳುತ್ತಿದ್ದುದು ಈಗ ಅರ್ಥವಾಗಿದೆ. ಕರ್ಣನನ್ನು ಮಗನೆಂದು ಧರ್ಮಾದಿಗಳಲ್ಲಿ ಒಪ್ಪಿಕೊಂಡುದರ ಫಲವೇನು? ಈ ಮೂಲಕ ನನ್ನನ್ನು ನಾನೇ ಒಪ್ಪಿಕೊಂಡುದು. ಮನಸ್ಸು ಹಗುರಾದುದು. ಬೇರೆಯವರ

ದೃಷ್ಟಿಯಲ್ಲಿ ಹೀನಾಯವಾಗುತ್ತೇನೆಂಬ ಭಾವದಿಂದ ಮೇಲೆ ಬಂದು ಆತ್ಮಸಾಕ್ಷಿಗೆ ಬೆಲೆ ಕೊಟ್ಟು ಅದರಂತೆ ನಡೆಯುವ ಧೈರ್ಯ ಬಂದುದು. ವ್ಯಕ್ತಿಗಳ, ಸನ್ನಿವೇಶಗಳ ಅಂಗೀಕಾರದಿಂದಾಗಿ ವಂಚಿತ ಭಾವ, ಕೋಪ, ಅಸಹಾಯಕತೆ; ದ್ವೇಷ, ಸಂಶಯ–ನಿರ್ಬಲತೆ–ಎಲ್ಲವೂ ಇಲ್ಲವೆನ್ನುವಂತಾಗಿಯಿದೆಯಲ್ಲವೇ? ಮನಸ್ಸು ಹೆಚ್ಚು ಹೆಚ್ಚು ಕಾಲ ಸಮಸ್ಥಿತಿಯಲ್ಲಿರುವುದು ನನಗೇ ತಿಳಿಯುತ್ತಿದೆ. ಮಕ್ಕಳ ಮೇಲೆ ಈಗ ಪ್ರೀತಿಯಿಲ್ಲವೆಂದಲ್ಲ. ಅದರಲ್ಲಿನ ಕಕ್ಕುಲತೆ ಇಲ್ಲವಾಗಿದೆ. ಇಷ್ಟೇನೇ! ಎಲ್ಲೆಲ್ಲಿ ಸಾಧ್ಯವೋ, ಎಲ್ಲೆಲ್ಲಿ ಅಗತ್ಯವೋ ಅಲ್ಲಲ್ಲಿ ಕೈಲಾದುದನ್ನು ಎಲ್ಲರಿಗೂ ಮಾಡುವುದು. ಮಿಕ್ಕಾದಂತೆ ಪ್ರೇಕ್ಷಕಭಾವದಿಂದ ಅನುಭವಿಸುವುದು. ಕಷ್ಟದಲ್ಲಾದವರು ಬಂಧುಗಳು. ಕಷ್ಟದಲ್ಲಿ ನಮ್ಮನ್ನಾಶ್ರಯಿಸಿದವರೂ ಬಂಧುಗಳೇ! ಸಹಾಯ ಮಾಡಲು ನಮಗೆ ಅವಕಾಶವಿತ್ತವರು.

ಯಾವುದೇ ವ್ಯಕ್ತಿಯ ಬಗ್ಗೆ ನಮ್ಮ ಅನಿಸಿಕೆ–ಭಾವನೆಗಳು ಬದಲಾಗುವುದು ಎಂದ ಮೇಲೆ ಅವು ಎಷ್ಟರಮಟ್ಟಿಗೆ ನಂಬಲರ್ಹವಾದವು? ಕರ್ಣ ದುಷ್ಕರ್ಮಿ–ವಧಾರ್ಹ ಎಂಬುದು ಸತ್ಯವೋ ಅಥವಾ ಅವನು ಅಗ್ರಜ ಅಂತೆ ಮಹಾರಾಜನಾಗಬೇಕಾದವನು ಎಂಬ ಭಾವನೆಯೋ? ಕರ್ಣ ಕಾನೀನನೆಂಬ ಸಂಗತಿ ಲೆಕ್ಕಕ್ಕೆ ಬರಲಿಲ್ಲವೇ? ಎರಡೂ ಆಯಾ ಕಾಲದಲ್ಲಿ ಆಯಾ ಪರಿಸ್ಥಿತಿಯಲ್ಲಿ ಸರಿ ಎಂದಾಯಿತು. ಅಂದರೆ ಇನ್ನೊಬ್ಬರನ್ನು ಸರಿ–ತಪ್ಪು ತಕ್ಕಡಿಯಲ್ಲಿ ತೂಗಿ ನಿರ್ಧಾರಕ್ಕೆ ಬರುವುದೇ ವ್ಯರ್ಥ. ಧರ್ಮಜ ಶಾಪವಿಟ್ಟುದೂ ಅವನ ಮಟ್ಟಿಗೆ ಸರಿಯೇ! ಈಗ ಈಗ ಅರ್ಥವಾಗುತ್ತದೆ–ಎಂತಹ ಕಷ್ಟದ ಸನ್ನಿವೇಶದಲ್ಲೂ ವಾಸುದೇವ ಯಾರನ್ನೂ ದೂರಿದ್ದಿಲ್ಲ–ಯಾರನ್ನೂ ಶಪಿಸಿದ್ದಿಲ್ಲ. ತಪ್ಪು ಮರಣದಂಡನೆಗೆ ಪಾತ್ರವಾಗಿದ್ದರೆ ಆ ಕ್ಷಣದಲ್ಲೇ, ಅಥವಾ ನಿಯೋಜಿತ ಕಾರ್ಯದಂತೆ ಮರಣದಂಡನೆ. ಬಾಂಧವರೆಂದೂ ನೋಡದೆ–ಕೋಪ ತಾಪಕ್ಕೆ ಎಡೆಯೇ ಇಲ್ಲದಂತೆ. ಹಾಗೆಂದು ವಾಸುದೇವನೆಂದೂ ಕಠಿಣಹೃದಯಿ ಎನಿಸಿದ್ದಿಲ್ಲ. ಪ್ರೀತಿ ವಾತ್ಸಲ್ಯ ಕನಿಕರ, ಸಹಾನುಭೂತಿ, ಸ್ನೇಹ ಎಲ್ಲ ಭರಪೂರ ಇದೆ. ಕೋಪ ದುಃಖವೂ ಉಂಟು. ಇವೆಲ್ಲ ಭಾವನೆಗಳನ್ನೂ ಅನಿಸಿದ ಕ್ಷಣದಲ್ಲಿಯೇ ತೋರಿಸಿಯೂಬಿಡುತ್ತಾನೆ. ಸಹಾಯ ಹಸ್ತವೂ ತಕ್ಷಣವೇ! ಅದೇ! ಅದೇ! ಅವನ ಗುಟ್ಟು, ಅವನೆಲ್ಲ ಭಾವನೆಗಳೂ ಸಹಜ–ಸನ್ನಿವೇಶಕ್ಕೆ ಪ್ರತಿಸ್ಪಂದನೆಯಾಗಿ. ಮರುಕ್ಷಣವೆ ಮನಸ್ಸು ಭಾವರಹಿತ. ನಮ್ಮ ಹಾಗೆ ಮರುಕ್ಷಣ ಮರುದಿನ ಮರುವರ್ಷ ಎಂದು ಕೊಸರು ಉಳಿಸಿಕೊಂಡು, ಅದು ಹಳಸಿ, ನಾರುತ್ತ ವ್ಯಕ್ತಿತ್ವವನ್ನೇ ಹಳಸಲು ಮಾಡಿಕೊಳ್ಳುವುದಿಲ್ಲ.

ಇದುವೇ ವಿದುರ ಹೇಳಿದ ನಿರ್ಮಮತ್ವ ಅಥವಾ ಭಾವಶುದ್ಧಿಯೇ? ನಮ್ಮ ಬಂಧುಗಳಲ್ಲಿನ ಮಮತೆಯಲ್ಲೂ 'ಮಮ'ಕಾರದ ಕೊಳೆಯಿದೆಯೇ? ಆ ಕೊಳೆ ತೆಗೆದರೆ ನಿರ್ಮಮತ್ವ ಇದೇನೇ ವಾಸುದೇವ ಹೇಳಿದ 'ಎಲ್ಲರೊಳಗೊಂದಾಗು. ಆ ಒಂದನ್ನು ಕಂಡು ಆನಂದಿಸು!' ತಥ್ಯ? ಒಳಹೊಕ್ಕು ನೋಡಿ ಅನುಭವಿಸುವ ವ್ಯಾಸರ ವಿಶ್ವಮೈತ್ರಿ !

ನಾ ಕಂಡ, ಅನುಭವಿಸಿದ ಸಂಬಂಧಗಳು ಕಾಡುಬಳ್ಳಿಯಂತೆ ಎಲ್ಲರನ್ನೂ ಹಬ್ಬಿಕೊಂಡು ಬಿಗಿಬಿಗಿದು ಉಸಿರುಗಟ್ಟಿಸಿ ಕಡೆಗೆ ಎಲ್ಲರನ್ನೂ ಸಾಯಿಸಿ ತಾನೂ ಸಾಯುತ್ತ..... ತಂದೆ–

ಮಗ; ತಾಯಿ–ಮಕ್ಕಳು; ಅಣ್ಣ–ತಮ್ಮ; ಪತಿ–ಪತ್ನಿ; ಅಣ್ಣ–ತಂಗಿ; ಮಾವ–ಅಳಿಯ; ದಾಯಾದಿ–ದಾಯಾದಿ; ಗುರು–ಶಿಷ್ಯ; ಗೆಳೆಯ–ಗೆಳೆಯ;... ಶಂತನು ಮಹಾರಾಜನಿಂದ ಆರಂಭವಾದ–ಭೀಷ್ಮ ಸತ್ಯವತಿಯರ ನಡುವಿನ ತಾಯಮಗನ ಸಂಬಂಧದಿಂದ ಹಿಡಿದು ಉತ್ತರೆಯ ಗರ್ಭದಲ್ಲಿರುವ ಶಿಶುವಿನವರೆಗೆ–ಆರು ತಲೆಮಾರುಗಳವರೆಗೆ ಹಬ್ಬಿ ತನ್ನ ಸ್ಪರ್ಶಕ್ಕೆ ಬಂದವರನ್ನೆಲ್ಲ ಜಿಗಿಯುತ್ತ ಉಸಿರುಗಟ್ಟಿಸುವ ಸಂಬಂಧದ ಅನೇಕ ಹಂಬುಗಳು.

ಪರೋಪಜೀವಿ ಬಂದಳಿಕೆ ತಾನು ಹಬ್ಬಿದ ಮರದ ಜೀವರಸ ಹೀರುತ್ತ ಮರವನ್ನೇ ಸೊರಗಿಸಿ ಸಾಯಿಸುವಂತೆ ನಮ್ಮ ಸಂಬಂಧಗಳೇ ಅಹಿತಕರ. ಬದಲಿಗೆ, ಸೋಮಲತೆಯಂತಾದರೆ ತನ್ನ ಜೀವರಸ ಸೋಮವನ್ನೇ ಆಹುತಿಕೊಟ್ಟು ಆನಂದದಾಯಿ ಅಮೃತ ಉಣಿಸುವ ಸಂಬಂಧಗಳಾದರೆ ಕೊಟ್ಟವರಿಗೂ ಆನಂದ ಕುಡಿದವರಿಗೂ ಆನಂದ. ಇದುವೇ ಮಧುರ ಸಂಬಂಧ. ಇಲ್ಲವಾದರೆ ಮದಿರೆ ಸಂಬಂಧ! ನಿಜ. ಕೊಡಬೇಕು. ಕೊಟ್ಟು ಬದುಕಬೇಕು. ಪಡೆದರೂ ಹೀನಾಯ ಮಾಡಿಕೊಳ್ಳದೆ ಕೊಟ್ಟ–ಪಡೆದ ಸಂಬಂಧಕ್ಕೆ ಘನತೆ ತರಬೇಕು. ಇದನ್ನು ಚಿಕ್ಕಂದಿನಿಂದಲೇ ಅರಿತು ಆನಂದದ ಜೀವನ ಸಾಗಿಸಿದವರಾರು? ವಾಸುದೇವ? ವ್ಯಾಸರು? ವಿದುರ? ಬಹುಶಃ. ವಾಸುದೇವ ವ್ಯಾಸರು ಸಾಧಿಸಿರುವ ಭಾವಶುದ್ಧಿ ನಮ್ಮಂಥರಿಗೆ ಸಾಧ್ಯವೇ? ವೈಯಕ್ತಿಕ ಸಂಬಂಧಗಳ ಸಂಕೋಲೆಗಳು ಸಾಲದೆಂದು ಕುಲಗೌರವ ವಂಶಖ್ಯಾತಿ–ಆತ್ಮಗೌರವ–ತೊಟ್ಟ ಶಪಥಗಳು ಕೊಟ್ಟ ವಚನಗಳು ನ್ಯಾಯ–ನೀತಿ ಕ್ಷತ್ರಿಯ ಧರ್ಮ ಎಂದೆಲ್ಲ ಹತ್ತು ಹಲವು ಕಟ್ಟುಗಳನ್ನು ತಾವೇ ಬಿಗಿದುಕೊಂಡವರು ಸಾಧಿಸಿರುವ ಭಾವಶುದ್ಧಿ ನಿರ್ಮಮತ್ವ ಯಾವ ಮಟ್ಟದ್ದು? ಕುರುವಂಶಸ್ಥರು, ಅವರ ಸಂಪರ್ಕಕ್ಕೆ ಬಂದವರು ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ತಾವೇ ಬಿಗಿದುಕೊಂಡ ಕಟ್ಟುಗಳ ಬಲೆಯಲ್ಲಿ ಸಿಲುಕಿಕೊಂಡವರು–ಕಡೆಗೆ ಈ ಮಹಾಯುದ್ಧ ಆಗಗೊಟ್ಟವರು–ನಾನೂ ಸೇರಿದಂತೆ! ಗಂಗಾತನಯ ಭೀಷ್ಮರೇ ಈ ಕಟ್ಟುಗಳನ್ನು ಬಿಡಿಸಿಕೊಳ್ಳಲಾರದೆ ಹೋದರೆಂದರೆ! ಅವರಿಗೆ ವೇದ ವೇದಾಂಗ ವಿಜ್ಞಾನ ಹೇಳಿಕೊಟ್ಟಿದ್ದು ಬ್ರಹ್ಮರ್ಷಿ–ವಸಿಷ್ಠದೇವ; ರಾಜನೀತಿ ಕಲಿಸಿದ್ದು ದೇವಗುರು ಬೃಹಸ್ಪತಿ; ಶಸ್ತ್ರಾಸ್ತ್ರ ವಿದ್ಯೆ ತೋರಿಸಿಕೊಟ್ಟದ್ದು ಭಾರ್ಗವ ಪರಶುರಾಮ. ಆದದ್ದು ಕುರುರಾಜ್ಯದ ಯುವರಾಜ–ಭಾವೀ ಮಹಾರಾಜ! ಯುವರಾಜ ಪಟ್ಟವು ಗಂಗಾತನಯ ದೇವವ್ರತನಿಗೆ ಕುರುರಾಜ್ಯದ ಪ್ರಜೆಗಳು ವಹಿಸಿದ ರಾಜ್ಯಾಡಳಿತದ ಕರ್ತವ್ಯ. ಅದನ್ನು ಬಿಟ್ಟುಕೊಡುವೆನೆನ್ನುವುದು ಕರ್ತವ್ಯ ಚ್ಯುತಿಯಲ್ಲವೇ? ತಂದೆಯ ವಿವಾಹಕ್ಕೆ ಮುನ್ನವೇ ಮುಂದೆ ಹುಟ್ಟಬಹುದಾದ ಮಗುವಿಗೆ ಮಾತ್ರ ಕುರುರಾಜ್ಯ ಪಟ್ಟಾಭಿಷೇಕ ಮಾಡುವೆ ಎಂದು ವಚನ ಕೊಡುವುದು, ಅದಕ್ಕಾಗಿ ಆಜನ್ಮ ಬ್ರಹ್ಮಚರ್ಯ ವ್ರತದ ಶಪಥ ಮಾಡುವುದು ಕರ್ತವ್ಯಭ್ರಷ್ಟತೆಯಲ್ಲವೇ? ಮಾತೆಗಂಗೆ, ದೇವಗುರುಗಳು, ಪ್ರಜೆಗಳ ನಿರೀಕ್ಷೆಯನ್ನು ಹುಸಿ ಮಾಡಿದುದರ ಕಾರಣ? ತಂದೆಯ ಇಂದ್ರಿಯ ಚಾಪಲ್ಯದ ಪೂರ್ತಿಗಾಗಿ. ಪರಿಣಾಮ ಮಾತ್ರ ವಿಪರೀತವಾಯಿತು. ಇನ್ನೂ ಹುಟ್ಟಿಲ್ಲದ ಭವಿಷ್ಯಕ್ಕೆ ಇರುವ ವರ್ತಮಾನವನ್ನು ತೊಡೆದುಹಾಕಿದ ಪರಿಣಾಮ ವಿಪರೀತವೇ. ಪಟ್ಟಕ್ಕೆ ಬಂದರೂ ಯಾವ ವಧುವನ್ನೂ ಸ್ವಯಂವರದಲ್ಲಿ ಗೆಲ್ಲಲಾರದವನಿಗೆ ಬ್ರಹ್ಮಚಾರಿ ಯುದ್ಧಮಾಡಿ ತಂದ ವಧುಗಳು. ಇವರಿಂದಾಗಿ ಕಾಶೀರಾಜ ಕುವರಿ ಅಂಬೆಯು ಪರಿತ್ಯಕ್ತೆ ಬಾಳು. ಅವಳ ಶಪಥ–ಇಷ್ಟಕ್ಕೆ

ನಿಲ್ಲದೆ ಮಗನ ಸಾವಿನಿಂದಾಗಿ ಮಾತೆ ಸತ್ಯವತಿಯೇ ಕೇಳಿಕೊಂಡರೂ ಅಂಬಿಕೆ ಅಂಬಾಲಿಕೆಯರಿಗೆ ನಿಯೋಗಕ್ಕೂ ಒಪ್ಪಿಕೊಳ್ಳದ ಬ್ರಹ್ಮಚರ್ಯದಿಂದಾಗಿ ಭರತವಂಶದ ನಿಜ ಸಂತಾನಕ್ಕೆ ಅಂತ್ಯ? ಮುಂದೆ ಬಂದುದು ನಿಯೋಗ ಸಂತಾನ ಮಾತ್ರ.

ಎರಡು ದಶಕಗಳ ನಂತರವೂ ಹರೆಯದ ಹುಮ್ಮಸ್ಸಿನಲ್ಲಿ ಪ್ರೀತಿಯ ತಂದೆಗಾಗಿ ಮಾಡಿದ್ದ ಶಪಥಕ್ಕೆ ಬೆಲೆಕೊಟ್ಟು ಜನಹಿತವನ್ನು ಕಡೆಗಣಿಸಿ, ಪರಿಸ್ಥಿತಿಯ ಗಂಭೀರತೆಯನ್ನೂ ಲೆಕ್ಕಿಸದೆ, ಶಪಥ ಮುರಿದರೆ ಧರ್ಮಭ್ರಷ್ಟನಾಗುವೆನೆಂದು ಹಿಂಜರಿದ ಭೀಷ್ಮರು ಬ್ರಹ್ಮಚರ್ಯಕ್ಕೆ ಕಟ್ಟುಬಿದ್ದರು. ಆನಂತರವೂ ಅವರ ನಿಷ್ಠೆ ಕುರುಸಿಂಹಾಸನಕ್ಕೆ, ಅದನ್ನೇರಿದ-ರಾಜನಿಗೆ. ಆ ರಾಜನ ನಿರ್ಧಾರಗಳು ಕೆಲಸಗಳು ಅದೆಷ್ಟೇ ಅಧರ್ಮದ್ದಾಗಿದ್ದರೂ ಸಹಿಸಿಕೊಳ್ಳುವ ನಿಷ್ಠೆ. ಮಾತೆ ಸತ್ಯವತಿಯ ಸಂತಾನಗಳೆಲ್ಲಕ್ಕೂ ಆ ನಿಷ್ಠೆ ಅನ್ವಯಿಸಲಿಲ್ಲ. ಕೇವಲ ಸಿಂಹಾಸನಾರೂಢನಿಗೆ ಮಾತ್ರ, ಅವರೇ ಹೇಳಿದರಲ್ಲ 'ಅನ್ನದ ಹಂಗು ನನ್ನ ಬಾಯಿ ಕಟ್ಟಿಸಿತು' ಎಂದು! ಸ್ವಾಮಿ-ಸೇವಕ ನೀತಿ ಅನುಸರಿಸಿದರು.

ಪಿತಾಮಹ ಭೀಷ್ಮ, ಆಚಾರ್ಯ ದ್ರೋಣ, ಗೆಳೆಯ ಕರ್ಣನ ಸಹಕಾರದ ಆಶ್ವಾಸನೆಯಿಂದಲ್ಲವೇ ದುರ್ಯೋಧನ ಯುದ್ಧಮಾಡಲು ನಿರ್ಧರಿಸಿದ್ದು. ವಿದುರನ ಹಾಗೆ ನೀನು ಮಾಡುತ್ತಿರುವುದು ಧರ್ಮಸಮ್ಮತವಲ್ಲ. ನಿನ್ನ ಅಧರ್ಮದ ರೀತಿಗೆ ನನ್ನ ಸಹಕಾರವಿಲ್ಲ ಎಂದು ಭೀಷ್ಮರು ತಟಸ್ಥರಾಗಿದ್ದರೆ ಬಹುಶಃ..... ಯುದ್ಧ ನಿಲ್ಲಿಸಬಹುದಾಗಿತ್ತೇ? ದ್ಯೂತ ಸಭೆಯಲ್ಲಾಗಲೀ ಕೃಷ್ಣಸಂಧಾನದ ಕಾಲದಲ್ಲಾಗಲೀ ದುರ್ಯೋಧನನ ವರ್ತನೆಗೆ ಹಿರಿಯರೆನಿಸಿ ದಂಡಿಸುವುದಿರಲೀ ಪೂರ್ಣರೂಪದ ಪ್ರತಿಭಟನೆಯನ್ನು ತೋರಿಸದ ರಾಜನಿಷ್ಠೆ ಈ ಯುದ್ಧಕ್ಕೆ ಸಿಕ್ಕ ಮುಖ್ಯ ಅಡಿಗಲ್ಲಾಯಿತಲ್ಲವೇ? ಪರಿಣಾಮದ ಬಗ್ಗೆ ಯೋಚಿಸದೆ ಕೈಗೊಂಡ ನಿರ್ಧಾರದಿಂದ ಸಮಾಜಕ್ಕೆ ಆಪತ್ತು ಬಂದರೆ ಆ ನಿರ್ಧಾರವನ್ನು ಬದಲಾಯಿಸುವ ಧೈರ್ಯ ಮತ್ತು ಸ್ವಪ್ರತಿಷ್ಠೆ ಬಿಟ್ಟುಕೊಡುವ, ವಿನಮ್ರತೆಗೆ ಭಾವಶುದ್ಧಿ ಬೇಕೇನೋ.

ಕ್ಷಾತ್ರಧರ್ಮ ರಾಜನೀತಿ ತಿಳಿದವರಿಗೇ ಶಪಥ ಮುರಿಯಲಾಗದ 'ನನ್ನ ಧರ್ಮ' ಸೇನಾನಾಯಕನಾಗಿ ಮಹಾಯುದ್ಧಕ್ಕೆ ಇಳಿಸಿತೆಂದಮೇಲೆ ಮಮತ್ವದ ಬಿಗಿತ ಎಷ್ಟರ ಮಟ್ಟಿನದು! ಭೀಷ್ಮರ ಅನಿವಾರ್ಯತೆ ಏನಿತ್ತೋ ಯಾರಿಗೆ ಗೊತ್ತು?

ಸತ್ಯಪ್ರತಿಜ್ಞ ಭೀಷ್ಮರ ಮಾರ್ಗದರ್ಶನದಲ್ಲಿ ರಾಜಮಾತೆ ಸತ್ಯವತಿಯ ಅಂಕೆಯಲ್ಲಿ ಬೆಳೆದ ಧೃತರಾಷ್ಟ್ರನ ರಾಜಧರ್ಮವು ದುರ್ಯೋಧನನ ವರ್ತನೆಯ ಬಗೆಗೆ ಮಾತ್ರ ಕುರುಡಾದುದೇಕೆ? ಚಿಕ್ಕಂದಿನಿಂದಲೂ ದುರ್ಯೋಧನನ ಮಾತ್ಸರ್ಯ ಭಾವನೆಯನ್ನು ಬೆಳೆಯಗೊಟ್ಟು ಪರೋಕ್ಷವಾಗಿ ಅವನ ಅನಾಚಾರಗಳಲ್ಲಿ ಭಾಗಿಯಾದುದೇಕೆ? ನ್ಯಾಯಾನ್ಯಾಯದ ವಿವೇಚನೆಯಿದ್ದೂ ಮಗನ ಮೇಲಿನ ವ್ಯಾಮೋಹದಿಂದ ಮನಸ್ಸು ಜೋಲುಬಿತ್ತೇ? ತಂದೆಯಾಗಿ, 'ನನ್ನ ಮಗನ ದುಃಖವನ್ನು ನೋಡುವುದು ನನ್ನಿಂದ ಸಾಧ್ಯವಿಲ್ಲ' – ಈ ಮಮತ್ವ ಪಾಂಡವರನ್ನು ಅರಗಿನರಮನೆಯಲ್ಲಿ ಸುಡುವಷ್ಟರ ಮಟ್ಟಿಗೆ? ಯುದ್ಧದಲ್ಲಿ ನಿಶ್ಶೇಷ ಮಾಡುವಷ್ಟು? ದುರ್ಯೋಧನನಂತೂ ಒಂದೇ ಮಾತಿನಲ್ಲಿ ತನ್ನ ನಿಲುವನ್ನು ದೃಢವಾಗಿ ಹೇಳಿಬಿಟ್ಟ-ಧರ್ಮವೆಂದರೇನು ತಿಳಿದಿದೆ. ಆದರೆ

ಅದರಂತೆ ನಡೆವ ಪ್ರವೃತ್ತಿಯಿಲ್ಲ. ಹಿರಿಯಣ್ಣನ ಚಾಳಿ ತಮ್ಮಂದಿರಿಗೆಲ್ಲ. ದುರ್ಯೋಧನಾದಿಗಳನ್ನು ತಿದ್ದಲು ಭೀಷ್ಮರಿಂದ, ತಂದೆಯಿಂದ ಆಗಲಿಲ್ಲ. ತಾಯಿ ಗಾಂಧಾರಿಯ ಬುದ್ಧಿವಾದದ ಪರಿಣಾಮ ಎಳ್ಳಿನ ಮೊನೆಯಷ್ಟೂ ಇಲ್ಲ. ಚಿಕ್ಕಪ್ಪ ವಿದುರ? ದಾಸೀಪುತ್ರನಾಗಿ ಕಿಂಚಿತ್ತೂ ಪ್ರಭಾವ ಮಾಡಲಾಗದವ. ಉಳಿದವರು ರಾಜಗುರು ವಿಭೂತಿ, ಗುರು ದ್ರೋಣಾಚಾರ್ಯ ಇಬ್ಬರೂ ರಾಜಾಶ್ರಿತರು. ದ್ರೋಣಾಚಾರ್ಯರು ಹಸ್ತಿನಾವತಿಗೆ ಬಂದುದೇ ಎರಡು ಕಾರಣಕ್ಕಾಗಿ. ಒಂದು, ಹೊಟ್ಟೆಪಾಡಿಗಾಗಿ. ಎರಡು, ದ್ರುಪದರಾಜನ ಮೇಲಿದ್ದ ತಮ್ಮ ಸೇಡನ್ನು ತೀರಿಸಿಕೊಳ್ಳಲು ಸಮರ್ಥ ಶಿಷ್ಯರನ್ನು ಹುಡುಕಿಕೊಂಡು ಬಂದರು. ನಿಂತರು. ಶಸ್ತ್ರಾಸ್ತ್ರ ವಿದ್ಯೆ ಬಿಟ್ಟರೆ ಅವರ ಮೇಲ್ಪಂಕ್ತಿ? ಅವರೇ ಕೇಳಿ ಪಡೆದ ಎರಡೂ ಗುರುದಕ್ಷಿಣೆಗಳು ಹರೆಯದ ಮನದಲ್ಲಿ ಮೂಡಿಸಬಹುದಾಗಿದ್ದ ಭಾವನೆಗಳು? ತಾವು ವಿದ್ಯಾದಾನ ಮಾಡದೆಯೇ ನಿಷಾದ ಯುವಕ ನಿಷ್ಣಾತ ಬಿಲ್ಗಾರ ಏಕಲವ್ಯನಿಂದ ಗುರುದಕ್ಷಿಣೆಯಾಗಿ ಅವನ ಹೆಬ್ಬೆರಳನ್ನು ಪಡೆದುದು. ತಮ್ಮ ಸ್ವಂತದ ಸೇಡು ತೀರಿಸಿಕೊಳ್ಳಲು ಮಕ್ಕಳನ್ನು ಹಗೆಯಲ್ಲದ ದ್ರುಪರಾಜನ ಮೇಲೆ ಯುದ್ಧಕ್ಕೆ ಹಚ್ಚಿ ಗೆದ್ದ ಪಾಂಚಾಲ ರಾಜ್ಯವನ್ನು ಗುರುದಕ್ಷಿಣೆಯಾಗಿ ಪಡೆದುದು. ಇವರು ಬುದ್ಧಿವಾದ ಹೇಳಿದರೂ ಅದು ಎಷ್ಟರಮಟ್ಟಿನ ಪ್ರಭಾವ ಬೀರಬಲ್ಲುದಾಗಿತ್ತು?

ಮಾವ ಶಕುನಿ? ಗೆಳೆಯ ಕರ್ಣ–ಅಶ್ವತ್ಥಾಮ? ಎಲ್ಲರೂ ಯುದ್ಧಕ್ಕಾಗಿ ಹಾತೊರೆದವರೇ! ಅಶ್ವತ್ಥಾಮ ಬ್ರಾಹ್ಮಣನಾದರೂ ಕ್ಷಾತ್ರತ್ವವನ್ನೇ ಪೂರ್ಣವಾಗಿ ಮೈಗೂಡಿಸಿಕೊಂಡವ. ಬ್ರಾಹ್ಮಣ್ಯದ ತಾಳ್ಮೆ, ಕ್ಷಮೆ ಕೈಬಿಟ್ಟುಹೋಯಿತು. ಕ್ಷಾತ್ರತ್ವದ ಕಟ್ಟುನಿಟ್ಟುಗಳು, ರಕ್ಷಕ ಭಾವ ಬೆಳೆಯಿಸಿಕೊಳ್ಳಲಿಲ್ಲ. ಎಲ್ಲಿಯೂ ಸಲ್ಲದ ಅಮಾನುಷನಾಗಿ ಹೋದ. ಕಳ್ಳನಂತೆ ನಡುರಾತ್ರಿ ಶಿಬಿರದೊಳಕ್ಕೆ ನುಗ್ಗಿ ನಿದ್ದೆಯಲ್ಲಿದ್ದ ದೃಷ್ಟದ್ಯುಮ್ನ ಮತ್ತು ನನ್ನ ಮೊಮ್ಮಕ್ಕಳೈವರನ್ನೂ ಕೊಚ್ಚಿಹಾಕಿದ ರೀತಿ–ರಾಕ್ಷಸರೂ ಹೇಸುವಂತಹುದು. ಅವನಿಗೆ ಆತ್ಮಸಾಕ್ಷಿಯೇ ಇಲ್ಲವೇ? ಅಕ್ಷಮ್ಯ ಕೃತ್ಯ ಮಾಡಿ ಶಿಕ್ಷೆ ಅನುಭವಿಸುವ ಬದಲಿಗೆ ತನ್ನ ಜೀವ ಉಳಿಸಿಕೊಳ್ಳಲು ಬ್ರಹ್ಮಾಸ್ತ್ರವನ್ನೇ ಉಪಯೋಗಿಸಿದ. ಅದೂ ಕೃಷ್ಣಾರ್ಜುನರ ಮೇಲೆ–ಅದನ್ನು ಹಿಂದಕ್ಕೆ ತೆಗೆದುಕೊಳ್ಳಲಾರದೆ ಹೋದ. ಮಂದಬುದ್ಧಿ, ಹೀನ ಮನಸ್ಸಿನವ ತೊಟ್ಟ ಬ್ರಹ್ಮಾಸ್ತ್ರದ ಉದ್ದೇಶ ಪಾಂಡವ ವಂಶದ ನಾಶ ಗರ್ಭಸ್ಥ ಭ್ರೂಣವೂ ಸೇರಿದಂತೆ! ಸ್ವಧರ್ಮ ಬಿಟ್ಟು ಭಯಾನಕ ವ್ಯಕ್ತಿಯಾಗಿಹೋದ ಅಶ್ವತ್ಥಾಮ ಈಗೆಲ್ಲಿ? ವ್ರಣಪೀಡಿತನಾಗಿ ಯಾರ ಸಹಾಯವೂ ಸಿಗದೆ ಒಂಟಿಯಾಗಿ ಅಲೆದಾಡಬೇಕಾದ ಅಂತರಪಿಶಾಚಿಯಂತೆ!

ಕರ್ಣನಲ್ಲಿ ಕ್ಷಾತ್ರಗುಣಗಳಿದ್ದರೂ ಸಂಸ್ಕಾರಗಳಿಲ್ಲದೆ ಗುರಿತಪ್ಪಿದವ. ಹಿರಿಯನಾಗಿ ಸನ್ಮಾರ್ಗ ತೋರಿಸಬೇಕಾದ ಮಾವ ಶಕುನಿ ತಾನೇ ಮುಂದೆ ನಿಂತು ರಾಜ್ಯದಾಹ ಹೆಚ್ಚಿಸಿದವ. ಆತ್ಮಾಭಿಮಾನದ ಹಂತದಿಂದ ದುರಭಿಮಾನಕ್ಕೆ ದುರ್ಯೋಧನನನ್ನು ತಳ್ಳಿದವ. ರಾಜಮನೆತನದ ಹಿರಿಯಳಾಗಿ ನಾನು ಕುಂತಿ ಮಾಡಿದುದೇನು? ನಾನೂ ಯುದ್ಧವಾಗಲೆಂದು ಹಟ ಹಿಡಿದೆನಲ್ಲವೇ? ಈಗ ಯೋಚಿಸಿದರೆ ನನ್ನದು ಪೂರ್ಣನಂಬಿಕೆಯಿಲ್ಲದ ಮನಸ್ಸು. ಹೊರಗೆ ತೋರಿಸಿಕೊಳ್ಳದಿದ್ದರೂ ಹಿರಿಯರ ನ್ಯಾಯದಲ್ಲಿ ಮಕ್ಕಳ ಕ್ಷೇಮದ ಬಗ್ಗೆ ನಂಬಿಕೆಯಿಲ್ಲದೆ ಹಗಲೂ ರಾತ್ರಿ ಚಿಂತೆ ಮಾಡುವ ಮನಸ್ಸು. ಯಾವಾಗಲೂ ಉದ್ವೇಗದಲ್ಲಿ ಬಿಗಿದುಕೊಂಡಿರುವ ದೇಹ. ಮನಸ್ಸು. ವಿದುರ ನನಗೆ ಕೊಟ್ಟಿರುವ ಹೆಸರು ಚಿಂತೆಯ ಕುಂತಿ ! ಕುತೂಹಲದಿಂದಾಗಿ

ಹದಿಹರಯದಲ್ಲಿ ಹುಟ್ಟಿದ ಮಗು ಕೈಬಿಟ್ಟು ಹೋದಾಗಿನಿಂದ ಬಲಿತುಕೊಂಡ ಸಂತಾನದ ಹಂಬಲ. ಮನಸು ಬಿಗಿಹಿಡಿದಿಡಲಾಗದೆ ಪಾಂಡುವಿನ ಒತ್ತಾಯವೂ ಸೇರಿ ನಿಯೋಗದಲ್ಲಿ ಮಕ್ಕಳನ್ನು ಪಡೆದಾಗ ಮನದಲ್ಲಿ ಎದ್ದ ದೋಷಿ ಭಾವವನ್ನು ಅದುಮಿಟ್ಟೆ. ಹಸ್ತಿನಾವತಿಯ ಹಿರಿಯರೆಂದೂ ದೂಷಿಸದಿದ್ದರೂ ಧೃತರಾಷ್ಟ್ರ ದುರ್ಯೋಧನರ ಇಂಗಿತ ಗೊತ್ತಾದಾಗಲೆಲ್ಲ ದೋಷಿ ಭಾವ ತಲೆಯೆತ್ತುತ್ತಿತ್ತು. ಅವರಂತೆ ಇತರ ಜನರೂ ಯೋಚಿಸಬಹುದೆಂಬ ಅಳುಕು ಯಾವಾಗಲೂ. ಅದರಿಂದಾಗಿ ಮಕ್ಕಳ ಬಗ್ಗೆ ಚಿಂತೆ. ಕುರುವಂಶದಲ್ಲಿ ಅವರ ಸ್ಥಾನಕ್ಕಾಗಿ ಮೌನಹೋರಾಟ. ನನ್ನ ಸಂಸಾರದಲ್ಲಿ ಏನೇ ನಡೆದರೂ ಬೇರೆಯವರೇನೆಂದಾರು ಎಂಬ ದಿಗಿಲು. ಚಿಂತೆ. ಬೇರೆಯವರನ್ನು ಮೆಚ್ಚಿಸಲು ನನ್ನೆಲ್ಲ ಪ್ರಯತ್ನಗಳು. ಮಕ್ಕಳನ್ನು ಸಹಜವಾಗಿ ಬೆಳೆಯಗೊಡದೆ ಸಮಾಜ ಮೆಚ್ಚುವಂತಹ ಆದರ್ಶ ವ್ಯಕ್ತಿತ್ವದವರಾಗಲು ಬಿಗಿಮಾಡುತ್ತಿದ್ದೆ. ಭೀಮ ಮಾತ್ರ ಅನೇಕ ವೇಳೆ ಜಗಳ ತರುತ್ತಿದ್ದ. ನಾಲ್ಕೈದು ಬಾರಿ ಅವನನ್ನು ಕೊಲ್ಲಲು ದುರ್ಯೋಧನ ಯತ್ನಿಸಿದಾಗಲೂ ನಾನು ಮಕ್ಕಳೈವರ ಬಾಯಿಮುಚ್ಚಿಸಿದೆನೇ ಹೊರತು ಮಹಾರಾಜ ಧೃತರಾಷ್ಟ್ರನಲ್ಲಾಗಲೀ ಭೀಷ್ಮರಲ್ಲಾಗಲೀ ಈ ಆಪತ್ತಿನ ಸಂಗತಿ ತಿಳಿಸಲಿಲ್ಲ. ದುರ್ಯೋಧನನ ಕುತಂತ್ರಗಳನ್ನು ಮುಚ್ಚಿಟ್ಟು, ಅವನ ದುಷ್ಟತೆ ಬೆಳೆಯಲು ನಾನೂ ಪರೋಕ್ಷವಾಗಿ ಕಾರಣಳಾದೆ ಅನಿಸುತ್ತದೆ. ಪಾಂಡವರನ್ನು ಮುಗಿಸಿಬಿಡಲು ಅವನ ಪ್ರಯತ್ನ ಹೆಚ್ಚಿದಂತೆಲ್ಲ ನನ್ನ ನಿರ್ಧಾರವೂ ದೃಢವಾಗುತ್ತಾ... ಅದೇ ಯೋಚನೆ ಮಡುಗಟ್ಟಿಹೋಯಿತು. ನನ್ನ ಮಕ್ಕಳಿಗೆ ರಾಜ್ಯ ಬೇಕು. ಬೇರಾವುದಕ್ಕೂ ಯೋಚನೆ ಹರಿಯದೆ ಸುಳಿಸುಳಿದು ಚಿಂತೆಯಾಗಿ ಅದನ್ನೇ ವಿದುರನಿಗೂ ಹಂಚುತ್ತಿದ್ದೆ. ಆಗೆಲ್ಲ ವಿದುರ ಹೇಳುತ್ತಿದ್ದ– 'ನೀನು ಹೀಗೆ ಚಿಂತೆ ಮಾಡುವುದನ್ನು ಬಿಟ್ಟು ಚಿಂತನೆ ನಡೆಸು. ನೀನೂ ಉದ್ಧಾರವಾಗುತ್ತೀಯೆ. ಮಕ್ಕಳೂ ನಿಶ್ಚಿಂತೆಯಾಗಿ ಬೆಳೆಯುತ್ತಾರೆ', ದುರ್ಯೋಧನ ಛಲಕ್ಕೆ ನಿಂತಂತೆ ನಾನೂ ಹಟಕ್ಕೆ ನಿಂತೆ. ಈಗ ತಿಳಿಯುತ್ತಿದೆ, ಅವನಂತೆ ನನ್ನ ಮನಸ್ಸು ಬುದ್ಧಿಯೂ ನಿಂತ ನೀರಾಗಿ ಹೋಗಿತ್ತು. ಹಗಲು ರಾತ್ರಿ ಒಂದೇ ಜಪ. ಯುದ್ಧ ಮಾಡಿಯಾದರೂ ರಾಜ್ಯ ಪಡೆಯಿರಿ.. ಅದನ್ನೇ ಮಕ್ಕಳಿಗೂ ಸಂದೇಶವಾಗಿ ಕಳಿಸಿದ್ದೆ!

ಕೃಷ್ಣವಾಸುದೇವ ಸಂಧಾನಕ್ಕೆಂದು ಬಂದಾಗ ನನ್ನ ಮನಸ್ಥಿತಿಗೆ ತಕ್ಕ ಪರಿಹಾರ ಕೊಟ್ಟನಲ್ಲ! ಕರ್ಣನ ಮಾತೆತ್ತಿ ತೂಬನ್ನು ತೆರೆದಾಗಲೇ ನಿಂತು ಕೊಳೆಯುತ್ತಿದ್ದ ಚಿಂತೆ ಹರಿವ ಚಿಂತನೆಯಾಗಿ ಬುದ್ಧಿಗೆ ಹೊಸ ಚೇತನ ಬಂದಿತ್ತು. ಮನಸ್ಸೂ ತಿಳಿಯಾಗತೊಡಗಿದ್ದೂ ಆಗಿನಿಂದಲೇ! ಎಷ್ಟೋ ಪ್ರಶ್ನೆಗಳಿಗೂ ಉತ್ತರವೂ ಸಿಕ್ಕಿತು. ಈಗ ಎರಡು ಮೂರು ವಾರಗಳ ಹಿಂದೆ ಪಾಂಡವರೆದುರು ಕರ್ಣನನ್ನು ಒಪ್ಪಿಕೊಂಡ ಮೇಲೆ ಚಿಂತನೆಯ ರಭಸ ಹೆಚ್ಚಾಗಿದೆ. ವಿದುರ, ವ್ಯಾಸರು ಹಿಂದೆಲ್ಲ ಹೇಳುತ್ತಿದ್ದ ಬುದ್ಧಿವಾದಗಳಿಗೆ ಹೊಸ ಅರ್ಥ ಹೊಳೆಯುತ್ತಿದೆ. ಈಗಾದ ಯುದ್ಧ ಆಗಬೇಕಾದ್ದು ಆಯಿತು ಎಂಬ ದೃಢತೆ ಬಂದದ್ದು ಒಳಿತೇ!

ನನ್ನ ಸಂಸಾರದಲ್ಲಿ ಆದ ಆಚಾತುರ್ಯಗಳನ್ನು ನೇರಮಾಡಲು ವಿದುರ ವಾಸುದೇವ ವ್ಯಾಸರ ಸಹಾಯ ಅಷ್ಟಿಷ್ಟಲ್ಲ. ಸಂಸಾರದ ಬಂಡಿಯನ್ನು ದಾರಿಗೆ ತಂದರು. ಮುನ್ನಡೆವಂತೆ ನೋಡಿಕೊಂಡರು. ಅವರು ಕೊಟ್ಟ ಬುದ್ಧಿವಾದ ಸಲಹೆಗಳನ್ನು ಒಪ್ಪಿಕೊಳ್ಳಲು ನನ್ನ ಸ್ತ್ರೀ ಮನ ಹೆಚ್ಚು ಒದ್ದಾಡಲಿಲ್ಲ. ಅಹಮ್ಮು ಬಲಿಯಲಿಲ್ಲ. ಇವರು ಮೂವರೂ ಧೃತರಾಷ್ಟ್ರ

ಮಹಾರಾಜನಿಗೆ, ದುರ್ಯೋಧನನಿಗೂ ಕೊಟ್ಟ ಯಾವ ಬುದ್ಧಿವಾದವೂ ನಾಟದೆ ಹೋಯಿತು. ಹಮ್ಮು ಹೆಚ್ಚಾಗಿ ಸಂಸಾರದ ಬಂಡಿ ದಾರಿಯಿಂದ ಜಾರಿ ಕೆರೆಗೇ ಮಗುಚಿ ಬಿದ್ದು ನಾಶವಾಯಿತು. ಏಕೆ? ಹಿರಿಯರು ಕೊಡುವ ಹಿತವಚನ ಸ್ವೀಕರಿಸಲೂ ಆಗದಂತಹ ಮನಸ್ಥಿತಿಯೇ? ಅಥವಾ ಅವರ ಪ್ರವೃತ್ತಿಯೇ ಆ ರೀತಿಯದೋ? ಪ್ರವೃತ್ತಿಯ ಪ್ರಭಾವ ಎಷ್ಟು ಬಲವಾದದ್ದು! ತಿಳಿದೂ ತಿಳಿದೂ ನಾಶದ ಹಾದಿ ತುಳಿಸುವಷ್ಟು ಪ್ರಬಲವೇ ನಮ್ಮ ಪ್ರವೃತ್ತಿಗಳು? ಒಳಿತು ಕೆಡುಕನ್ನು ಅಳೆದು ನಿರ್ಧರಿಸುವ ಬುದ್ಧಿಯಿದ್ದೂ ಮಾನವರೇಕೆ ಅದನ್ನು ತಮ್ಮೊಳಿತಿಗೆ ಬಳಸುವುದಿಲ್ಲ? ಮನಸ್ಸು ವಾಲಿದ ಕಡೆಗೆ ಇಳಿಯುವುದು ಆಕ್ಷಣಕ್ಕೆ ಪ್ರಿಯವೆನಿಸಬಹುದು. ನಂತರ ಈ ಇಳಿತವೇ ರೂಢಿಯಾಗಿ, ಇಳಿಜಾರು ಆಳಗೊಂಡು, ಪ್ರಪಾತವಾಗಿ... ಮನಸ್ಸಿನ ಈ ವಾಲುವಿಕೆ ಅಭ್ಯಾಸವಾಗಿ ಪ್ರವೃತ್ತಿಯಾಗುವುದಲ್ಲವೇ? ಪ್ರವೃತ್ತಿ ಬಲಿತಂತೆ ಬುದ್ಧಿಯ ಕಡಿವಾಣ ಕಳಚಿ ಹೋಗುವುದೇ? ಬುದ್ಧಿ ತೋರಿಸಿದ ದಾರಿಬಿಟ್ಟು ಮನಸ್ಸು ಜೋಲುಬಿದ್ದ ಕಡೆ ಜಾರುವುದು, ನಂತರ ವಿಧಿಯನ್ನು ಹಳಿಯುವುದು! ಪ್ರವೃತ್ತಿಯಂತೆ ನಮ್ಮ ವೃತ್ತಿ. ಯಾವುದೇ ಸನ್ನಿವೇಶ ಈ ವೈಯಕ್ತಿಕ ಸರಿ–ತಪ್ಪುಗಳನ್ನು ಲೆಕ್ಕಿಸದೇ ತನ್ನದೇ ವಿಶಿಷ್ಟ ನಿರ್ಣಯದಲ್ಲಿ ಗತಿಯಲ್ಲಿ ರೂಪುಗೊಳ್ಳುವುದು. ತಮ್ಮ ಪ್ರವೃತ್ತಿ–ವೃತ್ತಿಗನುಸಾರ ಆ ಸನ್ನಿವೇಶದ ಫಲವನ್ನು ಪ್ರತಿಯೊಬ್ಬರೂ ಅನುಭವಿಸಿಯೇ ತೀರಬೇಕು.

ಅಂದು ದ್ಯೂತ ಸಭೆಯಲ್ಲಿ ಆಟಕ್ಕೆಂದು ಆರಂಭವಾದ ದ್ಯೂತ ಸುಂಟರಗಾಳಿಯಂತೆ ಬೆಳೆದು ಎಲ್ಲವನ್ನೂ ಅಸ್ತವ್ಯಸ್ತಮಾಡಿದ ರೀತಿ! ಊಹಾತೀತ. ದ್ರೌಪದಿಯಲ್ಲಿ ಬಾಲ್ಯದಿಂದಲೂ ಬೆಳೆದುಬಂದಿದ್ದ ಸ್ವಾಭಿಮಾನ; ಸ್ತ್ರೀಯು ಪುರುಷರಿಗೆ ಸಮಾನಳು ಎನ್ನುವ ಬಿಗುವು. ಅದಕ್ಕೆ ತಕ್ಕಂತಹ ಮನೋದಾರ್ಢ್ಯ. ಪುರುಷಸಮಾಜದಲ್ಲಿದ್ದೂ ಅವರನ್ನು ಮುಖಾಮುಖಿ ಪ್ರಶ್ನಿಸುವ ಎದೆಗಾರಿಕೆ–ಪುರುಷರ ದೃಷ್ಟಿಯಲ್ಲಿದು ಉದ್ಧಟತನ. ದುರ್ಯೋಧನಾದಿಗಳಲ್ಲಿ ಬೆಳೆದಿದ್ದ ರಾಜ್ಯದಾಸೆ. ಅದರಿಂದಾಗಿ ಪಾಂಡವರಲ್ಲಿ ಭಯ–ತತ್ಫಲವಾಗಿ ದ್ವೇಷ, ಅಸೂಯೆ. ಶಕುನಿಯಲ್ಲಿದ್ದ ಆಟದಲ್ಲಿ ಗೆಲುವು ಮುಖ್ಯ ಮೋಸದ ಮಾರ್ಗವೂ ಆಟದ ಭಾಗವೆಂಬ ನಿಲುವು; ಧೃತರಾಷ್ಟ್ರನಲ್ಲಿದ್ದ ಪುತ್ರವ್ಯಾಮೋಹದಿಂದಾಗಿ ಆಟದ ಎಲ್ಲೆ ಮೀರಿದ ಅವರ ಅಸಭ್ಯವರ್ತನೆಯನ್ನು ನಿಲ್ಲಿಸಲಾಗದ, ದಂಡಿಸಲಾಗದ ದುರ್ಬಲತೆ. ಧರ್ಮರಾಯನಲ್ಲಿದ್ದ ದ್ಯೂತದ ಗೀಳು. ಅದರೊಂದಿಗೆ ಹಿರಿಯರ ಆಣತಿಯಂತೆ ನಡೆವುದೇ ಕಿರಿಯರ ಧರ್ಮ ಎಂಬ ನಿಲುವು–ಸ್ವಂತ ನಿರ್ಧಾರ ತೆಗೆದುಕೊಳ್ಳಲಾಗದ ಸಂದಿಗ್ಧತೆ, ತಮ್ಮಂದಿರಲ್ಲಿ ಬೆಳೆದುಬಂದಿದ್ದ ಹಿರಿಯರನ್ನು ತಂದೆಯಂತೆ ಎಂಬ ಆಜ್ಞಾನುವರ್ತಿ ಭಾವ. ಕರ್ಣನಲ್ಲಿದ್ದ 'ಸೂತ್ರನೆಂಬ ಕೀಳರಿಮೆ; ಅದರಿಂದ ಹೊರಬರಲು ಬಳಸುತ್ತಿದ್ದ ಕ್ಷತ್ರಿಯ ರೀತಿಯಲ್ಲದ ಅತಂತ್ರ ಮಾರ್ಗ. ಭೀಷ್ಮದ್ರೋಣರಲ್ಲಿದ್ದ ಪಾಂಡವರು–ಕೌರವರಲ್ಲಿ ಪಕ್ಷಪಾತವಿಲ್ಲವೆಂಬ ಭಾವದಿಂದಾಗಿ ಕಣ್ಣೆದುರು ಬೆಳೆಯುತ್ತಿದ್ದ ಸನ್ನಿವೇಶವನ್ನು ತಡೆಯದೆ ಪ್ರೇಕ್ಷಕರಾಗಿ ನೋಡುವ ನಿಲುವು. ವಿದುರನಲ್ಲಿ ನೀತಿ–ಅನೀತಿಯ ಪ್ರಜ್ಞೆಯಿದ್ದೂ ಅದನ್ನು ವಿಧಿಸಲಾಗದ ಅಸಹಾಯಕತೆ ದಾಸೀಪುತ್ರನಾದುದರಿಂದ ಕುರುಸಂಸಾರದಲ್ಲಿದ್ದೂ ಇರದ ಪರಕೀಯತೆ. ಕಿರಿಯರ ಹಿರಿಯರಮೂ ಅಸಭ್ಯ ವರ್ತನೆಯನ್ನೂ ಸಹಿಸಿಕೊಳ್ಳುವ ಮನೋಭಾವ. ಈ ಎಲ್ಲ ಪ್ರವೃತ್ತಿ ಸಂಸ್ಕಾರಗಳು ಸೂತ್ರಗಳಂತೆ ವ್ಯಕ್ತಿಗಳನ್ನು

ಎಳೆದು ಬೊಂಬೆಗಳಂತೆ ಆಡಿಸಿ ಸನ್ನಿವೇಶ ರೂಪಿಸಿ, ಅದರ ಫಲವನ್ನು ಅನುಭವಿಸುವಂತೆ ಮಾಡಿ, ಮುಂದಿನ ಸಂದರ್ಭಗಳಿಗೆ ಬೀಜ ಬಿತ್ತಿದವು! ಹೀಗೆಯೇ ಬೇರೆ ಸನ್ನಿವೇಶಗಳೂ ರೂಪುಗೊಂಡವಲ್ಲವೇ? ಈ ಯುದ್ಧವೂ ಅದೇ ತಾನೇ. ಭಾಗವಹಿಸಿದವರೆಲ್ಲರ ಪ್ರವೃತ್ತಿಗಳ ಮೊತ್ತ. ಎಲ್ಲರಿಗೂ ತಮ್ಮ ನಿರ್ಧಾರ ಧರ್ಮಯುತವೇ ಆಗಿತ್ತು. ಸಮಂಜಸವೇ ಆಗಿತ್ತು. ಯುದ್ಧ ಒಂದೇ ಆದದ್ದು. ಭಾಗಿಗಳು ಅನೇಕರು. ಬಂಧುಗಳು ಹಿತೈಷಿಗಳು ಎನಿಸಿಕೊಂಡವರು ಅವರವರದೇ ಕಾರಣಕ್ಕಾಗಿ ರಣರಂಗಕ್ಕಿಳಿದರು. ನೇರ ಸಂಬಂಧವಿಲ್ಲದವರೂ ತಮ್ಮ ವ್ಯಕ್ತಿಗತ ಸೇಡನ್ನು ಮಿತ್ರತ್ವ-ಶತ್ರುತ್ವವನ್ನು ಶಪಥ ವಚನಗಳನ್ನು ಪೂರೈಸಿಕೊಳ್ಳಲು ಈ ದಾಯಾದಿ ಜಗಳವನ್ನು ಉಪಯೋಗಿಸಿಕೊಂಡರು. ಅದನ್ನು ಮಹಾಯುದ್ಧದ ಗಾತ್ರಕ್ಕೆ ಗಂಭೀರತೆಗೆ ಒಯ್ದರು. ಪಾಂಡವರಿಂದ ಅವಮಾನಿತನಾದ ಜಯದ್ರಥ; ಅರ್ಜುನನ ಮೇಲೆ ಸೇಡು ತೀರಿಸಿಕೊಳ್ಳಲು ಬಂದ ಅಶ್ವಸೇನ-ಸರ್ಪಾಸ್ತ್ರದಲ್ಲಿ; ಭೀಷ್ಮರ ಮೇಲಿನ ಸೇಡಿಗಾಗಿ ಬಂದ ಶಿಖಂಡಿ; ದ್ರೋಣರ ಮೇಲಿನ ಸೇಡು ತೀರಿಸಲು ದ್ರುಪದ, ದೃಷ್ಟದ್ಯುಮ್ನ; ಭೀಮನ ಮೇಲೆರಗಲು ಬಕಾಸುರನ ಬಂಧುಗಳು; ಸಾತ್ಯಕಿಯನ್ನರಸಿಕೊಂಡು ಭೂರಿಶ್ರವಸ್ಸು; ಕೇವಲ ದುಡ್ಡಿಗಾಗಿ ಹೋರಾಡಬಂದ ನಾರಾಯಣೀ ಸೈನಿಕರು; ಇವರೆಲ್ಲರ ಉದ್ದೇಶ ಅವರೆಣಿಸಿದಂತೆ ಫಲಿಸಿತೇ?

ಯುದ್ಧ ತನ್ನದೇ ನಿರ್ಣಯವಿತ್ತು ಫಲಿತಾಂಶ ಕೊಟ್ಟಿತು. ಹದಿನೆಂಟು ಅಕ್ಷೋಹಿಣಿಯ ಸೇನಾ ಸಮುದ್ರದಲ್ಲಿ ಬದುಕುಳಿದು ಬಂದವರು ಕೈಬೆರಳೆಣಿಕೆಯಷ್ಟು ಮಂದಿ, ದೇಹವೆಳೆಯುತ್ತಾ ಹಿಂದಿರುಗಿದರು. ಅಂದರೆ ನಾವೆಲ್ಲ ನಮ್ಮದೇ ಪ್ರವೃತ್ತಿಗಳ ಅಧೀನರು. ಯಾವುದೇ ಸನ್ನಿವೇಶದ ನಿರ್ಮಾಣಕ್ಕೆ ಪಾಲುದಾರರು. ಸನ್ನಿವೇಶವನ್ನು ಅದು ಇರುವಂತೆ ನೋಡಲಾಗದ, ಅದಕ್ಕೆ ನಮ್ಮದೇ ಅನಿಸಿಕೆಗಳ ಬಣ್ಣ ಕೊಟ್ಟು ತೀರ್ಮಾನಕ್ಕೆ ಬರುವ ಹುಂಬರು. ಸನ್ನಿವೇಶವನ್ನು ಇರುವಂತೆ ನೋಡುವವರಾರು? ಯಾವುದೇ ಪ್ರವೃತ್ತಿಯಿಲ್ಲದವರು. ಕಡೇ ಪಕ್ಷ ಅದರಲ್ಲಿ ಭಾಗಿಗಳಾಗದೆ ಹೊರನಿಂತಿರುವವರು. ಭಾವನೆಗಳಿಗೆ ಎಡೆಕೊಡದೆ ಕೇವಲ ಸನ್ನಿವೇಶವನ್ನು ನೋಡಬಲ್ಲ ಧೀಶಕ್ತಿ ಇರುವವರು. ವಾಸುದೇವ ಹೇಳಿದ್ದು ಇದೇ ನಿಲುವೇ? ಏನೆಂದಿದ್ದ?

'ವ್ಯಕ್ತಿಗೆ ಪ್ರತಿಕ್ರಿಯಿಸುವ ಬದಲಿಗೆ ಸನ್ನಿವೇಶಕ್ಕೆ ಪ್ರತಿಸ್ಪಂದಿಸು. ವ್ಯಕ್ತಿಯ ಹಿಂದಿನ ನಡವಳಿಕೆಗೆ ಪ್ರತೀಕಾರ ಅಥವಾ ಮುಂದೆ ತೋರುವ ನಡವಳಿಕೆಗೆ ಈಗ ಪ್ರತಿಕ್ರಿಯೆ ತೋರದೆ, ಕೇವಲ ಈಗಿನ ಸನ್ನಿವೇಶಕ್ಕೆ ಸ್ಪಂದಿಸು. ಭೂತಕಾಲಕ್ಕೆ ಅಥವಾ ಭವಿಷ್ಯಕ್ಕೆ ಹಂಚಿಹೋಗದೆ ಈ ಕ್ಷಣದಲ್ಲಿ ಪೂರ್ಣವಾಗಿರು'.

ಕೃಷ್ಣವಾಸುದೇವನಿಗೆ ಹಿಂದಿಲ್ಲದ ಮುಂದಿಲ್ಲದ, ಈ ಕ್ಷಣದಲ್ಲಿ ಪೂರ್ಣನಾಗಿರುವ ಕಲೆ ಕರಗತವಾಗಿರಬೇಕು. ಅದಕ್ಕೇ ಅವನದು ಅಪಾರ ಆತ್ಮವಿಶ್ವಾಸ. ವ್ಯಕ್ತಿಗಳ ಒಳಗೊಳಗನ್ನೂ ಅರಿತುಕೊಳ್ಳುವ ಕೌಶಲ್ಯ. ಅಂದರೆ ಅವನು ತನ್ನಲ್ಲಿ ಪ್ರವೃತ್ತಿಗಳನ್ನೇ ಬೆಳೆಯಗೊಡಲಿಲ್ಲವೇ? ನಾವೆಲ್ಲ ಸನ್ನಿವೇಶದ ಕೈಗೊಂಬೆಗಳಾದರೆ ಕೃಷ್ಣನಿಗೆ ಸನ್ನಿವೇಶಗಳು ಕೈಗೊಂಬೆಗಳು; ಭಾಪುರೇ! ಎಷ್ಟು ಬೆಳೆದಿದ್ದಾನೆ ನನ್ನಳಿಯ-ಯಾರ ಕೈವಾಡವಿದು? ವ್ಯಾಸ? ಸಾಂದಿಪಿನೀ? ಅವನದೇ ಬಾಳ ಅನುಭವಗಳು? ಅಥವಾ ಅವನಿಟ್ಟುಕೊಂಡ ಜೀವನ ಧ್ಯೇಯ? ಈ ಮಹಾಯುದ್ಧವನ್ನು

ತನ್ನ ಧ್ಯೇಯ ಲೋಕಸಂಗ್ರಹ ಧರ್ಮಸ್ಥಾಪನೆಗೆ ಉಪಯೋಗಿಸಿಕೊಂಡನೆಂದರೆ ಕೃಷ್ಣವಾಸುದೇವನದು ದೂರದೃಷ್ಟಿ. ಅಲ್ಲಲ್ಲ ಪೂರ್ಣದೃಷ್ಟಿ! ಹೆಸರಿಗೆ ಪಾರ್ಥಸಾರಥಿ. ಆದರೆ ಸಮಸ್ತ ಯುದ್ಧದ ಸಾರಥ್ಯಮಾಡಿ ತಾನಿಟ್ಟ ಗುರಿ ಸಾಧಿಸಿಬಿಟ್ಟವ. ಕ್ಷಾತ್ರತೇಜದ ಕುರುವಂಶದ ಸಿಂಹಾಸನಕ್ಕೆ ಧರ್ಮತೇಜದ ರಾಜನನ್ನು ತಂದುಬಿಟ್ಟ, ಈ ಗುರಿಯನ್ನು ಧರ್ಮರಾಯನಿಗೆ ವಿಶದವಾಗಿ, ಖಚಿತವಾಗಿ ಕೃಷ್ಣನಾಗಲೀ ವ್ಯಾಸರಾಗಲೀ ಹೇಳಿರಲಿಲ್ಲವೇ? ಯುದ್ಧವಾದಮೇಲೂ ಆಗಿಹೋದುದಕ್ಕೆ ದುಃಖಿಸುತ್ತ ಕೈಚೆಲ್ಲಿ ಕುಳಿತಿದ್ದಾನೆ. ಸಮರಕ್ಕಿಳಿಯದಿದ್ದರೆ ಕರ್ಣನ ಹತ್ಯೆ ನಡೆಯುತ್ತಿರಲಿಲ್ಲ. ವನವಾಸದ ನಂತರ ಕಾಡಿನಲ್ಲಿ ಆಶ್ರಮ ಕಟ್ಟಿ ಜೀವಿಸಬಹುದಿತ್ತು. ಸೋದರರೆಲ್ಲರ ಹತ್ಯೆಯ ಪಾಪ ತಟ್ಟುತ್ತಿರಲಿಲ್ಲ." ಸಂನ್ಯಾಸ ಹಿಡಿದು ಹೊರಟುಹೋಗುವ ಮಾತು ಅದೆಷ್ಟನೆಯ ಸಲವೋ–ಪ್ರತಿಸಲವೂ ಎಲ್ಲರೂ ಮಾತನಾಡಿಸಿ ಹೊಗಳಿಯೋ ತೆಗಳಿಯೋ ನೀನಿಲ್ಲದೆ ನಾವಿಲ್ಲ ಎಂದೊಪ್ಪಿಸುತ್ತ ಹುರಿದುಂಬಿಸಿ ಕಾರ್ಯಪ್ರವೃತ್ತನಾಗಿಸಬೇಕು. ಧರ್ಮಜನ ಸಮಸ್ಯೆಯಾದರೂ ಏನು? ಜೀವಗಳ್ಳನೇ? ಕ್ರಿಯಾಶಕ್ತಿಯಿಲ್ಲವೇ? ಹೆಸರಿಗೆ ಯುಧಿಷ್ಠಿರ! ಆದರೆ ಯುದ್ಧವೆಂದರೇ ಸಿಂಹಸ್ವಪ್ನ ಕಂಡಂತಾಗುತ್ತಾನೆ. ಈಗ ಯುದ್ಧವೆಲ್ಲ ಮುಗಿದು ರಾಜ್ಯ ಕೈಸೇರಿದರೂ ಸಂನ್ಯಾಸವೆಂದರೆ? ಎಲ್ಲರ ಕೈಕಾಲು ಕೆಡಿಸಿ ಹತಾಶಭಾವ ತರುತ್ತಿದ್ದಾನೆ. ಒಂದು ತಿಂಗಳ ಸೂತಕದಿನಗಳಲ್ಲಿ ಅವನನ್ನು ಕಾಣಬಂದವರೆಷ್ಟು ಮಂದಿ – ನಾರದ ಮುನಿಗಳಿಂದ ಹಿಡಿದು ನಗರದ ಬ್ರಾಹ್ಮಣರು, ಗಣ್ಯರೆಲ್ಲರೂ ಬಂದು ಹೋದರು. ಅವರೆಲ್ಲರ ನಿರೀಕ್ಷೆಗೆ ನೀರು ತಿದ್ದುವಂತಹ ಸಂನ್ಯಾಸದ ಗೀಳುಹಿಡಿದವನನ್ನು ಪಟ್ಟಕ್ಕೇರಿಸಿದರೂ ಎಷ್ಟು ದಿನ?

ಧರ್ಮಜನ ಮನದೊಳಗಿನ ತುಮುಲವಾದರೂ ಏನು? ನೊಗಕ್ಕೆ ಕಟ್ಟಿದ ಹೊಸ ಬಸವನಂತೆ ಬಿಡಿಸಿಕೊಳ್ಳಲು ಹೆಣಗುತ್ತಿರುವ ಹಾಗಿದೆ. ಕೃಷ್ಣನಿಗಿರುವ ನಿರ್ಮಮತ್ವ ಇವನಿಗೂ ಇದ್ದಿದ್ದರೆ? ಅವನ ಸಮಸ್ಯೆ ಇದೇ ಇರಬೇಕು. ಅವನಿಗೂ ಎಲ್ಲರಂತೆ ಆಯಾ ವಯಸ್ಸಿಗೆ ಬರುವ ಮಾನವ ಸಹಜ ಭಾವನೆಗಳು ಆಸೆಗಳನ್ನು ಚಿಕ್ಕಂದಿನಿಂದಲೇ ಅದುಮಿಟ್ಟುಕೊಂಡ. ಅವನ ಮೇಲೆ ವಯಸ್ಸಿಗೆ ಮೀರಿದ ಪ್ರೌಢತೆಯನ್ನು ಹೇರಿದವರೂ ನಾವೇ! ನೀನು ಹಿರಿಯವ. ನಿನ್ನ ನಡಾವಳಿ ಅವರಿಗೆಲ್ಲ ಮಾದರಿಯಾಗಬೇಕು... ಭೀಮಾದಿಗಳಂತೆ ದುರ್ಯೋಧನಾದಿಗಳೂ ನಿನ್ನ ತಮ್ಮಂದಿರು... ನೀನು ಅಗ್ರಜ. ಅವರ ಹೊಣೆಗಾರಿಕೆ ನಿನ್ನದೇ.. ಏನೇನು ಹೇಳಿದ್ದೆವೋ ನೆನಪೆಲ್ಲಿ? ತಮ್ಮಂದಿರನ್ನು ಪ್ರೀತಿಸು ಎಂದವರೇ ಈಗ ಅವರನ್ನು ಕೊಲ್ಲು ಎಂದರೆ? ಗುರುಹಿರಿಯರಲ್ಲಿ ಪ್ರೀತಿ, ವಿನಯ ತೋರು ಎಂದವರು ಈಗ ಅವರನ್ನು ಯುದ್ಧದಲ್ಲಿ ಎದುರಿಸಿ ಕೊಲ್ಲು ಎಂದರೆ? ಎಲ್ಲರ ಒತ್ತಾಯಕ್ಕೆ ಮಣಿದು ಯುದ್ಧವೇನೋ ಮಾಡಿದ. ಆದರೆ ಅದಕ್ಕಾಗಿ ಪಾಪಪ್ರಜ್ಞೆ ತಂದುಕೊಂಡರೆ ಏನು ಸಾಧಿಸಿದ ಹಾಗಾಯಿತು? ತಾನು ಯುದ್ಧ ಮಾಡಿದ ಉದ್ದೇಶದಲ್ಲೇ ಶ್ರದ್ಧೆಯಿರಲಿಲ್ಲವೇ?

ಅಧರ್ಮವನ್ನು ಸೈರಿಸಿಯಾದರೂ ಸರಿ. ಗುರುಹತ್ಯೆ ಪಿತೃಹತ್ಯೆಯ ಪಾಪ ಮಾಡಲಾರೆ ಎನ್ನುವ ಸ್ವಭಾವ. ಇವರ ಅನಾಚಾರ–ದುರಾಚಾರಗಳನ್ನು ಸೈರಿಸಿಕೊಂಡಾದರೂ ಶಾಂತಿ

ಕಾಪಾಡುವ ಮನಸು. ಅಧರ್ಮಿಗಳಲ್ಲಿ ಕೊಂಡ ಶಾಂತಿ ನಿಜವಾದ ಶಾಂತಿಯೇ? ತಾತ್ಕಾಲಿಕ ಸಮಾಧಾನವಷ್ಟೇ!

ಕೃಷ್ಣನಿಗೂ ಧರ್ಮಜನಿಗೂ ಇರುವ ವ್ಯತ್ಯಾಸವೆಲ್ಲಿ? ಧರ್ಮಜನದು ಕಾರ್ಯವನ್ನು ಅನ್ಯರ ಒತ್ತಾಯಕ್ಕೆ ಮಾಡುತ್ತಿದ್ದೇನೆಂದು ಮಾಡಿ ಅದರ ಹೊಣೆಗಾರಿಕೆಯಿಂದ ಹೊರಗುಳಿವ ರೀತಿ: ಕೃಷ್ಣನದು ಕಾರ್ಯವನ್ನು ತಾನೇ ನಿರ್ಧರಿಸಿ, ಅದರ ಪೂರ್ಣ ಹೊಣೆ ಹೊತ್ತು ಪರಿಣಾಮವನ್ನು ಹೊರುವ ರೀತಿ.

ಕೃಷ್ಣ ತಾನಾಗಿಯೆ ಅನುಭವದಿಂದ ಸ್ವಪ್ರೇರಣೆಯಿಂದ ನಾನು ನನ್ನದು ನನಗಾಗಿ ಎಂದೆಲ್ಲ ಮಮಕಾರದಿಂದ ಕಳಚಿಕೊಂಡ ಪೂರ್ಣ ಅರಿವಿನಲ್ಲಿ ನಿರ್ಮಮತ್ವ ಸಾಧಿಸಿದ. ಎಲ್ಲರನ್ನೂ ಮಾನವೀಯ ಹೃದಯದಿಂದ ಪ್ರೀತಿಸಲು ಕಲಿತ. ಅಂತೆಯೇ ಅಧರ್ಮವನ್ನು ಸೈರಿಸದಾದ. ಆದರೆ ಧರ್ಮಜ? ವ್ಯಾಸರು, ವಿದುರ, ನಾನು ಹೇಳಿದೆವೆಂಬ ಕಾರಣಕ್ಕಾಗಿ–ತನ್ನ ಭಾವನೆಗಳನ್ನು ಮನದಾಳಕ್ಕೆ ಅದುಮಿಟ್ಟನಲ್ಲವೇ? ಅವನಲ್ಲಿ ಆರ್ಯಧರ್ಮ ಪರಿಪಾಲನೆ ನೂರಕ್ಕೆ ನೂರು ಇರಬೇಕು. ಎಂಬ ನಿರೀಕ್ಷೆ ನಮಗಿತ್ತೇ? ಕೃಷ್ಣನಲ್ಲಿ ಮಮಕಾರದ ಭಾವನೆಗಳು ಹಣ್ಣೆಲೆಯಂತೆ ತಾವಾಗಿಯೇ ಉದುರಿಬಿದ್ದರೆ ಧರ್ಮಜನಲ್ಲಿ ಬೇರೆಯವರು ಬಲವಂತದಲ್ಲಿ ಕೀಳುತ್ತ ಕೀಳುತ್ತ ಆ ನೋವಿಗೆ ಹೆದರಿರುವವನೇ? ಅವನಿಗೆ ಯುಧಿಷ್ಠಿರನಾಗುವುದಕ್ಕಿಂತ ಧರ್ಮರಾಯ ನೆನಿಸುವುದು ಹೆಚ್ಚು ಪ್ರಿಯವಿರಬೇಕು. ತಂದೆಯಾಗಿ ನಿಂತ ಅಣ್ಣನ ನೆರಳಿನಲ್ಲಿ ತಮ್ಮಂದಿರು ಸಹಜತೆಯಿಂದ ಪ್ರೀತಿ, ಪ್ರೇಮ, ಕೋಪ, ದ್ವೇಷ, ಸ್ನೇಹ ಎಂದೆಲ್ಲ ಭಾವನೆಗಳಿಗೆ ಎಡೆಕೊಟ್ಟು ವ್ಯಕ್ತಿತ್ವ ಬೆಳೆಸಿಕೊಂಡರು. ಅಣ್ಣನ ನೇತೃತ್ವದಲ್ಲಿ ಧರ್ಮಪಾಲನೆ ಮಾಡಿದರು. ಆದರೆ ಧರ್ಮಜನಿಗೆ ಆ ನೆರಳುಕೊಟ್ಟು ಬೆಳೆಸುವ ತಂದೆಯಿಲ್ಲದೆ, ಸಹಜ ಭಾವನೆಗಳೆಲ್ಲ ಮುರುಟಿಹೋಗಿ ಈಗ ಉಳಿದುಕೊಂಡಿರುವುದು ಸಂನ್ಯಾಸಿ ಮನೋಭಾವ! ಯಾವುದೇ ರೀತಿಯ ಬಾಲಿಶ ತಪ್ಪು ನಡೆವಳಿಕೆಗೆ ಎಡೆಕೊಡದಂತೆ ಮಾದರಿಯಾದ. ಇಷ್ಟು ವರ್ಷಗಳೂ ಬೇರೆಲ್ಲರಿಗಾಗಿ ತನ್ನನ್ನೇ ಕೊಟ್ಟುಕೊಂಡ. ಈಗಲಾದರೂ ಅವನನ್ನು ಅವನಿಗೇ ಬಿಟ್ಟುಕೊಡಬಾರದೇ? ಅವನು ಯಾರಿಗೂ ವಚನ ಕೊಟ್ಟಿಲ್ಲ. ಅಥವಾ ಶಪಥ ಮಾಡಿಲ್ಲ. ವ್ಯಕ್ತಿಸ್ವಾತಂತ್ರ್ಯವಿಲ್ಲದ ಬಾಳು ಎಷ್ಟು ದಿನ? ಅವನು ಕೇಳುತ್ತಿರುವ ಸಂನ್ಯಾಸವಾದರೂ ಧರ್ಮಸಮ್ಮತವೇ ತಾನೇ?

ವಂಶ ಬೆಳೆಸಿ ಫಲಿಸುವ ಕುಡಿಗಳೆಲ್ಲ ಯುದ್ಧದಲ್ಲಿ ಬೆಂದುಹೋದವು. ನಿಂತ ಮರಗಳ ಹಸಿರೆಲ್ಲ ಕರಟಿ, ಉಳಿದುಕೊಂಡಿರುವುದು ಒಣಬೊಡ್ಡೆಗಳಷ್ಟೆ. ಅವುಗಳಲ್ಲಿ ಜೀವನೋತ್ಸಾಹ ಬಯಸಿದರೆ? ಮಕ್ಕಳ ಸಾವಿನ ದುಃಖದ ಬೇಗೆ ತಣ್ಣಗಾಗಲು ಒಂದು ತಿಂಗಳಲ್ಲ, ಒಂದು ಜನ್ಮವಾದರೂ ಸಾಲದು. ದ್ರೌಪದಿ, ಸುಭದ್ರೆ, ಉತ್ತರೆ ಜೀವರಸವೇ ಕಣ್ಣೀರಾಗಿ ಉಕ್ಕಿ ಉಕ್ಕಿ ಹರಿಯುತ್ತಲೇ ಇದೆ. ಇವರನ್ನು ಸಂತೈಸಲು ಇರುವುದೊಂದೇ ಮಡಿಲು–ಪೃಥೆಯದು. ಪೃಥಿವಿಯಂತೆ ಎಷ್ಟೇ ಅಗೆದು, ತುಳಿದು, ಒಟ್ಟಿ, ತೊಳೆದು, ಏನೇ ಮಾಡಿದರೂ ಹಸಿರು ಮೂಡಿಸುವ ಶಕ್ತಿ ಇದೆಯಲ್ಲ! ದಿನಕ್ಕಾರು ಬಾರಿ ಗಂಗೆಯಲ್ಲಿ ಮುಳುಗಿ ತಣ್ಪು ತಂದುಕೊಳ್ಳುವುದು. ಆ ತಣ್ಪಿನಲ್ಲಿ ಅವರ ಬೇಗೆ ಶಮನ ಮಾಡುವುದು. ನನ್ನೊಳಗಿನ ಬೇಗೆ ಹೆಚ್ಚಾಗಿ ಮತ್ತೆ

ಗಂಗೆಯ ಮಡಿಲಿಗೇ ಪೃಥಿವೀ ನಿನ್ನೊಡಲ ಶಕ್ತಿ-ಭರಣಶಕ್ತಿ ನನಗಷ್ಟು ಕೊಡು. ಈ ತಾಯಂದಿರ ಸಂಕಟ ನೀಗುವವರೆಗಾದರೂ ಅವರನ್ನು ಸಂತೈಸುವ ತಣ್ಪು ನನ್ನ ಮಡಿಲಿಗಿರಲಿ. ಈ ಗಂಗೆಯಂತೆ ಹರಿವ ತಣ್ಣೀರಾಗುವ, ಹರಿದು ದುಃಖ ಕೊಂಡೊಯ್ಯುವ ಮನಸು ಕೊಡು. ನದಿಯಿಲ್ಲದೆ ನೆಲ ಬಂಜರಾಗುವಂತೆ ನದಿಯ ಒಡನಾಟವಿಲ್ಲದೆ ಈ ಪೃಥೆಯೂ ಬಂಜರಾಗಿಹೋಗುತ್ತಿದ್ದಳೇನೋ. ನನ್ನ ಸಂಕಟಮಯ ಕ್ಷಣಗಳೆಲ್ಲವನ್ನೂ ಹರಿವ ನೀರಲ್ಲಿ ಕುಳಿತು ಕಳೆದುಕೊಂಡೇ ಜೀವಮಾನ ಮುಗಿಸಿದೆ.... ಪಾಂಡವರಾರೂ ನನ್ನ ಬಳಿ ಹೆಚ್ಚು ಸುಳಿದಿಲ್ಲ. ಹಿಂದಿನಂತಾಗಿದ್ದರೆ ಖಂಡುಗ ದುಃಖ ಹೇಳಿಕೊಂಡು ಸಮಾಧಾನ ಪಡೆಯುತ್ತಿದ್ದರು. ಈಗ ಕರ್ಣನ ಸಂಗತಿಯಿಂದಾಗಿ ನನ್ನ ಬಳಿ ಬರಲು ಮುಜಗರವೇ? ಅವರಿಗೇ ಬಿಟ್ಟದ್ದು. ಸಹದೇವ ನನ್ನ ಕೋಣೆಯ ಹೊರಜಗುಲಿಯವರೆಗೆ ಬಂದು ಇಣುಕುವುದೂ ಗೊತ್ತು. ಒಳಗೆ ಬರಲೇನು ಅಡ್ಡಿ? ನನಗೂ ಅವನ ತಲೆಸವರಿ ಆತುಕೊಳ್ಳುವ ಮನಸು. ನನ್ನ ಸಾಂತ್ವನವಿಲ್ಲದೆ ಅವರ ದುಃಖ ಶಮನವಾದರೆ ಅದೂ ಒಳಿತೇ. ಮೊಮ್ಮಕ್ಕಳಾಗುವ ವಯಸ್ಸಿನವರು. ಲೋಕದ ರೀತಿ ನೀತಿ ತಿಳಿದವರಿಗೆ ನನ್ನ ಅಗತ್ಯವಿಲ್ಲ. ಇರಬಾರದು. ಬಂದುದನ್ನು ನುಂಗಿಕೊಂಡು ಮುಂದಿನದಕ್ಕೆ ತತ್ಪರರಾಗುವುದೀಗ ಅನಿವಾರ್ಯ. ದುಃಖಾತಿರೇಕಕ್ಕೆ ಎಡೆಕೊಟ್ಟು ಅಸಂಬದ್ಧ ಪ್ರಲಾಪ ಮಾಡುತ್ತ ಕೂರುವ ಸಮಯವಲ್ಲ. ಧರ್ಮಜನಿಗೇಕೆ ರಾಜ್ಯದ ಪರಿಸ್ಥಿತಿಯ ಅರಿವಾಗಿಲ್ಲ? ತನ್ನ ವರ್ತನೆಯಿಂದಾಗುತ್ತಿರುವ ಹಾನಿ ಕಾಣಲಾರನೇ? ಯುದ್ಧದ ಹೊಡೆತದಿಂದ ತತ್ತರಿಸಿರುವ ಜನತೆಯಲ್ಲಿ ಈಗಾಗಲೇ ಅರಾಜಕತೆ ತಲೆದೋರಿದೆ. ಈಗ ಗೆದ್ದು ಬಂದ ರಾಜನೂ ರಾಜ್ಯಭಾರ ಮಾಡಲಾರೆ ಎಂದರೆ ರಾಜ್ಯದಲ್ಲೆಲ್ಲ ಅನೀತಿ. ಅಶಾಂತಿ ಹರಡುವುದಿಲ್ಲವೇ? ಆಗಲೇ ಸಡಿಲಗೊಂಡಿರುವ ಆಡಳಿತ ಪೂರಾ ಕಳಚಿದರೆ ಮತ್ತದನ್ನು ಸರಿಪಡಿಸುವಷ್ಟರಲ್ಲಿ ಪ್ರಜೆಗಳ ಗತಿ? ರಾಜ್ಯವನ್ನು ಆರ್ಥಿಕವಾಗಿ, ಆಳ್ವಿಕೆಯಲ್ಲಿ. ರಕ್ಷಣಾಬಲದಿಂದ ಬೇಗ ಒಟ್ಟುಗೂಡಿಸಿಕೊಳ್ಳದಿದ್ದರೆ... ಒಳಗಿನ ರಾಜದ್ರೋಹಿಗಳಿಗೆ. ವಿದ್ರೋಹಿಗಳಿಗೆ ನಾವೇ ಅವಕಾಶ ಕಲ್ಪಿಸಿಕೊಟ್ಟಂತಲ್ಲವೇ? ಧರ್ಮಜನ ಸಂನ್ಯಾಸದ ವಿಚಾರವಾಗಿ ನಗರದಲ್ಲಾಗಲೇ ಗುಲ್ಲೆದ್ದಿರಲೂ ಸಾಕು. ಇವೆಲ್ಲ ರಾಜ್ಯ ರಕ್ಷಣೆಯ ದೃಷ್ಟಿಯಿಂದ ಹಿತಕರವಲ್ಲ. ಇಂದು ಬೆಳಿಗ್ಗೆ ವಿದುರನಲ್ಲಿ ಕೇಳಿದರೇನೆಂದ... 'ತಾಳ್ಮೆ, ತಾಳ್ಮೆ... ಧರ್ಮರಾಯನ ಬದಲಿಗೆ ಬೇರಾರು? ...ವ್ಯಾಸರು ಧರ್ಮರಕ್ಷಕ ಮೂರ್ತಿಯನ್ನು ಯುಧಿಷ್ಠಿರನಲ್ಲಿ ಕಂಡರಿಸಿದ್ದಾರೆ. ಚೇತನ ತುಂಬಬೇಕಷ್ಟೆ. ನೋಡುತ್ತಿರು. ನಿನ್ನ ಮಗನಲ್ಲಾಗುವ ಬದಲಾವಣೆ.. ಹೇಗೂ ವ್ಯಾಸರೇ ಬಂದಿದ್ದಾರಲ್ಲ ಅವರನ್ನೇ ಕೇಳು...' ಎಂದು ಶಾಲು ಒದರಿಕೊಂಡು ಮೇಲೆದ್ದುಬಿಟ್ಟ. ಅವರನ್ನೇ ನೇರ ಕೇಳಿದರೇನು? ಇದುವರೆಗೆ ನನ್ನ ಕಷ್ಟದ ಹೊತ್ತಿನಲ್ಲಿ ಬಂದು ಪರಿಹಾರ ಸೂಚಿಸಿದ ವ್ಯಾಸರ ಬಳಿ ಹೋಗಲೇನಡ್ಡಿ?

ವ್ಯಾಸರು ಕುರು ರಾಜವಾಡೆಗೆ ಬರುವುದೇ ವಿಷಮ ಪರಿಸ್ಥಿತಿ ಉಂಟಾದಾಗ ತಮ್ಮ ಆಶ್ರಮಗಳ ಸಂಘಟನೆ, ಬರವಣಿಗೆ ಕೆಲಸ, ಆರ್ಯೇತರ ಹಳ್ಳಿಗಳಲ್ಲಿ ಅಭಿವೃದ್ಧಿ ಕಾರ್ಯಗಳ ನಡುವೆಯೂ ನಮಗಾಗಿ ರಾಜವಾಡೆಗೆ ಬರುವುದೆಂದರೆ... ಅವರಿಗೆ ನಮ್ಮಲ್ಲಿ ಅಪಾರ ಪ್ರೀತಿ-ವಿಶ್ವಾಸ. ಪಾಂಡುವಿನ ಮಕ್ಕಳನ್ನು ಹಸ್ತಿನಾವತಿಗೆ ಉತ್ತರದಿಂದ ತಂದಾಗ ಅವರೇ ಅಲ್ಲವೇ

ಮಕ್ಕಳನ್ನು 'ಪಾಂಡುಪುತ್ರ'ರೆಂದು ಹೆಸರಿಸಿ ಕುರುವಂಶದಲ್ಲಿ ಭದ್ರಸ್ಥಾನ ಕೊಡಿಸಿದ್ದು. ನಂತರ ಧರ್ಮಜನನ್ನು ಯುವರಾಜನನ್ನಾಗಿ ನೇಮಿಸಲು ಕಾರಣರಾದವರು. ವಾರಣಾವತದ ಕಾಡುಗಳಲ್ಲಿ ಅಲೆದಾಡುತ್ತಿದ್ದಾಗ ಅವರೇ ಸಿಕ್ಕಿ ಏಕಚಕ್ರಕ್ಕೆ ಹೋಗಲು ಸಲಹೆ ಕೊಟ್ಟರು.

ಹಾಗಾಗಿಯೇ ದ್ರೌಪದಿಯ ಸ್ವಯಂವರದ ವೇಳೆಗೆ ಕಾಂಪಿಲ್ಯ ಸೇರಿಕೊಳ್ಳಲು ಸಾಧ್ಯವಾದದ್ದು. ಸ್ವಯಂವರವಾದ ಸಂಜೆ ದ್ರೌಪದಿ ಐದೂ ಜನರನ್ನು ಮದುವೆಯಾಗಲು ಒಪ್ಪಿಸಿದ್ದೂ ವ್ಯಾಸರೇ! ಇಂದ್ರಪ್ರಸ್ಥಕ್ಕೂ ಬಂದು ನವರಾಜಧಾನಿಯನ್ನು ಆಶೀರ್ವದಿಸಿದಿರಲ್ಲ. ರಾಜಸೂಯಯಾಗವಾದಾಗಲೂ ಅವರಿದ್ದು, ಶಿಶುಪಾಲನ ಪ್ರಕರಣ ಕೈಮೀರಿ ಹೋಗದಂತೆ ನೋಡಿಕೊಂಡದ್ದು. ಹದಿಮೂರು ವರ್ಷಗಳ ವನವಾಸದಲ್ಲೂ ಹಲವು ಬಾರಿ ಪಾಂಡವರನ್ನು ಭೇಟಿ ಮಾಡಿ ಸಂತೈಸಿದರಲ್ಲವೇ! ಈಗಲೂ ಸತ್ತವರ ಶ್ರಾದ್ಧಕ್ಕಾಗಿ ಬಂದವರು.. ಎರಡು ವಾರದ ಮೇಲಾಯಿತು.. ಕಷ್ಟ ಸಮಯದಲ್ಲಿ ಹಿರಿಯರಿದ್ದರೆ ಏನೋ ಸಮಾಧಾನ. ಹೆಂಗರುಳಿನ ವ್ಯಾಸರು ನಮ್ಮಲ್ಲಿ ನಿಂತಿರುವುದು ನಮ್ಮ ಪುಣ್ಯವೇ ಸರಿ! ಧರ್ಮಜನಿಗಂತೂ ವ್ಯಾಸರೆಂದರೆ.. ಎಲ್ಲಿಲ್ಲದ ಒಲವು, ಪ್ರೀತಿ, ವಿಧೇಯತೆ!

ಸಾವಿನ ದುಃಖ ನುಂಗಿಕೊಳ್ಳದೆ ಬೇರೆ ದಾರಿಯಿಲ್ಲ. ಚಿಂತೆ ಮಾಡಿ ಉಪಯೋಗವಿಲ್ಲ. ಒಳಗೇ ಕುಳಿತು ಕುದಿಯುವುದಕ್ಕಿಂತ ಹೊರಗೆ ನದೀ ಗಾಳಿಗೆ, ಇಳಿ ಬಿಸಿಲಿಗೆ ಬಂದು ಶುದ್ಧಳಾಗುವುದು ಮೇಲು. ದುಃಖವಾಗಲೀ, ನೋವಾಗಲೀ ಕೋಪ ದ್ವೇಷವಾಗಲೀ ಕೋಣೆಯೊಳಗೇ ಉಳಿದರೆ ಉಮ್ಮಳಿಸಿ ಬರುವುದು. ಅದೇ ಹೊರಗೆ ಆಕಾಶದಡಿ ನೀರ ದಡದಲ್ಲಿದ್ದು ತವಿಸಿಕೊಳ್ಳುವುದು ಎಷ್ಟೋ ಸುಲಭ. ವ್ಯಾಸರಲ್ಲಿ ಮಾತನಾಡಿದರೆ ಮನಸ್ಸು ಇನ್ನೂ ಶುದ್ಧವಾಗುವುದು ಖಚಿತ.

ಅಗೋ! ಬೆಸ್ತರ ಮಕ್ಕಳ ಹಾರಾಟ-ಕೂಗಾಟ, ದೊಡ್ಡ ಆಲದ ಕೆಳಗೆ ಏನೋ ಸಂಭ್ರಮ ನಡೆದಿದೆ. 'ಕಿಟ್ಟಜ್ಜ'ನ ಕೈಲಿ ಅದೇನು? ಮಕ್ಕಳು ಬಾಗಿ ಬಾಗಿ ನೋಡುತ್ತಿರುವುದೇನು? ಓಹೋ! ಮೀನಿನ ಜೋಡಿಗೆ ಮೂಗುತಿ ತೊಡಿಸುವ ಸಂಭ್ರಮ. ಅಜ್ಜ, ಅಜ್ಜ, ಎಲ್ಲರಿಗೂ ಅಜ್ಜ. ಪ್ರಾತಃಕಾಲವೆಲ್ಲ ಅಗ್ನಿಕಾರ್ಯದಲ್ಲಿ, ವೇದಘೋಷ ಪಾಠಪ್ರವಚನದಲ್ಲಿ ವಟುಗಳ ಮುಂದೆ ಧಗಧಗಿಸುವ ವ್ಯಾಸಮಹರ್ಷಿಗಳು ಊಟವಾಗಿ ನೇಸರ ವಾಲುತ್ತಿದ್ದಂತೆ ತಿಂಗಳ ಕತೆಗಾರ ಕಿಟ್ಟಜ್ಜಯ್ಯನಾಗಿ ಬಿಡುತ್ತಾರೆ. ಎಲ್ಲಿಂದ ಪ್ರತ್ಯಕ್ಷವಾಗಿಬಿಡುತ್ತವೋ ಮಕ್ಕಳು-ಬೆಲ್ಲಕ್ಕೆ ಇರುವೆ ಮುತ್ತಿಕೊಳ್ಳುವಂತೆ. ಅಜ್ಜಯ್ಯನ ಸುತ್ತಲೂ ನಗೆ ಹೊನಲು ಅಜ್ಜಯ್ಯನಿಗೆ ತೊಂಬತ್ತು ದಾಟಿದ್ದರೂ ಅರಳು ಹುರಿದಂತೆ ಮಾತಿನ ಮಲ್ಲ, ಕತೆಯ ಮೇಲೆ ಕತೆ-ಕತೆಯ ಮೂಲಕ ನೀತಿ ಬೋಧೆ ಮಾಡುವಲ್ಲಿ ಹುಮ್ಮಸ್ಸು. ಆಯಾ ಪ್ರಾಂತದ ಆಡುಭಾಷೆಯಲ್ಲೇ ಮಕ್ಕಳೊಂದಿಗೆ ಮಾತು. ನಾಡಭಾಷೆ-ಕಾಡುಭಾಷೆ, ಪ್ರಾಣಿ-ಹಕ್ಕಿಪಿಕ್ಕಿ ಭಾಷೆ, ಎಷ್ಟು ಭಾಷೆ ಬಲ್ಲರೋ! ನೀತಿಕತೆಯೊಂದಿಗೆ ಇರಿಸರಿಕೆಯ ರೀತಿ, ಬೇನೆಗೆ ಮದ್ದು ಕೊಡುವ ವೈದ್ಯರೂ ಕೂಡ ಅಜ್ಜ. ಬೆಸ್ತರೊಂದಿಗೆ ಬೆಸ್ತನಾಗಿ, ರೈತನೊಂದಿಗೆ ರೈತನಾಗಿ ಬೇಡರಲ್ಲಿ ಬೇಡನಂತೆ, ಕ್ಷತ್ರಿಯ ಕುಮಾರರೊಂದಿಗೆ ಅಂತೆಯೇ ಬೆರೆತುಹೋಗುವ ವ್ಯಾಸರು ಸರ್ವವ್ಯಾಪ್ತರು. ತಿಂಗಳ

ಬೆಳಕಿದ್ದರಂತೂ ಸರಿರಾತ್ರಿಯವರೆಗೆ ಅವರ ಸುತ್ತ ಮಂದಿ–ಹಾಡು, ಕತೆ ಮಕ್ಕಳ ಕುಣಿತ ಇದ್ದದ್ದೇ. ಅಜ್ಜಯ್ಯನಿಗೂ ಮರುಪ್ರಾಯ. ಮಕ್ಕಳೇ ಏನು, ಎಲ್ಲ ವಯಸ್ಸಿನವರನ್ನೂ ಆಕರ್ಷಿಸುವ ಕೃಷ್ಣದ್ವೈಪಾಯನ ವ್ಯಾಸರು ನಡೆದಾಡುವ ಆನಂದದ ಕಾರಂಜಿ. ಇವರ ಬಳಿಗೆ ಸಂದೇಹ–ಸಂಶಯ, ದುಃಖ–ಸಂಕಟ, ಜಾಡ್ಯ–ಜಡರು ಏನೇ ಸುಳಿದರೂ ತೊಳೆದುಹೋಗುತ್ತವೆ–ಕೊಚ್ಚಿಹೋಗುತ್ತವೆ.

ಮಕ್ಕಳು ತಿರುಗಿದರು..ತಾತ ವ್ಯಾಸರು ಬಗ್ಗಿದ್ದವರು ಮಕ್ಕಳು ಸರಿದದ್ದು ತಿಳಿದು ಕತ್ತೆತ್ತಿ...

'ಓ ಮಗೂ ಕುಂತೀ..'

ಕೈನೀಡಿ ಬಳಿ ಕರೆವ ರೀತಿ.. ಅರವತ್ತೈದರ ಮುದುಕಿಯನ್ನು ಕರೆವಲ್ಲಿ ಮಾತಿನ ಸಲುಗೆಯಿದ್ದರೂ ಧ್ವನಿಯಲ್ಲಿ ತುಂಬಿದ ಗೌರವ. ಸಕಲ ಜೀವರಾಶಿಗೇ ಗೌರವ ಕೊಡುವ ತಾತ... ಬಳಿ ಹೋಗಿ ಮಂಡಿಯೂರಿ ಅವರ ಪಾದ ಹಿಡಿದ ಕೂಡಲೇ ಅವರ ಬಲಗೈ ನನ್ನ ನೆತ್ತಿ ಸವರುವುದು ಖಚಿತ.

'ಆ್ಞ... ಹ್ಞಾ...'

ಅವರ ಅಂಗೈಯಿಂದ ವಾತ್ಸಲ್ಯದ ಮಹಾಪೂರವೇ ನನ್ನೊಳಗಿಳಿದು ಬರುತ್ತಿದೆ.. ಅವರ 'ಆ್ಞ.. ಹ್ಞಾ.' ನನಗೆ ಮಾತನಾಡಲು ಪ್ರೋತ್ಸಾಹ.. ಎಷ್ಟು ಆಪ್ಯಾಯಮಾನ ಈ ಮಾತಿಲ್ಲದ ರೀತಿ!

ಒಂದೇ ಕ್ಷಣದಲ್ಲಿ ಎಂತಹ ಬದಲಾವಣೆ! ಅವರ ಹಸ್ತ ತಲೆ ಸವರಿದಾಗ ಶಾಂತಗೊಂಡ ಶರೀರ. ಅಂತೆಯೇ ಅವರ ವಾತ್ಸಲ್ಯಪೂರ್ಣದೃಷ್ಟಿಯಿಂದ ಮನಸ್ಸೂ ಸ್ಥಿರವಾಗುವುದು. ದೇಹ ಮನಸ್ಸುಗಳನ್ನು ಸಮಾಧಾನಿಸಿದ ನಂತರವೇ ಬುದ್ಧಿಯ ಕಡೆ ಅವರ ಗಮನ. ನಮ್ಮ ಪ್ರಶ್ನೆಗೆ ಅವರ ಸರಳ ಉತ್ತರ ಅಥವಾ ಸಲಹೆಗಳು. ಬುದ್ಧಿಯನ್ನು ಸ್ಥಿಮಿತಕ್ಕೆ ತಂದು ಅದರಲ್ಲಿ ವಿಚಾರಮಂಥನವಾಗುವಂತೆ ಪ್ರಚೋದಿಸುವ ಚೈತನ್ಯಪೂರ್ಣ ಮಾತು. ಪ್ರಶ್ನೆ ಕೇಳುವ ಅಜ್ಞಾನಿಗಳಲ್ಲೂ ಗೌರವಯುತ ಸಂಭಾಷಣೆ. ಇಂತಹ ಸೌಜನ್ಯಶೀಲ ವಿಶಾಲ ಹೃದಯಿಯ ಸುತ್ತ ಲೋಕವೇ ಮುಕುರಿಕೊಂಡಿರುವುದು ಸಹಜವೇ!

"ತಾತ.. ಧಾರ್ತ್ಯರಾಷ್ಟ್ರರೊಂದಿಗೆ ಅನೇಕ ಹಿರಿಯ ಕಿರಿಯ ಅಭಿಷಿಕ್ತ ರಾಜರಷ್ಟೇ ಅಲ್ಲದೆ ಹದಿನೆಂಟು ಅಕ್ಷೋಹಿಣಿ ಸೈನ್ಯದ ಜೀವಹಾನಿಯ ಅಪಾರ ಬೆಲೆ ತೆರಬೇಕಾದ ಆರ್ಯಧರ್ಮವಾದರೂ ಎಂಥದು? ಇಷ್ಟೆಲ್ಲ ಬೆಲೆ ತೆತ್ತು ತಂದ ರಾಜ್ಯಭಾರ ಈಗ ಬೇಡವೆನ್ನುತ್ತಿರುವ ಧರ್ಮಜನದು ಯಾವ ಧರ್ಮ?... 'ಧರ್ಮ' ಎಂದರೇನು ತಾತ?"

"ತಾಯ ಕರುಳಲ್ಲವೇ..ಕಟ್ಟುವ ಸ್ವಭಾವ... ಹಾನಿ ಸಹಿಸದು.." ಎಂದ ಬಾಯಿ ಮೆಲುನಗೆ ನಕ್ಕರೂ ಕಂಗಳಲ್ಲಿ ಕರುಣೆ ಮಡುಗಟ್ಟಿತ್ತು. ನನ್ನ ಪ್ರಶ್ನೆ ನೆನಪಿಸಿದ ಜೀವಹ್ರಾಸಕ್ಕೆ ಅವರ ಅಂತಃಕರಣ ಮಿಡುಕಿತ್ತು.

"ತಾಯೀ..ಧರ್ಮದ ಅರ್ಥ ಬಹಳ ವ್ಯಾಪಕವಾದುದು. ನೀನು ಯಾವ ನಿಟ್ಟಿನಿಂದ ಕೇಳಿದೆಯೋ ಅದಕ್ಕೆ ಉತ್ತರವಾಗಿ ನನಗೆ ತಿಳಿದಷ್ಟು ಹೇಳುವೆ. ಯಾವುದರಿಂದ ಅಸ್ತಿತ್ವ ಸಾಧ್ಯವಾಗುವುದೋ ಅದುವೇ ಧರ್ಮ. ಯಾವುದನ್ನು ಕಾಯಾ ವಾಚಾ ಮನಸಾ ಆಚರಿಸಿದರೆ ಸಮಾಜ ಕ್ಷೇಮವಾಗಿರುವುದೋ, ಯಾವುದನ್ನು ತಿಳಿದು ಅದರ ಬೆಳಕಿನಲ್ಲಿ ಕಾರ್ಯ ನಿರ್ಧರಿಸಿದರೆ ಸಮಾಜದ ಏಳ್ಗೆಯಾಗುವುದೋ ಅದುವೇ ಧರ್ಮ. ಸಮಾಜದ ಕ್ಷೇಮ ಅಥವಾ ಅಭಿವೃದ್ಧಿಗೆ ಹಾನಿ ತರುವುದೆಲ್ಲ ಅಧರ್ಮ. ಸಮಾಜಕ್ಕೆ ಹಾನಿಕಾರಕ ವಸ್ತು–ವ್ಯಕ್ತಿ–ವಿಚಾರ–ವ್ಯವಹಾರದ ವಿನಾಶ ಧರ್ಮವಾಗುತ್ತದೆ. ಉಂಗುಷ್ಠದ ಗಾಯ ವ್ರಣವಾಗಿ ಮಾಂಸವೇ ಕೊಳೆಯುತ್ತ ಕರಗುತ್ತ ಇಡೀ ಶರೀರಕ್ಕೇ ವ್ಯಾಪಿಸುವಂತಾದರೆ ಶರೀರದ ಅಸ್ತಿತ್ವಕ್ಕಾಗಿ ಪಾದವನ್ನೇ ಕತ್ತರಿಸುವುದು ಧರ್ಮವಾಗುತ್ತದೆ. ಧಾರ್ತ್ಯರಾಷ್ಟ್ರರೆಂಬ ಕೊಳೆತ ಮಾಂಸವನ್ನು ಕತ್ತರಿಸಿ ತೆಗೆವಾಗ ಜೊತೆಯಲ್ಲೇ ಅದನ್ನು ಹೊಚ್ಚಿರುವ ಚರ್ಮ ಹಿಡಿದಿರುವ ಮೂಳೆಗಳನ್ನೂ ಕತ್ತರಿಸಿ ಬಿಸುಡುವಂತೆ ಈ ಹದಿನೆಂಟು ಅಕ್ಷೋಹಿಣಿ ಸೇನೆಯ ನಾಶ ಇಂದಿನ ಪರಿಸ್ಥಿತಿಯಲ್ಲಿ ಅನಿವಾರ್ಯವಾಯ್ತು.

ಆತತಾಯಿಗಳ ಏಡಿಹಿಡಿತದಿಂದ ಸಮಾಜವನ್ನು ಬಿಡಿಸಿಕೊಂಡರೆ ಹದಿನೆಂಟು ಏಕೆ ನೂರೆಂಟು ಅಕ್ಷೋಹಿಣಿ ಸೇನೆಯನ್ನು ಕಟ್ಟಬಹುದು. ನ್ಯಾಯ ನೀತಿಗಾಗಿ ಪ್ರಾಣ ಕೊಡುವ ಸೈನಿಕರನ್ನು ಸೃಷ್ಟಿಸಬಹುದು. ಅಂತಹ ನ್ಯಾಯ ಸಮ್ಮತ ರಾಜ್ಯ–ಪ್ರಜೆ ತಾನೇ ನೀನೂ ಕೇಳುತ್ತಿರುವುದು.

ಮಗೂ.. ನನ್ನ ಅಭಿಪ್ರಾಯದಂತೆ, ನಿನ್ನ ಪ್ರಶ್ನೆಯ 'ಆರ್ಯ' ಪದದ ಬದಲಿಗೆ 'ಲೋಕ' ಅಥವಾ 'ವಿಶ್ವ' ಇಡು. ಇಲ್ಲವೇ ಇನ್ನೂ ಮುಂದುವರೆದು ನಿನ್ನ ಮನದಲ್ಲಿರುವ 'ಆರ್ಯ' ಪದದ ಅರ್ಥವನ್ನು ಬೆಳೆಸಿ ಯಾವುದೆಲ್ಲ ಲೋಕಕ್ಕೆ ಹಿತ, ಕ್ಷೇಮ, ಯೋಗ್ಯವಾಗಿರುವುದೋ ಅದು 'ಆರ್ಯ' ಎಂಬ ಅರ್ಥವ್ಯಾಪ್ತಿ ಕೊಡು. ಆಗ ನೀನು ದೊಡ್ಡವಳಾಗುತ್ತೀಯೆ. ಲೋಕಮಾತೆಯಾಗುತ್ತೀಯೆ. ಅದೇ ನನ್ನ ಆಶಯ.

ಮಗು ಕುಂತೀ.. ಪ್ರಕೃತಿದತ್ತ ಪ್ರಾಣಿಸಹಜ ಸ್ವಹಿತ ಪ್ರವೃತ್ತಿಗಳನ್ನು ಮೆಟ್ಟಿ ನಿಂತು ಪರರ ಹಿತಕ್ಕಾಗಿ ದುಡಿಯುವ ಅವಕಾಶ ಕೇವಲ ಮಾನವನಿಗೆ ಮೀಸಲು. ಇದರಿಂದ ಸಿಗುವ ಆನಂದ–ಸಂತೋಷವಲ್ಲ–ಆನಂದ–ತೃಪ್ತಿ ಅದೂ ಕೇವಲ ಮಾನವನಿಗೆ ಮಾತ್ರ. ಇದಕ್ಕಾಗಿ ಚಿಕ್ಕಂದಿನಿಂದಲೇ ಶ್ರಮಿಸಬೇಕು. ಧರ್ಮಜ್ಞಾನಿ ಗುರುವಿನಲ್ಲಿ ನಿಷ್ಠೆಯಿಂದ ಧರ್ಮ ಶಾಸ್ತ್ರಗಳ ಅಧ್ಯಯನ ಅಭ್ಯಾಸ ಮಾಡಬೇಕು. ಅಭ್ಯಾಸ ಮಾಡಿದ ರೀತಿ–ನೀತಿಯನ್ನು ಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು. ಅನುಷ್ಠಾನದಿಂದ ಪ್ರಾಣಿ ಸಹಜ ಪ್ರವೃತ್ತಿಗಳು ಕ್ಷೀಣಿಸಿ ಬುದ್ಧಿ ಮನಸ್ಸು ತಿಳಿಯಾಗುವುದು. ಯಾವುದು ಎಲ್ಲರಿಗೂ ಹಿತ–ಯೋಗ್ಯ ಎಂಬ ಅರಿವು ವಿವೇಕ ಮೂಡುವುದು. ಈ ಅರಿವಿನ ಬೆಳಕಿನಲ್ಲಿ ಮಾಡಿದ ಕೆಲಸವೆಲ್ಲವೂ ಲೋಕಹಿತ ಕಾರ್ಯ ವಾಗುವುದು. ಬದುಕಿಗೆ ಒಂದು ಘನಧ್ಯೇಯವಿಟ್ಟು ಅದರಲ್ಲಿ ತನ್ನೆಲ್ಲವನ್ನೂ ಕೇಂದ್ರೀಕರಿಸುವುದೇ ಲೋಕಸಂಗ್ರಹಕಾರ್ಯ. ನನ್ನ ದೃಷ್ಟಿಯಲ್ಲಿ ಇಂತಹ ಲೋಕ ಸಂಗ್ರಹಕಾರ್ಯ ಮಾಡುವವನೇ ಮಾನವ. ಅವನಾಡುವ ಉಸಿರೂ ಕೂಡ ಲೋಕಹಿತಕ್ಕಾಗಿ ಎಂದಾದಾಗ ಅವನು ಸಂಪೂರ್ಣ

ಮಾನವ. ಅಧರ್ಮವನ್ನು ನಾಶಮಾಡುವ ಶಕ್ತಿ ಧರ್ಮವನ್ನು ಎತ್ತಿ ಹಿಡಿಯುವ ಶಕ್ತಿಯಿರುವುದು ಸಂಪೂರ್ಣ ಮಾನವನಲ್ಲಿ ಮಾತ್ರ, ಅವನು ಮಾಡುವುದೆಲ್ಲ ನಮ್ಮ ಪೂರ್ವಜರು ಋಷಿಗಳು ತೋರಿಸಿದ ಆರ್ಷೇಯ ಧರ್ಮ, ಮಾನವೀಯ ಧರ್ಮ ಆರ್ಯಧರ್ಮ... ನನಗೆ ತೋರುವಂತೆ ಆರ್ಯ ಎಂದರೆ ಸಂಸ್ಕಾರಗೊಂಡ... ಪಶುತ್ವವನ್ನು ಕಳೆದುಕೊಂಡ-ಮಾನವೀಯನಾದ.. ಎಂಬ ಅರ್ಥ ಕೊಡುವ ಗುಣವಾಚಕ ಪದ. ಕೇವಲ ಸ್ವಹಿತಚಿಂತೆ ಮಾಡುವವರೆಲ್ಲ ಇನ್ನೂ ಪಶು ಸಮಾನರಷ್ಟೆ."

"ತನ್ನೆಲ್ಲ ಪ್ರಕೃತಿ ಸಹಜ ಬೇಕು ಬೇಡಗಳನ್ನು ಅಳಿಸಿದ ಸಂಪೂರ್ಣ ಮಾನವ ಸಾಧ್ಯವೇ ತಾತ? ..ನೀವು ಕಂಡಿದ್ದೀರಾ...?"

"ಕೃಷ್ಣವಾಸುದೇವ. ಲೋಕಹಿತವನ್ನು ಮಾಡುವ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಮೂರು ಸೇರಿವೆ ಅವನಲ್ಲಿ... ಲಕ್ಷ ಲಕ್ಷ ಜನರನ್ನು ತಿದ್ದುವುದಕ್ಕೆ ವಾಸುದೇವನಂತಹ ಒಬ್ಬ ಮಾನವ ಸಾಕು."

"ಕೃಷ್ಣನಲ್ಲಿ ಪ್ರವೃತ್ತಿಗಳೇ ಇಲ್ಲವೇ? ಬೇಕು ಬೇಡಗಳಿಲ್ಲವೇ?..."

"ನೀನೇ ಯೋಚಿಸು, ನಿನ್ನಳಿಯನ ಚರ್ಯೆ ಗಮನಿಸು. ನಿನಗೇ ತಿಳಿವುದು..."

"ತಾತ ನೀವೆಂದಂತೆ ಸಂಪೂರ್ಣ ಮಾನವನಾದರೆ ಕೃಷ್ಣನೇಕೆ ಅರ್ಜುನನನ್ನು ಸೇರಿಸಿಕೊಂಡು ಖಾಂಡವವನವನ್ನು ಸುಟ್ಟುರುಹಿದ? ಅದರಲ್ಲಿದ್ದ ಜೀವರಾಶಿಯನ್ನೇಕೆ ನಾಶಮಾಡಿದ? ಅದು ಲೋಕಹಿತವೇ?..."

"ತಾಯಿಯ ಕೋಪ ಮೂರು ದಶಕಗಳ ನಂತರವೂ ಆರಿಲ್ಲವೆಂದಾಯ್ತು. ಹೆಂಗರುಳಿನ ಮಿಡಿತದ ನವುರು-ಇರಬೇಕು. ಪ್ರಕೃತಿ ಮಾತೆ ಕಟ್ಟುವ ಜಗತ್ತಿಗೆ ಪುರುಷ ಕಟ್ಟುವ ಸಮಾಜ ಏನೇ ಘಾಸಿ ಮಾಡಿದರೂ ಅವನೇ ಹೊಣೆಗಾರ. ಸ್ತ್ರೀಗೆ ಅವನನ್ನು ಪ್ರಶ್ನಿಸುವ ಹಕ್ಕುಂಟು. ಅಂದು ಕಾಡಿಗಾದ ನಷ್ಟ ತುಂಬುವರಾರೆಂದು ಕಳಕಳಿಸಿದ ಸ್ತ್ರೀಚೇತನ ಜಗದ್ಧಾತ್ರಿ ಇಂದು ಯುದ್ಧದಿಂದ ನಾಡಿಗಾದ ನಷ್ಟದ ಬಗ್ಗೆ ಉತ್ತರ ಕೇಳುತ್ತಿದ್ದಾಳೆ. ಸಾಧುಮಗಳೇ ಸಾಧು ಸಾಧು! ಹೆಣ್ಣುಮಕ್ಕಳಲ್ಲಿನ ಈ ಗುಣವೇ ನನ್ನನ್ನು ನತಮಸ್ತಕನಾಗಿಸುವುದು. ಸಮಾಜದ 'ಧರ್ಮದರ್ಶಿ' ಎನಿಸಿಕೊಂಡವನಾಗಿ ಸಮಂಜಸ ಉತ್ತರ ಕೊಡಬೇಕಾದವನು ನಾನು. ಪ್ರಯತ್ನಿಸುತ್ತೇನೆ.

ಕುರುರಾಜ್ಯದಲ್ಲಿ ಕ್ಷಾತ್ರ ತೇಜಸ್ಸು ಭೀಷ್ಮರ ಯತ್ನದಿಂದಾಗಿ ಇದ್ದಿತಾದರೂ ತೇಜಸ್ಸು ಕ್ಷೀಣಿಸುತ್ತಿದ್ದುದು ಚಿಂತೆಗೆಡೆಮಾಡಿತ್ತು. ಧರ್ಮನಂದನನಲ್ಲಿ ಧರ್ಮತೇಜಸ್ಸಿದ್ದರೂ ಅದಕ್ಕೆ ಬೆಂಬಲವಾಗಿ ಕ್ಷಾತ್ರವರ್ಚಸ್ಸು ಬೇಕಾಗಿತ್ತು. ಅದನ್ನು ಸಾಧಿಸಲೆಂದು ಭೀಷ್ಮರು ಧರ್ಮನಂದನನಿಗೆ ಖಾಂಡವಪ್ರಸ್ಥ ಕೊಟ್ಟು, ಧೃತರಾಷ್ಟ್ರ ದುರ್ಯೋಧನ ಶಕುನಿಗಳ ಕಿರುಕುಳವಿಲ್ಲದೆ ಧರ್ಮರಾಜ್ಯವೊಂದನ್ನು ಕುರುವಂಶಸ್ಥನಾಗಿ ಕಟ್ಟಿ ಬೆಳಸುವಂತೆ ಕಳುಹಿಸಿದರು. ಅವನನ್ನನುಸರಿಸಿ ಹೊಸ ಊರು ನೋಡಬಂದವರು ನೆಲೆ ನಿಂತರು. ನಂತರ ಬಾಂಧವರನ್ನು ಹಸ್ತಿನಾವತಿಯಿಂದ

ಕರೆಸಿಕೊಂಡರು. ಊರು-ಜನ ಬೆಳೆಯಿತು. ಸುತ್ತಲಿನ ಭೂಮಿ ಉತ್ತು ಬಿತ್ತುವುದಕ್ಕೆ ಹಸನು ಮಾಡಬೇಕಾಯಿತು. ಕಾಡನ್ನು ಒತ್ತರಿಸಿ ಹೊಲಗದ್ದೆ ಮಾಡಿಕೊಳ್ಳುವುದು ನಿನಗೂ ಗೊತ್ತು. ಖಾಂಡವಪ್ರಸ್ಥ ಬೆಳೆಯುತ್ತಿದ್ದ ವೇಗದಲ್ಲಿ ಕೃಷಿಭೂಮಿ ಸಾಲದಾಗಿ ಖಾಂಡವವನವನ್ನು ನಾಡು ಕಬಳಿಸಿತು. ನೀನು ಅಂದು ಕೃಷ್ಣ ಅರ್ಜುನ ಇಬ್ಬರನ್ನೂ ಖಂಡಿಸಿದ್ದು ನನಗೂ ತಿಳಿಯಿತು. ಕಾಡನ್ನು ಸುಡುವುದೇ ಸರಿಯಲ್ಲ. ಓಡಿಹೋಗುತ್ತಿದ್ದ ವನ್ಯಪ್ರಾಣಿಗಳನ್ನು ಕಾಡುಜನರನ್ನು ಬಿಡದೆ ಕೊಂದದ್ದೇಕೆ ಎಂದಲ್ಲವೇ ನಿನ್ನ ಖೇದ! ಇಬ್ಬರದೂ ಉಕ್ಕುವ ಯವ್ವನದ ಅತಿಯಾದ ಉತ್ಸಾಹ! ಭಾಷೆ ತಿಳಿಯದೆ ಕಾಡುಜನರೇನೆಂದರೋ.. ಇವರೇನು ಹೆದರಿಸಿದರೋ. ಒಟ್ಟಿನಲ್ಲಿ ಜೀವಹಾನಿಯಾಯಿತು. ಓಡಿಹೋಗುವ ಪ್ರಾಣಿಗಳನ್ನು ಹಾಗೇ ಬಿಟ್ಟರೆ ಹೊಲಗದ್ದೆಗಳಿಗೆ ನುಗ್ಗುವುವೆಂದು ಸಾಯಿಸಿದರಂತೆ. ನನ್ನಲ್ಲಿ ಹೇಳಿಕೊಂಡರು. ಲೋಕಸಂಗ್ರಹಕಾರ್ಯಕ್ಕೆ ಬಾಹುಬಲ ಒಂದೇ ಸಾಲದು. ಅದಕ್ಕೆ ಹೊಂದಿಸಿದಂತೆ ನೈತಿಕ ಬಲವೂ ಬೇಕು. ಆಗ ಮಾತ್ರ ಸಂಗ್ರಹಕಾರ್ಯ. ವಿಶ್ವಪ್ರಜ್ಞೆಯೂ ಬೇಕು. ಕ್ಷಾತ್ರತೇಜಸ್ಸು ಧರ್ಮಪ್ರಜ್ಞೆ ಬ್ರಹ್ಮವರ್ಚಸ್ಸು ಮೂರೂ ಸೇರಿದಾಗ ಮಾತ್ರ ಲೋಕಸಂಗ್ರಹ. ಮತ್ತೊಂದು ಸಂಗತಿ. ಕಾಡು ಜನರಿಗೆ ಸೂಕ್ತ ಪರಿಹಾರ ಧನವಾಗಲೀ ಸ್ಥಳವಾಗಲೀ ಕೊಡಲು ಎಲ್ಲಿತ್ತು? ರಾಜ್ಯಬೊಕ್ಕಸವಿನ್ನೂ ಬೆಳೆದಿರಲಿಲ್ಲ. ಬೇರೆ ಕಾಡಿಗೆ ಬಿಡಲು ಧೃತರಾಷ್ಟ್ರ ಒಪ್ಪಬೇಕಲ್ಲ! ಇಬ್ಬರೂ ಸೇರಿ ನಿರ್ಣಯಿಸಿದರು. ಕಾಡನ್ನು ಸುಟ್ಟರು. ಮುಂದೆಂದೂ ಇಂತಹ ಆತುರದ ನಿರ್ಣಯ ತೆಗೆದುಕೊಳ್ಳಬಾರದೆಂದು ಅವರಿಗೇ ಅರ್ಥವಾಯಿತು. ಆಗಲೇ. ಅವರ ಪರವಾಗಿ ಇಂದು ಪೃಥೆಯಲ್ಲಿ ಪೃಥಿವಿಯಲ್ಲಿ ಕ್ಷಮೆ ಬೇಡುತ್ತೇನೆ. ಸಮಾಧಾನವಾಯಿತೇ ಮಗಳೇ? ಬೃಹತ್ ಧ್ಯೇಯಕ್ಕಾಗಿ ಅಲ್ಪಸ್ವಂತವನ್ನು ನಷ್ಟಮಾಡುವುದು ಅಧರ್ಮವಲ್ಲವೆನಿಸುವುದು. ಆದದ್ದನ್ನು ಮರೆತುಬಿಡು ತಾಯಿ..."

"ನೀವೆಂದಂತೆ ಕೃಷ್ಣವಾಸುದೇವ ಸಂಪೂರ್ಣಮಾನವನೆಂದರೆ ಚಕ್ರವರ್ತಿಯ ಸ್ಥಾನಕ್ಕೆ ಒಲ್ಲದ ಧರ್ಮಜನ ಬದಲಿಗೆ ಕೃಷ್ಣನನ್ನೇ ತರಬಾರದೇ?"

"ರಥವನ್ನೋಡಿಸಲು ಜಾತಿಕುದುರೆಯೇ ಬೇಕು. ಹೊರೆ ಸಾಗಿಸುವ ಗಾಡಿಗೆ ಎತ್ತೇ ಬೇಕು. ಅಂತೆಯೇ ಲೋಕಸಂಗ್ರಹಕ್ಕಾಗಿ, ಧರ್ಮಸ್ಥಾಪನೆಗಾಗಿ ಕೃಷ್ಣವಾಸುದೇವ ಯಾವುದೇ ನಿಯತ ಹೊಣೆಯಿಂದ ಬಿಡುವಾಗಿರಬೇಕು. ವಿಸ್ತರಿತ ರಾಜ್ಯಾಡಳಿತದ ಹೊರೆ ಹೊರಲು ಧರ್ಮಪುಂಗವ ಯುಧಿಷ್ಠಿರನೇ ಚಕ್ರವರ್ತಿಯಾಗಬೇಕು. ಇದುವೇ ಸಮಂಜಸ. ಮಗೂ ಸಂಪೂರ್ಣ ಮಾನವನೆಂದರೆ ಸಮಸ್ತ ಲೋಕಕ್ಕೆ ಸೇರಿದವನು. ಅವನ ಅವಶ್ಯಕತೆ ಲೋಕಕ್ಕೇ ಇದೆ. ಅವನ ಕಾರ್ಯಕ್ಷೇತ್ರ ರಾಜ್ಯಾಡಳಿತಕ್ಕಿಂತ ಬಹಳ ಬಹಳ ವಿಸ್ತಾರವಾದದ್ದು. ಅವನನ್ನು ಕೇವಲ ಚಕ್ರವರ್ತಿಪದಕ್ಕೆ ಸೀಮಿತಗೊಳಿಸುವುದು ಸರಿಯೇ? ಲೋಕಸಂಗ್ರಹದ ಮೊದಲ ಹಂತ ಧರ್ಮ ಸ್ಥಾಪನೆ. ಚಕ್ರವರ್ತಿಯ ರಾಜ್ಯದಲ್ಲಿ ಆಡಳಿತದಲ್ಲಿ ಪ್ರಜಾಹಿತದ ರೀತಿನೀತಿ ಸುಸ್ಥಿರವಾಗಬೇಕು. ಈ ಸುಸ್ಥಿರ ರಾಜ್ಯವನ್ನಾಧರಿಸಿ ಲೋಕಸಂಗ್ರಹಕಾರ್ಯ ಅಂದರೆ ಎರಡನೆಯ ವ್ಯಾಪಕ ಹಂತ. ಇಲ್ಲಿ ಕೇವಲ ಕುರು ರಾಜ್ಯವಷ್ಟೇ ಅಲ್ಲ ಕೇವಲ ಮಾನವರಷ್ಟೇ ಅಲ್ಲ-ಸಕಲ ಪ್ರಾಣಿಗಳ-ಕೀಟಗಳಿಗೂ ಸಹ ಅಷ್ಟೇ ಅಲ್ಲ ತರುಲತೆಗಳ-ಸಮಸ್ತ ಜೀವರಾಶಿಗೇ-ಅಷ್ಟೇ ಅಲ್ಲ-ನದೀನಾಲೆಗಳು; ಬೆಟ್ಟ ಪರ್ವತಗಳು; ನಿಂತ ನೆಲ; ನೆತ್ತಿಯ ಆಕಾಶ-ಎಲ್ಲವೂ ಶುಭ್ರ

ಭದ್ರವಾಗಿ ಹಿತವಾಗಿರಬೇಕು. ಈ ಕ್ಷೇಮದ ಹಿತದ ಮಡಿಲಲ್ಲಿ ಹತ್ತು ಹಲವು ಜನಾಂಗ-ಸಂಸ್ಕೃತಿ ಭಾಷೆ, ವಿಜ್ಞಾನ ಪರಂಪರೆ ವೈವಿಧ್ಯತೆ ಸಾಧಿಸುವಂತಾಗಬೇಕು. ವೈವಿಧ್ಯತೆಯಲ್ಲಿ ಏಕಸೂತ್ರ ವಿಶ್ವಮೈತ್ರಿ ಕಂಡುಕೊಳ್ಳಬೇಕು. ಭಾವೈಕ್ಯತೆಯಿರಬೇಕು. ಅದುವೇ ಲೋಕಸಂಗ್ರಹ ಕೃಷ್ಣವಾಸುದೇವನ ಕಾರ್ಯಕ್ಷೇತ್ರ!

ನೀನು ಹೇಳುವಂತೆ ವಾಸುದೇವನನ್ನು ಚಕ್ರವರ್ತಿ ಮಾಡಿದರೆ ಅವನ ನಂತರ ವೃಷ್ಣಿಯೊಬ್ಬ ಪಟ್ಟಕ್ಕೆ ಬರುವುದು ಅನಿವಾರ್ಯ. ವೃಷ್ಣಿಕುಲ ಈ ಪದವಿಯನ್ನು ಬಿಟ್ಟುಕೊಡಲಾರದು. ಯಾವ ವೃಷ್ಣಿಯಲ್ಲೂ ಧರ್ಮತೇಜಸ್ಸಾಗಲೀ ಪ್ರಜಾಪ್ರೇಮವಾಗಲೀ ಕುರುವಂಶದಲ್ಲಿರುವಂತೆ ಇಲ್ಲ. ವೃಷ್ಣಿಗಳು ಹೆಚ್ಚು ರಾಜಸಿಕ ಮನೋಭಾವದವರು. ಮುಂದೆ ಬರುವ ಕುರುರಾಜರು ಧರ್ಮನಂದನನಂತೆಯೇ ಹೆಚ್ಚು ಸಾತ್ವಿಕರು, ಶಾಂತಿಪ್ರಿಯರು ಧರ್ಮಲೋಪ ಆಗದಂತೆ ರಾಜ್ಯವಾಳುವರೆನಿಸುವುದು. ಕುರುವಂಶದಲ್ಲಿ ಅನೇಕ ರಾಜರ್ಷಿಗಳು ಪಟ್ಟಕ್ಕೆ ಬಂದು ರಾಜ್ಯಾಡಳಿತದ ರೀತಿಯನ್ನು ರಚಿಸಿ, ಆಗಾಗ್ಗೆ ವಿಮರ್ಶಿಸಿ ಸೂಕ್ತ ಕಂಡಲ್ಲಿ ಬದಲಾವಣೆ ತಂದು ಉತ್ತಮಗೊಳಿಸಿರುವುದು ಈಗಿನ ಪರಿಸ್ಥಿತಿಯಲ್ಲಿ ಬಹಳ ಅವಶ್ಯಕ. ಹೆಚ್ಚು ಯೋಗ್ಯನಾದರೆ ಕಿರಿಯವ ಪಟ್ಟಕ್ಕೆ ಬರುವುದು; ಮಕ್ಕಳಿಲ್ಲದಿದ್ದರೆ ಅಥವಾ ಅಯೋಗ್ಯರಾದರೆ ಪ್ರಜೆಗಳಲ್ಲಿಯೇ ಯೋಗ್ಯರಾದವರನ್ನು ಆಯ್ಕೆಮಾಡಿ ಪಟ್ಟಕ್ಕೆ ತರುವ ವಿವೇಕಯುತ ಪದ್ಧತಿ ಕುರುವಂಶದ ಚರಿತ್ರೆಯಲ್ಲಿದೆ.

ಇದೆಲ್ಲವನ್ನೂ ಗಮನಿಸಿಯೇ ಧರ್ಮನಂದನ ಮತ್ತವನ ಅನುಜರನ್ನು ಧರ್ಮಮಾರ್ಗಿಗಳಾಗುವಂತೆ ಚಿಕ್ಕಂದಿನಿಂದಲೂ ತಿದ್ದುವುದು ನಡೆದಿದೆ. ಧರ್ಮಶಾಸ್ತ್ರಗಳ ಪುನರಭ್ಯಾಸವೂ ನಡೆದೇ ಇದೆ. ಅವರೆಂದೂ ಅಧರ್ಮಕಾರ್ಯ ಮಾಡಿಲ್ಲ. ಧರ್ಮಮಾರ್ಗ ಬಿಟ್ಟಿಲ್ಲ. ಈ ಸಾಧನೆಯಲ್ಲಿ ನಿನ್ನ ಸಹಕಾರವೂ ಬಹಳಷ್ಟಿದೆ. ಪಾಂಡವರ ತಾಯಿಗೆ ಆರ್ಯಾವರ್ತ ಚಿರಋಣಿ. ಸಮಾಜದ ಹೊರಗಿದ್ದು ಧರ್ಮರಕ್ಷಣೆಯ ಭಾರ ಹೊರುವ ಶಕ್ತಿ ಕೃಷ್ಣವಾಸುದೇವನಾದರೆ, ಸಮಾಜದ ಒಳಗೆ ಅದರ ಮೊದಲ ಪ್ರಜೆಯಾಗಿ ಧರ್ಮರಕ್ಷಣೆಯ ಭಾರ ಹೊರುವ ತಾಳ್ಮೆಯೇ ಧರ್ಮನಂದನ-ಅವನ ತೋಳ್ಬಲವಾಗಿ ಅನುಜರು.

ಇದನ್ನೆಲ್ಲ ಯೋಚಿಸಿಯೇ ಹದಿಮೂರು ವರ್ಷ ತಡವಾದರೂ ಧರ್ಮಯುತವಾಗಿ ಧರ್ಮನಂದನನೇ ಚಕ್ರವರ್ತಿಯಾಗಲೆಂದು ನಮ್ಮೆಲ್ಲರ ಆಶಯ. ಕಾರ್ಯ ಕೈಗೂಡುವ ವೇಳೆಯಲ್ಲಿ ಧರ್ಮನಂದನನಲ್ಲಿ ನಿನ್ನ ತಾಳ್ಮೆ-ನಂಬಿಕೆ ಅತ್ಯಗತ್ಯ. ತಿಳಿಯಿತೆ? ಸಮಾಧಾನವಾಯಿತೇ ತಾಯೀ?"

"ತಾತ, ನೀವು ವಿವರಿಸಿದ ಲೋಕಧರ್ಮ - ಶಾಸ್ತ್ರವನ್ನು ಸ್ತ್ರೀಯರಿಗೂ ಅದರಲ್ಲೂ ರಾಜಕೀಯ ಕ್ಷೇತ್ರದಲ್ಲಿನ ಪುರುಷರೊಡನೆ ಸಹಕರಿಸುವ ರಾಜಸ್ತ್ರೀಯರಿಗೇಕೆ ಕುಲಗುರುಗಳಾಗಲೀ ಆಶ್ರಮದ ಕುಲಪತಿಗಳಾಗಲೀ ವಿಧಿವತ್ತಾಗಿ ಚಿಕ್ಕಂದಿನಿಂದಲೇ ಹೇಳಿಕೊಡುವುದಿಲ್ಲ? ಲೋಕಹಿತಕಾರ್ಯದಲ್ಲಿ ಸ್ತ್ರೀಯರೂ ಭಾಗಿಗಳಾದರೆ ಕಾರ್ಯ ಮತ್ತೂ ಸುಲಭವಾಗುವುದಲ್ಲವೇ?"

"ಭಲೇ! ಭಲೇ! ಇದೇ–ಬೆರಳಿಟ್ಟರೆ ಹಸ್ತ ನುಂಗುವ ಸ್ತ್ರೀ ಚೈತನ್ಯ. ಹಿಂದೆ ನೀನು ಕೇಳುವಂತೆಯೇ ಇತ್ತು ಮಗು. ಮಕ್ಕಳೆಲ್ಲರೂ ಗುರುಕುಲಕ್ಕೆ ಬರುತ್ತಿದ್ದರು. ಬುದ್ಧಿಗೆ ಹೆಣ್ಣು ಗಂಡಿನ ಭೇದವೆಲ್ಲಿ? ಅಂದಮೇಲೆ ಜ್ಞಾನಕ್ಕೂ ಭೇದ ಸಲ್ಲದು. ಈಗಾಗಿರುವ ಧರ್ಮದ ಅವನತಿಗೆ ಈ ತರಹದ ಭೇದ ಭಾವವೂ ಕಾರಣ. ನನ್ನ ಜೀವಿತಕಾಲದಲ್ಲಿ ಆಶ್ರಮಗಳಲ್ಲಿ ಹೆಣ್ಣುಮಕ್ಕಳೂ ಸಮಾನ ಸಂಖ್ಯೆಯಲ್ಲಿ ಸರಿಸಮರಾಗಿ ಜ್ಞಾನಾರ್ಜನೆ ಮಾಡುವಂತೆ ಪ್ರೋತ್ಸಾಹಿಸಿದೆ. ಇಂದು ಇತರ ಜನಾಂಗಗಳ ಹೆಣ್ಣುಮಕ್ಕಳಿಗಿರುವಷ್ಟು ಸ್ವಾತಂತ್ರ್ಯ ನಮ್ಮಲ್ಲಿಲ್ಲವಾಗಿದೆ. ನನ್ನ ಆಶ್ರಮದಲ್ಲಿ ಗಿರಿಜನ ವನ್ಯಜನರ ಎಷ್ಟೋ ಹೆಣ್ಣುಮಕ್ಕಳಿದ್ದಾರೆ. ಆದರೆ ನಮ್ಮ ಕ್ಷತ್ರಿಯ ಕುವರಿಯರು ಇಲ್ಲವೇ ಇಲ್ಲ. ಬ್ರಾಹ್ಮಣಕುವರಿಯರು ಒಂದು ಕೈಬೆರಳಣಿಕೆಯಷ್ಟು. ಈ ಸ್ಥಿತಿ ಸರಿಹೋಗಬೇಕು. ನಮ್ಮ ಜನರಲ್ಲಿ ವೈಯಕ್ತಿಕ ಮಟ್ಟದಲ್ಲಿ ಮಾನಸಿಕವಾಗಿ ಜ್ಞಾನದಾಹ ಬರಬೇಕು. ಅದಕ್ಕೆ ಕಾಲ ಬೇಕು. ಧರ್ಮದ ಬುನಾದಿಯೇ ಸ್ತ್ರೀಯರಲ್ಲಿ ಅಲ್ಲವೇ? ಮಕ್ಕಳನ್ನು ಐದು ವರ್ಷದವರೆಗೆ ಪೋಷಿಸುವವರು ತಾಯಂದಿರಲ್ಲವೇ? ಮಕ್ಕಳ ನಡತೆಗೆ ಅಡಿಪಾಯ ಆಗಲೇ ಅವರಿಂದಲೇ ತಾನೇ. ತಾಯಂದಿರ ಸಹಕಾರವಿಲ್ಲದ ಧರ್ಮಸ್ಥಾಪನಾಕಾರ್ಯ ಸಫಲ ವಾಗುವುದಾದರೂ ಹೇಗೆ? ಭಾರತವರ್ಷದಲ್ಲಿ ನಿನ್ನ ಹಾಗೆ ಜ್ಞಾನಕ್ಕೆ ಹಾತೊರೆಯುವ, ಚಿಂತಿಸುವ, ಇತರರ ಕಷ್ಟಕ್ಕೆ ಮಿಡಿಯುವ ಕುಂತಿಯರ ಸಂತತಿ ಬೆಳೆಯಲಿ. ನನ್ನ ಜೀವಮಾನದಲ್ಲಿ ಪೂರ್ಣವಾಗಿ ಸಾಧ್ಯವಾಗದೇ ಹೋದ ಸ್ತ್ರೀ ವಿದ್ಯಾಭ್ಯಾಸದ ಕಾರ್ಯವನ್ನು ಮುಂದಿನ ವ್ಯಾಸ ಪೀಳಿಗೆ ಹಂತ ಹಂತದಲ್ಲಿ ಮಾಡೀತು. ನನ್ನ ಪರೋಕ್ಷ ಬೆಂಬಲ, ಸಹಾಯ, ಮಾರ್ಗದರ್ಶನ ಅವರಿಗೆ ಶಾಶ್ವತವಾಗಿದೆ.

ಹ್ಞು... ತಾತನ ಮಾತು ಬೆಳೆದು ಹೋಯಿತಲ್ಲವೇ... ಜಾಣೆ...ಜಾಣೆ...ಶುಭಮಸ್ತು... ಸರ್ವ ಮಂಗಳಮಸ್ತು.." ಮತ್ತೊಮ್ಮೆ ತಲೆದಡವಿದರು. ತೇಲಿಹೋದೆ...ಮುಳುಗಿಹೋದೆ!...



# ಅಧ್ಯಾಯ ೪

“ಕರ್ಣ ವೃತ್ತಾಂತ ನಡೆದು ಹೋದ ಕತೆ, ಈಗ ಅದರ ಬಗೆಗಿನ ಚರ್ಚೆ ವ್ಯರ್ಥ; ಅವಿವೇಕವೂ ಕೂಡ..”

ವ್ಯಾಸರದು ಎಂದಿನ ಮಾತಾಗಿರಲಿಲ್ಲ. ಅವರ ವಾಣಿಯಲ್ಲಿ ಕುರುವಂಶದ ಪಿತೃದೇವತೆಗಳ ಆವಾಹನೆಯಾದಂತಿತ್ತು. ಉಪದೇಶ ದೀರ್ಘವಾಗಿತ್ತು.

“ಕರ್ಣ ಧಾರ್ತರಾಷ್ಟ್ರರ ಮರಣದ ಕಾರಣ ಮತ್ತು ರೀತಿಯನ್ನು ಅವರದೇ ಕರ್ಮ ನಿರ್ಧರಿಸಿತು. ಮತ್ತಾರೂ ಅಲ್ಲ. ಕರ್ಮದಂತೆ ಫಲ ಅನುಭವಿಸಿದರು. ನೀನವರ ಸಾವಿಗೆ ಸಾಧನ ಮಾತ್ರ, ಧರ್ಮಸ್ಥಾಪನೆಗಾಗಿ ಯುದ್ಧ ಎಂದು ನಿರ್ಧರಿಸಿಯೇ ಅಲ್ಲವೇ ನೀನು ಯುದ್ಧಕ್ಕೆ ತೊಡಗಿದ್ದು? ಅದೇ ನಿರ್ಧಾರ–ಧ್ಯೇಯ ಈಗಲೂ ಅನ್ವಯಿಸುತ್ತದೆ. ನಿನ್ನಲ್ಲೇನಾದರೂ ಭ್ರಾತೃಹತ್ಯೆಯ ಪಾಪಪ್ರಜ್ಞೆಯಿದ್ದರೆ ಅದಕ್ಕಾಗಿ ಪ್ರಾಯಶ್ಚಿತ್ತಕಾರ್ಯ ಮಾಡಿ ಮನದಲ್ಲಿನ ಹೀನಭಾವ ತೆಗೆದು ಹಾಕುವುದು ಉಚಿತವೇ ವಿನಃ ರಾಜ್ಯಭಾರ ತೊರೆದು ಕಾಡಿಗೆ ಹೋಗುವುದಲ್ಲ.

ಯುದ್ಧದ ಉದ್ದೇಶವೇನು? ರಾಜ್ಯ ಗೆಲ್ಲುವುದು ಪೂರ್ವಾರ್ಧವಾದರೆ ಗೆದ್ದ ರಾಜ್ಯವನ್ನು ಧರ್ಮಮಾರ್ಗದಲ್ಲಿ ಆಳುವುದು ಉತ್ತರಾರ್ಧ. ಎರಡೂ ನೆರವೇರಿದಾಗ ಮಾತ್ರ ಉದ್ದೇಶ ಸಫಲವಾದಂತಲ್ಲವೇ? ಯುದ್ಧದಲ್ಲಿ ಗೆದ್ದಮೇಲೆ ಆ ರಾಜ್ಯದ ಹೊಣೆಗಾರಿಕೆ ಗೆದ್ದ ರಾಜನ ಹೆಗಲಿಗೇ! ಕುರುರಾಜ್ಯದ ಕ್ಷೇಮ, ಇತರ ಅಧೀನ ರಾಜ್ಯಗಳ ಆಡಳಿತವೂ ಅವನ ಹೆಗಲಿಗೇ! ನೀನು ಈಗ ಚಕ್ರವರ್ತಿ ಪದವಿ ವಹಿಸಿಕೊಳ್ಳದಿದ್ದರೆ ನಿನ್ನಿಂದ ಕರ್ತವ್ಯಚ್ಯುತಿ ಆಗುವುದಿಲ್ಲವೇ? ನೀನು ಕಾಡಿಗೆ ಹೋದರೆ ಧರ್ಮಲೋಪವಾಗುವುದಿಲ್ಲವೇ? ನಿನ್ನ ಧರ್ಮಪ್ರಜ್ಞೆ–ಕರ್ತವ್ಯಪ್ರಜ್ಞೆಗೆ ಮಂಕು ಕವಿದಿರುವುದೇಕೆ? ನೀನಿಟ್ಟ ಗುರಿ ಸಾಧಿಸದೆ ಸಂನ್ಯಾಸವೆಂತು? ವಿಚಾರ ಮಾಡಿದರೆ ನಿನ್ನ ಶೋಕವೇ ಅಸಂಬದ್ಧ ಪ್ರಲಾಪ.

ಧರ್ಮನಂದನ, ನಿನ್ನ ಶೋಕ ಯಾರಿಗಾಗಿ? ಕರ್ಣನಿಗಾಗಿಯೇ? ನಿನ್ನ ಅಧರ್ಮಿ ಕುರು ಸೋದರರಿಗಾಗಿಯೇ? ಅನೇಕ ರಾಜ್ಯಗಳ ಪ್ರಜೆಗಳು ಸೈನಿಕರಾಗಿ, ನಾಯಕರಾಗಿ ಇಲ್ಲಿ ಬಂದು ಮಡಿದರು. ಅವರಿಗಾಗಿಯೂ ನಿನಗೆ ದುಃಖವಿದೆಯೇ? ಸಮಸ್ತ ಜೀವಹಾನಿಗೆ ನಿನ್ನ ಶೋಕವಾದರೆ ಅದು ಸಕಾರಣವಾಗುವುದು. ಅದಕ್ಕೆ ಪ್ರಾಯಶ್ಚಿತ್ತವಾಗಿ ಯಾಗವೊಂದನ್ನು

ಮಾಡು. ನೊಂದ ಜನತೆಯ ಮನವನ್ನು ಈ ಯಾಗಕಾರ್ಯದಲ್ಲಿ ತೊಡಗಿಸು. ಯಾಗಕ್ಕಾಗಿ ಶ್ರಮಿಸಿದವರಿಗೆ ಯಥೇಚ್ಛ ಧನಸಹಾಯ ಮಾಡು. ಕೈಲಾಗದವರಿಗೆ ದಾನ ಮಾಡು. ನಿನ್ನಲ್ಲಿರುವ ಧನವನ್ನೆಲ್ಲ ಈ ಮೂಲಕ ಪ್ರಜೆಗಳಲ್ಲಿ ಹಂಚು. ಆ ಧನ ಮತ್ತೆ ಅವರ ಜೀವನೋಪಾಯಕ್ಕೆ ಕೊಡುವ ಮೂಲಧನವಾಗಲಿ. ಹೊರನಾಡಿನವರಿಗೂ ಪರಿಹಾರಧನದಂತೆ ಕೊಡು. ಸರ್ವರಲ್ಲಿ ಸಮಾನ ಪ್ರೀತಿ ವಾತ್ಸಲ್ಯ ತೋರುವಲ್ಲಿ ವೀತಶೋಕನಾಗಿ, ವೀತರಾಗಿಯಾಗಿ, ಶುದ್ಧಮನಸ್ಕನಾಗು. ಆಗ ಮಾತ್ರ ನಿನ್ನ ವಿರಕ್ತ ಭಾವ ದೃಢವಾಗುವುದು. ಅಂತೆಯೇ ಜನತೆಗೂ ಸಮಾಧಾನ ವಾಗುವುದು.

ಮಗು, ಧರ್ಮನಂದನ, ಒಂದು ಸಂಗತಿ ನಿಶ್ಚಯ ಮಾಡಿಕೊ. ರಾಜಬೊಕ್ಕಸವು ನಿನ್ನ, ನಿನ್ನ ಸಂಸಾರದ ಸುಖಕ್ಕಾಗಿ ಭೋಗಕ್ಕಾಗಿ ಅಲ್ಲ! ಪ್ರಜೆಗಳ ಕ್ಷೇಮಕ್ಕಾಗಿ, ರಕ್ಷಣೆಗಾಗಿ, ರಾಜ್ಯದ ಏಳಿಗೆಗಾಗಿ, ಧರ್ಮಕಾರ್ಯಗಳಿಗಾಗಿ ಅದು ನಿನ್ನಲ್ಲಿ ನ್ಯಾಸವಾಗಿಟ್ಟಿರುವ ಪ್ರಜೆಗಳ ಸಂಪತ್ತು. ಆದ್ದರಿಂದ ನಿನ್ನಲ್ಲಿ ಭೋಗಕಾಮನೆ ಅಳಿದು ಈಗಿರುವ ವಿರಕ್ತಿ ಉಚಿತವಾದುದು. ಅತ್ಯಾವಶ್ಯಕವೂ ಕೂಡ. ಚಕ್ರವರ್ತಿಯಾಗುವವನು ಮೊದಲು ಬಾಂಧವ್ಯಗಳ ಬಂಧನ ಕಳಚಿ ಸಂನ್ಯಾಸಿ ಆಗಬೇಕು. ತನ್ನ ವ್ಯಕ್ತಿಗತ ರಾಗದ್ವೇಷಗಳನ್ನು ಸುಡಬೇಕು. ತನ್ನ ವ್ಯಕ್ತಿತ್ವವನ್ನೇ ಅಳಿಸಿಹಾಕಬೇಕು. ಅವನ ಕಾರ್ಯಕ್ಷಮತೆಯೆಲ್ಲವೂ ಪ್ರಜೆಯ ಅಭಿವೃದ್ಧಿಗಾಗಿ ಮುಡಿಪು. ಅವನ ಜೀವನದ ಅನುಕ್ಷಣವೂ ಪ್ರಜೆಗಳಿಗೇ ಮೀಸಲು.

ಪ್ರಜೆಗಳಿಗೆ ರಾಜ ಪ್ರತ್ಯಕ್ಷ ದೈವ! ಅವನಲ್ಲಿ ಅವರಿಗೆ ಸಂಪೂರ್ಣ ನಂಬಿಕೆ. ಈ ಪೂಜ್ಯಭಾವದಿಂದ ನಿನ್ನನ್ನು ಅಟ್ಟಕ್ಕೇರಿಸುವರು. ಕಿರೀಟವಿಟ್ಟು ಸಂಭ್ರಮಿಸುವರು. ಆದರೆ ನೆನಪಿಡು. ಇದೆಲ್ಲಾ ಆ ರಾಜಪದವಿಗೆ, ಅಲ್ಲಿ ಕುಳಿತಿರುವ ರಾಜನಿಗೆ ನಿನ್ನ ವೈಯಕ್ತಿಕವಾದುದೇನೂ ಇಲ್ಲ. ಪ್ರಜೆಗಳ ಸಮಾಧಾನಕ್ಕೆಂದು ಹೊರಗಿನಿಂದ ಪೂಜೆಗೊಂಡರೂ ಮನದಿಂದ ಅವರಲ್ಲೊಂದಾಗಿ ನೀನೂ ಆ ಪದವಿಗೆ ನಮಿಸಿ ಅಲ್ಲಿ ಕುಳಿತಿರುವ ಧರ್ಮದೇವತೆಯನ್ನು ಸಂಪೂರ್ಣವಾಗಿ ಸೇವಿಸು. ಮುಂದೆ ಬರಲಿರುವ ಕುರುರಾಜರಿಗೆ ಆದರ್ಶಪ್ರಾಯನಾಗು. ಸಿಂಹಾಸನವು ಹೆಚ್ಚು ದಿನ ರಿಕ್ತವಾಗಿರುವುದು ರಾಜ್ಯಕ್ಕೆ ಕ್ಷೇಮವಲ್ಲ. ನೀನು ಪ್ರಜೆಗಳ ಆಸೆ ನೆರವೇರಿಸುವುದು ಅನಿವಾರ್ಯ. ರಾಜನಿಗೆ ಪ್ರಜೆಗಳೇ ಈಶ್ವರ, ಅವರನ್ನು ತ್ರಿಕರಣಪೂರ್ವಕ ಸೇವಿಸುವುದು ರಾಜನ ಆದ್ಯ ಕರ್ತವ್ಯ. ಅವನ ಧರ್ಮವೇ ಅದು. ನಿನ್ನಲ್ಲಿರುವ ಸಂನ್ಯಾಸದ ಇಚ್ಛೆ ಸಾಧು. ಆದರೆ ಕಾಡಿನಲ್ಲಿ ಸಾಧಿಸುವ ಸಂನ್ಯಾಸವಲ್ಲ. ರಾಜಧಾನಿಯಲ್ಲಿದ್ದೇ ಸಾಧಿಸಬೇಕಾದ ಸಂನ್ಯಾಸ. ನಿನ್ನ ಧರ್ಮಚಿಂತನೆ ವ್ಯಕ್ತಿಗತ ಉದ್ಧಾರ-ಮೋಕ್ಷಸಾಧನೆಗೆ ಸೀಮಿತವಾಗಬಾರದು. ನಿನ್ನ ರಾಜ್ಯದಲ್ಲಿ ಧರ್ಮಸ್ಥಾಪನೆಗಾಗಿ ಪ್ರಜೆಗಳ ಉದ್ಧಾರಕ್ಕಾಗಿಯೂ ನಿನ್ನ ಧರ್ಮಸಾಧನೆ ಯಾಗಬೇಕು.

ಧರ್ಮರಾಯ, ನಿನ್ನದು ವಿಶ್ರುತ ಕುರುವಂಶ. ನಿನ್ನ ಪೂರ್ವಜರು ನಹುಷ-ಪುರು-ಭರತ-ಕುರು-ಶಂತನು-ಚಕ್ರವರ್ತಿಗಳು. ರಾಜರ್ಷಿಗಳು, ಲೋಕಖ್ಯಾತರು. ಅವರೆಲ್ಲರ ಯಶೋಗಾಥೆ, ಧರ್ಮಪ್ರಜ್ಞೆ, ಜ್ಞಾನಸಂಪತ್ತು, ವಂಶಪರಂಪರೆ-ಇವುಗಳ ಸಾರಸಂಗ್ರಹವೇ

ಭೀಷ್ಮ. ದೇಹತ್ಯಾಗ ಮಾಡಲು ಮಾಘ ಬರುವುದನ್ನೇ ಕಾದಿರುವರು. ಅವರೊಡನೆ ಲುಪ್ತವಾಗಿ ಹೋಗುವ ಮೊದಲೇ ಅವರ ಬಳಿ ಸಾರಿ ಅವರಲ್ಲಿ ಇರುವುದೆಲ್ಲವನ್ನೂ ಕೇಳಿ ನಿನ್ನದಾಗಿಸಿಕೊ. ನಿನ್ನ ಕರ್ತವ್ಯಪಾಲನೆ, ಮೋಕ್ಷಸಾಧನೆ ಎರಡಕ್ಕೂ ಅವರೇ ಸೂಕ್ತ ಮಾರ್ಗದರ್ಶಕರು. ನಿನ್ನ ಪೂರ್ವಿಕರು ಬಾಳಿಬೆಳಗಿದಂತೆ ನೀನೂ ಬೆಳಗು. ಕರ್ತವ್ಯವಿಮುಖನಾಗದೆ, ಪ್ರಜಾಪಾಲಕನಾಗಿ, ಧರ್ಮರಾಜನಾಗಿ, ರಾಜಋಷಿಯಾಗಿ ರಾಜ್ಯಭಾರ ನಡೆಸಿ ಕೃತಕೃತ್ಯನಾಗು. ಈ ಕರ್ತವ್ಯ ಪಾಲನೆಯಲ್ಲೇ ಮೋಕ್ಷವನ್ನು ಸಾಧಿಸಿದ ಯಶೋವಂತನಾಗು..."

* * *

ಅಶ್ವಜ್ಞನು ಜಾತ್ಯಶ್ವಕ್ಕೆ ಕೊಟ್ಟ ಕಶಾಪ್ರಹಾರದಂತಿತ್ತು ವ್ಯಾಸವಚನ! ಧರ್ಮಜನಿಗೆ ಮಾತ್ರವಲ್ಲ. ನಮ್ಮೆಲ್ಲರಿಗೂ ಚುರುಕು ಮುಟ್ಟಿಸಿದ ವಿಚಾರ ಸರಣಿ. ಅಂದು ದಿಙ್ಮೂಢರಾಗಿ ವ್ಯಾಸರ ಕುಟೀರ ಹೊಕ್ಕ ಪಾಂಡು ಸಂಸಾರ ಎರಡೇ ಗಂಟೆಗಳ ಆಪ್ತ ಸಲಹೆಯ ನಂತರ ಪ್ರಸನ್ನ ಚಿತ್ತರಾಗಿ ಕಾರ್ಯೋನ್ಮುಖರಾಗಿ ಹೊರನಡೆದಿದ್ದೆವು. ಅದೇ ನಾವು, ಅದೇ ಹಸ್ತಿನಾವತಿ, ಅದೇ ಯುದ್ಧ ಘಟನಾವಳಿ. ನಮ್ಮಲ್ಲಿ ಅಳುವು ಹೋಗಿ ಶಾಂತಿ ಬಂದುದೆಂತು? ಕೊಂಚವೇ ಹೊರಳಿಸಿದಾಗ ಬೆಳಕು ಬಿದ್ದು, ಗಾಜಿನಂತಿದ್ದ ಹರಳು ವಜ್ರವಾಗಿ ಹೊಳೆವಂತೆ ಮಂಕುಬಡಿದಿದ್ದ ಮನಸ್ಸು ಬುದ್ಧಿಯನ್ನು ಹೊರಳಿಸಿ ಪ್ರಕಾಶಿಸಿತ್ತು ವ್ಯಾಸರ ವಿಚಾರ. ಅಳು–ನಗುವಿನ ಅಂತರವೆಲ್ಲಾ ಕೇವಲ ನಮ್ಮ ಮನಸ್ಸಿನಲ್ಲಿ; ನಮ್ಮ ದೃಷ್ಟಿಕೋನದಲ್ಲಿ ಎಂದಾಯಿತಲ್ಲವೇ! ನಮ್ಮ ಮನಸ್ಸಿನ, ದೃಷ್ಟಿಕೋನದಂತೆ ಸುತ್ತಲಿನ ಪ್ರಪಂಚ, ಅದರ ಆಗುಹೋಗುಗಳ ಸುಖ–ದುಃಖ.

ಎಷ್ಟು ಸರಳವಾಗಿ, ಧರ್ಮಜನ ಕೋರಿಕೆಯನ್ನು ಈಡೇರಿಸಿದಂತೆಯೇ ಪಟ್ಟದ ಬಿಕ್ಕಟನ್ನು ಪರಿಹರಿಸಿದರು! ಅವರು ಧ್ಯೇಯ ಮತ್ತು ಕರ್ತವ್ಯವನ್ನು ಸಮನ್ವಯಿಸಿದ ರೀತಿ–ಇದು ವ್ಯಾಸ ಬುದ್ಧಿಗೆ ಮಾತ್ರ ಸಾಧ್ಯ. ಅವರು ಸಮಸ್ಯೆಗಳನ್ನು ನೋಡುವ ಪರಿಯೇ ಅನನ್ಯ. ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲೂ ಅವರ ಮುಖ ಮುದುಡಿದ್ದಾಗಲೀ, ನಗೆ ಮಾಸಿದ್ದಾಗಲೀ ಕಂಡಿಲ್ಲ. ಅವರ ಜೀವನವೆಲ್ಲ ತೃಪ್ತಿ, ಆನಂದ, ಶಾಂತಿಯಿಂದ ತುಂಬಿದೆ ಹೇಗೆ? ನಾವಿರುವ ಜಗತ್ತು ಒಂದೇ ಆದರೂ ನಮಗೇಕೆ ದುಃಖ ಅವರಿಗೆ ಹೇಗೆ ಆನಂದ? ವಾಸುದೇವನದೂ ಅಂತೆಯೇ. ಇಬ್ಬರ ಬಾಳಿನಲ್ಲೂ ಕಷ್ಟಗಳಿಗೇನು ಕಡಿಮೆಯೇ!

ಹೆತ್ತ ತಂದೆತಾಯಿಯಿದ್ದರೂ ಹುಟ್ಟಿದ ತಕ್ಷಣವೇ ತಾಯ್ಮಡಿಲು ಬಿಟ್ಟು ಅನ್ಯರ ಮನೆಯಲ್ಲಿ ಕೃಷ್ಣನ ಬಾಲ್ಯ; ಅದೂ ಗೋವಳನಾಗಿ. ಹುಟ್ಟಿದಾಗಿನಿಂದ ತಲೆಯ ಮೇಲಾಡುತ್ತಿದ್ದ ಸ್ವಂತ ಮಾವನ ಕತ್ತಿ. ಆತ್ಮರಕ್ಷಣೆಗಾಗಿ ಮಾವನನ್ನು ಕೊಂದಾಗ ಜರಾಸಂಧನ ಹಗೆತನ; ಯಾದವರೊಳಗಿನದೇ ಸಮಸ್ಯೆಗಳು; ಕೈತುಂಬ ತಲೆತುಂಬ. ವ್ಯಾಸರದ್ದೊ.. ಕಾನೀನ..ತಾಯಿ ಬೆಸ್ತರ ಹುಡುಗಿ. ಎಳವೆಯಲ್ಲೇ ತಾಯಿಯನ್ನು ಬಿಟ್ಟು ತಂದೆಯೊಡನೆ ನಿರಂತರ ತಿರುಗಾಟ. ಹದಿಹರೆಯದಲ್ಲೇ ತಂದೆ ಪರಾಶರರ ದಾರುಣ ಸಾವಿನಿಂದಾಗಿ ಅನಾಥ ಸ್ಥಿತಿ. ಈ ಕಷ್ಟಗಳಾವುವೂ ಇವರ ಜ್ಞಾನಾರ್ಜನೆಯಲ್ಲಾಗಲೀ, ಕರ್ತವ್ಯಪಾಲನೆಯಲ್ಲಾಗಲೀ ಅಡ್ಡ ಬರಲಿಲ್ಲ. ಇಬ್ಬರೂ ನಿತ್ಯಾನಂದರಾಗಿ, ಹಸನ್ಮುಖಿಗಳಾಗಿಯೆ ಬಾಳು ಹಸನಾಗಿಸಿಕೊಂಡರಲ್ಲವೇ! ಇವರಿಗೆ

'ಧರ್ಮ'ದಲ್ಲಿ ಅಚಲ ವಿಶ್ವಾಸ. ಈ ಧರ್ಮಶ್ರದ್ಧೆಯಿಂದಾಗಿ ಅಪಾರ ತಾಳ್ಮೆ. ವಿದುರ ಹೇಳುವ ಹಾಗೆ ಇಬ್ಬರದೂ 'ಪೂರ್ಣದೃಷ್ಟಿ'.

ಈಗಲೂ ನೆನಪಿದೆ... ಹಿಡಿಂಬೆಯೊಂದಿಗೆ ಭೀಮಸೇನನ ಸಂಬಂಧವಾಗಿ ನಾಲ್ಕೈದು ತಿಂಗಳೇ ಕಳೆದಿತ್ತು. ವ್ಯಾಸರೇ ನಮ್ಮಲ್ಲಿಗೆ ಬಂದರು. ಈ ರಾಕ್ಷಸೀ ಸಂಬಂಧ ಕುರಿತು ಏನೂ ತೋರದಾಗಿದೆ ಎಂದಾಗ ಅವರು ಹೇಳಿದ್ದು ಈಗಲೂ ಅರ್ಥಪೂರ್ಣ.

"ತಾಯಿ..ಒಂದು ಪ್ರಸಂಗ ಹೇಳುತ್ತೇನೆ, ಕೇಳು. ನಾಗರ ಪ್ರಾಂತದಲ್ಲಿನ ಒಂದು ಹಳ್ಳಿ. ಇಪ್ಪತ್ತು ಇಪ್ಪತ್ತೆರಡರ ಹೆಣ್ಣುಮಗಳು, ಅಂಗಳದಲ್ಲಿದ್ದ ಚಿಕ್ಕ ಕೈಮಗ್ಗದಲ್ಲಿ ಬಣ್ಣ ಬಣ್ಣದ ನೂಲನ್ನು ಹಾಕಿ ನೇಯುತ್ತಿದ್ದಳು. ಅವಳ ಮೂರು ನಾಲ್ಕು ವರ್ಷದ ಮಗು, ಅವಳ ಕಾಲಬಳಿ ಮಗ್ಗದ ನೇಯ್ಗೆಯ ಕೆಳಗೆ ಆಡುತ್ತಿತ್ತು. ತಾಯ ಮಂಡಿಗಳ ಮಧ್ಯೆ ತಲೆ ತೂರಿಸಿ "ಅಮ್ಮ, ನೀನೇನು ಮಾಡುತ್ತಿದ್ದೀಯೆ? ಬಾರಿ ಬಾರಿಗೆ ನೂಲನ್ನು ಹೊಡೆಯುತ್ತೀಯೆ. ಈ ಕಡೆ ಆ ಕಡೆ ನೂಲು ಎಳೆಯುತ್ತೀಯೆ. ಇಲ್ಲಿಂದ ನೋಡಿದರೆ ಗಂಟು ಗಂಟು ದಾರಗಳು ಇಳಿಯಾಡಿದೆ. ಬಣ್ಣದ ದಾರ ಎಲ್ಲ ಕಲಸು ಕಲಸು. ಕಠ್ ಕಠಲ್ ಅಂತ ಜಗ್ಗಿ ಹೊಡೆಯುವುದೇಕೆ? ಹೇಳಮ್ಮ.."

ಆ ತಾಯಿಗೆ ಕಂದನ ಪ್ರಶ್ನೆ ನಗು ತಂದಿತ್ತು. "ನೀನು ಆಟ ಆಡುತ್ತಿರು. ಅಷ್ಟರಲ್ಲಿ ನಾನಿದನ್ನು ಮುಗಿಸಿ ಹೇಳುತ್ತೇನೆ." ಎಂದು ಅದರ ತಲೆ ಸವರಿದಳು. ಇದೇ ರೀತಿ ಮತ್ತೆರಡು ಸಲ ಮಗುವಿನ ಕುತೂಹಲದ ಪ್ರಶ್ನೆ; ತಾಯಿಯ ಸಮಾಧಾನದ, ತಲೆ ಮುದ್ದಿಸಿದ ಉತ್ತರ. ಕಡೆಗೆ ಮಗುವನ್ನೆತ್ತಿ ಮಡಿಲ ಮುಂದಿದ್ದ ನೇಯ್ದ ನೂಲಿನ ಮಂದಲಿಗೆ ತೋರಿಸಿದ್ದೆ ತಡ.. ಮಗು ಕೈಚಾಚಿ ಮುಂದೆ ಬಾಗಿ "ಆಹಾ..ಎಷ್ಟು ಚಂದದ ಚಿತ್ತಾರ? ನೀನೆಷ್ಟು ಜಾಣೆ ಅಮ್ಮ.. ಪ್ರೀತಿಯ ಅಮ್ಮ.."

"ನೋಡಿದೆಯಾ ಮಗು, ಹೊಡೆಸಿಕೊಂಡು ಎಳೆಸಿಕೊಂಡು ಗಂಟು ಹಾಕಿಸಿಕೊಂಡು ಬಣ್ಣದ ಎಳೆಗಳು ಬಿಡಿಸಿರುವ ಚಿತ್ತಾರ! ಒಂದೊಂದು ಎಳೆಗೂ ಬಣ್ಣ, ಬಿಗಿ, ಬಾಗು ಎಲ್ಲವೂ ಬೇಕು. ಆಗಲೇ ಚಿತ್ತಾರ ಆಗಲು ಸಾಧ್ಯ. ಎಲ್ಲ ಎಳೆಗಳೂ ಒಂದೇ ಬಣ್ಣ, ಒಂದೇ ರೀತಿ ಇದ್ದರೆ ಚಿತ್ತಾರವೆಲ್ಲಿ? ನನ್ನ ತಲೆಯೊಳಗೆ ಚಿತ್ತಾರ ಆಗಲೇ ಇತ್ತು. ಅದಕ್ಕೆ ತಕ್ಕಂತೆ ನೂಲುಗಳನ್ನು ಹೊಂದಿಸಿ ಈ ಮಂದಲಿಗೆ ನೇಯ್ದಿದ್ದೇನೆ. ಇದರ ಹಿಂಭಾಗ ನೋಡಿ ನಿನಗೆ ಗೊಂದಲ ಆಯಿತಲ್ಲವೇ? ಪುಟ್ಟ, ಇದು, ನಾನು ಹಳ್ಳಿ ಮುಕ್ಕ ಮಾಡಿದ ಚಿತ್ತಾರ. ಇದಕ್ಕೇ ನಿನಗೆ ಇಷ್ಟು ಹಿಗ್ಗು! ಎದುರಿಗೆ ನೋಡು. ನೇಸರದೇವನು ಮಾಡಿರುವ ಚಿತ್ತಾರ. ಬಳ್ಳಿ, ಮರ, ಹೂವು, ಹಣ್ಣು, ಗಿಳಿ, ಗೊರವಂಕ, ಜಿಂಕೆ, ಆನೆ, ಹಳ್ಳಿ, ಬೆಟ್ಟ...ಎಲ್ಲ ಎಲ್ಲ! ದೇವನ ಚಿತ್ತಾರಕ್ಕೆ ಹಿಂಭಾಗ ಮುಂಭಾಗ ಎನ್ನುವುದೇ ಇಲ್ಲ. ಎಲ್ಲವೂ ಚಂದ. ಎಲ್ಲವೂ ಅದರದರ ಜಾಗದಲ್ಲಿ ಎಷ್ಟು ಸೊಗಸಾಗಿ ಹೆಣೆದುಕೊಂಡಿದೆ. ಇದು, ದೇವನು ನಮಗಾಗಿ ಪ್ರೀತಿಯಿಂದ ನೇಯ್ದ ಪ್ರಪಂಚ. ಇದನ್ನು ಕೆಡಿಸುವಂಥ ಯಾವ ಕೆಲಸವನ್ನೂ ಮಾಡಬೇಡ. ಅದುವೇ ಆ ದೇವನಿಗೆ ನಾವು ತೋರಿಸುವ ಪ್ರೀತಿ.." ಎಂದು ಆ ತಾಯಿ ವಿವರಿಸಿದ ಮಾತುಗಳಲ್ಲಿ ಕಲಿಯುವುದು

ಬೇಕಾದಷ್ಟಿದೆ. ಕುಂತೀ, ಆಗುತ್ತಿರುವುದೆಲ್ಲ ಯಾವುದೋ ಒಳ್ಳೆಯ ಉದ್ದೇಶಕ್ಕೆಂಬ ಅಚಲ ವಿಶ್ವಾಸವಿರಲಿ. ನೀವು ಮಾತ್ರ ಧರ್ಮ ಮಾರ್ಗ ಬಿಡದೆ, ಅವಸರಿಸದೆ ಕೈಲಾದಷ್ಟು ಪರಹಿತ ಕಾರ್ಯಮಾಡುತ್ತ ನೀವಿರುವ ಪ್ರಪಂಚವು ದೈವದತ್ತವೆಂದು ಪ್ರಸಾದವೆಂದು ಸ್ವೀಕರಿಸಿ, ಒಳ್ಳೆಯ ದಿನಗಳನ್ನು ಎದುರುನೋಡಿ. ನಿಮ್ಮ ಬಾಳೂ ಮಗು ನೋಡಿದ ಮಂದಲಿಗೆಯಂತೆ ಅರ್ಥವತ್ತಾಗುವುದು.."

ಅಂದು ವ್ಯಾಸರು ಹೇಳಿದ ಪ್ರಸಂಗಗಳಲ್ಲಿ ಇಂದಿಗೂ ಅರ್ಥಗಳ ಪದರುಗಳೇ ಬಿಚ್ಚಿಕೊಳ್ಳುತ್ತವೆ. ವ್ಯಾಸರು ಕಾಣುವ ಪ್ರಪಂಚದಲ್ಲಿ ಒಂದೊಂದು ನೂಲಿಗೂ, ಒಂದೊಂದು ಗಂಟಿಗೂ, ಒಂದೊಂದು ಬಾಗಿಗೂ, ಅರ್ಥವಿದೆ. ಮನುಷ್ಯನನ್ನು ಬಡಿದು, ಬಗ್ಗಿಸಿ, ಎಳೆದು ಹಿಗ್ಗಲಿಸಿ, ಕುಟ್ಟಿ ಸಮನಾಗಿಸಿ, ಸೂಕ್ತ ಸ್ಥಳದಲ್ಲಿ ಬಿಗಿಮಾಡಿ ಅಳವಡಿಸುವ ಸೂಜಿ, ಸುತ್ತಿಗೆ, ಬಡಿಗೆ ಚಿಮಟಗಳೇ ಕಷ್ಟಕಾರ್ಪಣ್ಯಗಳು; ನೋವು ಸಾವುಗಳು; ದುಃಖದಾಯಿ ಘಟನೆಗಳು; ವ್ಯಾಸರ ದೃಷ್ಟಿಯಲ್ಲಿ 'ಬೇಕಿಲ್ಲದ್ದು' ಎನ್ನುವುದೇ ಇಲ್ಲ. ಇರುವುದೆಲ್ಲ ಬೇಕಾದದ್ದೇ. ಅವರ ಪ್ರಪಂಚದಲ್ಲಿ ದುರ್ಯೋಧನ, ಅಶ್ವತ್ಥಾಮ, ಕರ್ಣ, ಶಕುನಿ...ಎಲ್ಲರೂ ಚಿತ್ತಾರದ ವಿವಿಧ ರಂಗಿನ ವಿವಿಧ ಬಾಗುಗಳ ಭಾಗಗಳು. ಈ ಎಲ್ಲ ಭಾಗಗಳ ಹೊಂದಾಣಿಕೆಯ ಚಿತ್ತಾರವೇ.. ದಿನದಿನವೂ ಹೊಸಹೊಸದಾಗಿ ಹೆಣೆದುಕೊಳ್ಳುವ ಪ್ರಪಂಚ. ಅವರ ಮಟ್ಟಿಗೆ ಸ್ಥಿರವಾದುದೊಂದೇ-'ಧರ್ಮ'! ಎಲ್ಲವನ್ನೂ ಹೊಂದಿಸುವ ಧರ್ಮ. ಸ್ಥಿರ ಧರ್ಮದ ಆಧಾರ ಪಡೆದವರಿಗೆ ಬದಲಾವಣೆಯೂ ಸೊಗಯಿಸುವ 'ಲೀಲೆ'! ಪೂರ್ಣ ದೃಷ್ಟಿಯಲ್ಲಿ ಕಾಣುವ ಪಟಚಿತ್ರ, ಈ ಬಗೆಯಲ್ಲಿ ವಿಶ್ವವನ್ನೇ ನೋಡುವ, ಚಿತ್ರವಾಗಿಸಿ ಆನಂದಿಸುವ ರೀತಿ... ಈ ತಾಳ್ಮೆ ಸಮಾಧಾನ ನನಗೆ ಸಾಧ್ಯವೇ? ಸಾಧ್ಯವಾಗಿಸಬೇಕು. ಸಾಧಿಸಬೇಕು.

ಆ ನೇಯುತ್ತಿದ್ದ ತಾಯಿಗೆ ಯಾವ ಅಳತೆಯ, ಯಾವ ಚಿತ್ತಾರದ ಮಂದಲಿಗೆ ನೇಯಬೇಕೆಂಬ ಉದ್ದೇಶ-ವಿಧಾನ ಮುಂಚಿತವಾಗಿ ಮನದಲ್ಲಿ ನಿಶ್ಚಯವಾಗಿಯೇ ತಾನೇ ಮಗ್ಗದಲ್ಲಿ ರೂಪುಗೊಂಡದ್ದು-ಬಾಳಿಗೂ ಒಂದು ಉದ್ದೇಶ ನಿಶ್ಚಯವಾದರೆ ಹೆಚ್ಚು ಅರ್ಥಪೂರ್ಣವಲ್ಲವೇ? ನಾವೆಗೆ ಚುಕ್ಕಾಣಿಯಿದ್ದಂತೆ ಬಾಳಿಗೆ ದಿಕ್ಕು ನಿರ್ಧರಿಸುವುದು ಧ್ಯೇಯ, ಅದರ ಸಂಕಲ್ಪ. ಕರ್ತವ್ಯಗಳು ಬಾಳಿಗೆ ಹುಟ್ಟುಗೋಲುಗಳಂತೆ. ಇವೆರಡೂ ಖಚಿತವಿಲ್ಲದ ಬಾಳ ನಾವೆ ಹೋಗುವುದೆಲ್ಲಿಗೆ? ಧ್ಯೇಯ, ಹಿರಿದಾದಂತೆ ಬಾಳೂ ಹಿರಿದು. ಹಿರಿದಾದುದರ ಮುಂದೆ ಕಿರಿದಾದುದರ ಸೋಲು ನಿಶ್ಚಿತ. ಸಾರಥಿ ಕೃಷ್ಣನ ಗುರಿ-ಧರ್ಮವನ್ನು ಎತ್ತಿ ಹಿಡಿದು, ಭರತ ರಾಜ್ಯವನ್ನು ವಿವೇಕಿ ಧರ್ಮಪರಾಯಣನೊಬ್ಬನ ಆಳ್ವಿಕೆಗೆ ಒಪ್ಪಿಸುವುದು. ಸಾರಥಿ ಶಲ್ಯನ ಗುರಿ-ತನಗೆ ರಾಜಾತಿಥ್ಯ ಕೊಟ್ಟ ದುರ್ಯೋಧನನ ಕೋರಿಕೆಯಂತೆ ಕರ್ಣ ಸಾರಥ್ಯ. ಅರ್ಜುನನ ಗುರಿ-ಕೃಷ್ಣ ಧರ್ಮಜರಿಗೆ, ಧರ್ಮಕ್ಕೆ ಜಯ ತರುವುದು. ಕರ್ಣನ ಗುರಿ-ದುರ್ಯೋಧನನ ಮಿತ್ರತ್ವವನ್ನು, ಅವನ ನಂಬಿಕೆಯನ್ನು ಕಡೆಯವರೆಗೆ ಪಾಲಿಸುವುದು. ಇಬ್ಬರು ಸಾರಥಿಗಳೂ ಮಹಾರಥಿಗಳು, ಯೋಧರು, ದಿವ್ಯಾಸ್ತ್ರ ಪಾರಂಗತರು, ವೀರ ಬಿಲ್ಗಾರರು. ಮಿಕ್ಕೆಲ್ಲ ವಿಷಯದಲ್ಲಿ ಸರಿಸಮಾನತೆಯಿದ್ದರೂ ಗುರಿಯಲ್ಲಿನ ಅಂತರದಿಂದಾಗಿ ಶಲ್ಯ ಕರ್ಣರು

ಅಸುನೀಗಿದರು. ಕೃಷ್ಣ ಅರ್ಜುನರು ಜಯಿಸಿ ಬಂದರು. ಧ್ಯೇಯದ ಔಚಿತ್ಯ ಔನ್ನತ್ಯಕ್ಕನುಸಾರ ಬಾಳಿನ ಹಿರಿಮೆ-ಗರಿಮೆ.

ಇಂತು ನಿರ್ಧರಿಸಿದ ಧ್ಯೇಯಕ್ಕಾಗಿ ಧ್ಯಾನಿಸಿ ಶ್ರಮಿಸುವುದೇ ಜೀವನವಲ್ಲವೇ? ವ್ಯಾಸರು ಕೃಷ್ಣನು ಧ್ಯೇಯಕ್ಕಾಗಿ ಬಾಳಿದವರು. ಅವರಿಗೆ ಎದುರಾದ ಕಷ್ಟಗಳು ಅಡ್ಡಿಯಾಗುವ ಬದಲಿಗೆ ಗುರಿಯತ್ತ ನಡೆಸುವ ಸೋಪಾನಗಳಾದುವಲ್ಲವೇ? ಯೋಚಿಸಿದರೆ... ಅವರು ಸೋತೆನೆಂದು ಯಾವತ್ತೂ ಕೈಚೆಲ್ಲಿ ಕೂರಲಿಲ್ಲ. ಕೂತುಬಿಟ್ಟರೆ ಸೋಲು! ಇಲ್ಲವಾದರೆ ಸೋಲುಗಳು ಗುರಿಯ ಕಡೆಗಿನ ವಿವಿಧ ಪ್ರಯತ್ನಗಳಷ್ಟೆ. ಗುರಿ ಗೊತ್ತಾಗಬೇಕು. ಆಗ ನಮ್ಮ ಬುದ್ಧಿ ಮನಸ್ಸು ದೇಹ ಆ ಗುರಿಯಲ್ಲಿ ಕೇಂದ್ರಿತವಾಗಿ ಕಾರ್ಯತತ್ಪರವಾಗುವುವು. ಆಗ ಸುತ್ತಲಿನ ಜಗತ್ತೂ ಸಹಕರಿಸಿ ನಮ್ಮ ಪ್ರಯತ್ನಕ್ಕೆ ಯಶಸ್ಸು ತರುವುದು.

ಜೀವನದ ಉದ್ದೇಶ ಉನ್ನತವಾದಂತೆ, ಹಿಡಿದ ಮಾರ್ಗ ಧರ್ಮಯುತವಾದರೆ ವ್ಯಕ್ತಿತ್ವವೂ ವಿಕಾಸಗೊಂಡು ಸಮಾಜದಲ್ಲಿ ಅನುಕರಣೀಯವಾಗುವುದಲ್ಲವೇ! ಕರ್ಣ-ಧರ್ಮಜ ಇಬ್ಬರೂ ನನ್ನ ಮಕ್ಕಳೇ. ಹುಟ್ಟಿನಿಂದ ಇಬ್ಬರೂ ದೇವ ಸಮಾನರು. ಸರಿಸಮಾನ ಸಾಮರ್ಥ್ಯವಿದ್ದವರು. ಕೇವಲ ಜೀವನೋದ್ದೇಶದ ವ್ಯತ್ಯಾಸದಿಂದಾಗಿ ಒಂದು ಏಳು-ಒಂದು ಬೀಳು! ಒಬ್ಬ ಬಲಗೈ ಬಂಟನಾಗಿಯೇ ಉಳಿದರೆ ಮತ್ತೊಬ್ಬ ಚಕ್ರವರ್ತಿ ಪದವಿಗೆ ನಿರ್ಧಾರಿತ.

ತನ್ನನ್ನು 'ಆದರಿಸಿ', ಸೂತಪುತ್ರ'ನಿಂದ 'ಅಂಗರಾಜ'ನಾಗಿ ಮಾಡಿದ ದುರ್ಯೋಧನನ ಗೆಳೆತನವೇ ಕರ್ಣನಿಗೆ ಜೀವನದ ಗುರಿಯಾಯಿತು. ಗೆಳೆಯನ ಹಿತೈಷಿಯಾಗಿ ಅವನನ್ನು ನೀತಿಮಾರ್ಗಕ್ಕೆ ತರುವುದು ಕರ್ಣನಿಗೆ ಕರ್ತವ್ಯವೆನಿಸಲಿಲ್ಲ. ಬದಲಿಗೆ ದುರ್ಯೋಧನನ ಸಂತೋಷಕ್ಕಾಗಿ ಅವನೊಡನೆ ತಾನೂ ಅನೀತಿಯ, ಪ್ರೇಯಸ್ಸಿನ ದಾರಿ ತುಳಿದ. ಒಬ್ಬ ವ್ಯಕ್ತಿಯ-ದುರ್ಯೋಧನನ ಇಷ್ಟಾನಿಷ್ಟಗಳಿಗೆ ತನ್ನ ಸರ್ವಸ್ವವನ್ನೂ ಮುಡುಪಿಟ್ಟ. ದುರ್ಯೋಧನನಿಗೆ ತಲೆಬಾಗಿದ. ವ್ಯಕ್ತಿತ್ವದಲ್ಲಿ ಕುಬ್ಜನಾಗುತ್ತ ಹೋದನಲ್ಲವೇ... ಅದೇ ಧರ್ಮಜ... ಸಮಾಜದ ರೀತಿನೀತಿಗೆ ತಲೆಬಾಗಿದ. ವ್ಯಾಸರ ಮಾರ್ಗದರ್ಶನದಲ್ಲಿ ಧರ್ಮರಾಜ್ಯವನ್ನು ಕಟ್ಟುವ ಗುರಿಯಿಟ್ಟು ನೀತಿಮಾರ್ಗ ಹಿಡಿದ. ಈಗ ಅರ್ಥವಾಗುತ್ತದೆ. ಧರ್ಮಜ ದುರ್ಯೋಧನನಿಗೆ ಬಿಟ್ಟುಕೊಟ್ಟಾಗಲೆಲ್ಲ ವಿದುರ, ವ್ಯಾಸರು ಅವನನ್ನು ಮೆಚ್ಚುತ್ತಿದ್ದುದು ಅವನ ತಾಳ್ಮೆಗಾಗಿ, ಶಾಂತಿಪ್ರಿಯತೆಗಾಗಿ, ಸ್ವಜನರ ಪ್ರೀತಿಗಾಗಿ. ಎಂತಹ ವಿಕಟ ಪರಿಸ್ಥಿತಿಯಲ್ಲೂ ಉದ್ರೇಕಗೊಳ್ಳದೆ, ಅಹಿಂಸೆಯನ್ನೇ ಮೇಲಾಗಿಸಿ, ಎಲ್ಲರಲ್ಲಿ ತನ್ನನ್ನೇ ಅಗ್ಗಮಾಡಿಕೊಂಡಾದರೂ ಪರಿಸ್ಥಿತಿ ಕೈಮೀರದಂತೆ ನೋಡಿಕೊಂಡ. ಕುರುಮನೆತನದ ಒಗ್ಗಟ್ಟಿಗಾಗಿ, ಪ್ರಜೆಗಳ ಕ್ಷೇಮಕ್ಕಾಗಿ, ಸೌಖ್ಯಕ್ಕಾಗಿ ದುರ್ಯೋಧನನೊಂದಿಗೆ ಕಾದಾಡುವ ಕಾರಣವನ್ನೇ ಅಳಿಸಿಹಾಕಲು ನೋಡಿದ. ಈ ಗುಣವೇ ನಮಗೆ ಅವನ ದುರ್ಬಲತೆಯಾಗಿ ಕಂಡರೆ ವ್ಯಾಸರಿಗೆ ಅವನ ನೈತಿಕಬಲವಾಗಿ ಕಂಡಿತ್ತು. ಕರ್ತವ್ಯಪಾಲನೆಯಾಗಿ ಕಂಡಿತ್ತು. ಅದನ್ನೇ ಮತ್ತೂ ಬಲಗೊಳಿಸುವಂತೆ ನಮ್ಮನ್ನೆಲ್ಲ-ನಾನು, ದ್ರೌಪದಿ, ಭೀಮಾದಿಗಳಿಗೆ-ಸಹನೆ ತಂದುಕೊಳ್ಳಲು ಹೇಳುತ್ತಿದ್ದರು. ವ್ಯಾಸರ ದೃಷ್ಟಿಯಲ್ಲಿ ಹದಿಮೂರು ವರ್ಷಗಳ ವನವಾಸ ಪರೋಕ್ಷವಾಗಿ ಪ್ರಸಾದವೇ ಆಯಿತು. ದುರ್ಯೋಧನನ

ಅಳಿವಿಗೆ ಕಾರಣವಾಯಿತು. ವ್ಯಕ್ತಿಯ ಧ್ಯೇಯವು ಧರ್ಮಯುತವಾಗಿದ್ದು, ಅದರೊಡನೆ ಸಂಕಲ್ಪಶಕ್ತಿಯೂ ಕೂಡಿದರೆ ವಿಧಿಯು ಅವನ ಅವಗುಣಗಳನ್ನು ಮಾರ್ಪಡಿಸಿ, ಸುಗುಣಗಳನ್ನು ಬಲಪಡಿಸಿ, ಧ್ಯೇಯ ಸಾಧಿಸಲು ಸಹಕರಿಸುತ್ತದೆ. ದುರ್ಯೋಧನನ ಅಧಿಕಾರ ಲಾಲಸೆ ಅತಿಯಾಗಿ, ಅದುವೇ ಜೀವನದ ಗುರಿಯಾಗಿ ಅದನ್ನು ಸಾಧಿಸಲು ಕುಟಿಲಮಾರ್ಗ ಹಿಡಿದ. ಅವನ ದುರ್ಗುಣಗಳೇ ಅಲ್ಲದೆ ಗುಣಗಳೂ ಅವನಿಗೇ ಮುಳುವಾದವಲ್ಲವೇ!

ಅದಕ್ಕೇ ಇರಬೇಕು, ನನ್ನಲ್ಲಿ ಉಳಿದಿದ್ದ ಕಸರು ತೆಗೆದು ಪಕ್ವತೆ ತರುವ ಕಳಕಳಿ ವಾಸುದೇವನಿಗೆ. ನನ್ನ ಮನದಲ್ಲಿದ್ದ 'ಧರ್ಮಜನಿಗೆ ರಾಜ್ಯ ಸಿಗಬೇಕು' ಎನ್ನುವ ಸೀಮಿತ ಗುರಿಯನ್ನು ವಿಸ್ತರಿಸಿ, 'ರಾಜ್ಯದಲ್ಲಿ ಧರ್ಮಸ್ಥಾಪನೆಯಾಗಬೇಕು' ಎನ್ನುವ ವಿಚಾರವನ್ನು ಯುದ್ಧಕ್ಕೆ ಮೊದಲೇ ತಿಳಿಯಹೇಳಿದುದು. ಅದಕ್ಕಾಗಿ ನನ್ನ ಮೊದಲಹೆಜ್ಜೆ ಕರ್ಣನನ್ನು ಕಂಡು ಮಗನೆಂದು ಹೇಳಿ ಪಾಂಡವರೊಂದಿಗೆ ಸೇರಿಕೊಳ್ಳಲು ಯಾಚಿಸುವುದು. ಅಂದು ನನ್ನ ಅಹಮಿಕೆಗೆ ಏಟು ಬಿದ್ದಿತಾದರೂ ಧ್ಯೇಯದ ಬಲದಿಂದಾಗಿ ನನ್ನ ಏಳಿಗೆಯಾದುದಂತೂ ನಿಜ. ನನ್ನ ಅನುಭವಕ್ಕೆ ಬಂದಿರುವ ಸಂಗತಿ.

ನಿಜ, ಕರ್ತವ್ಯದ ಚೌಕಟ್ಟಿನಲ್ಲಿ ಧ್ಯೇಯವನ್ನಿಟ್ಟರೆ ಬಾಳಿನ ಅರ್ಥ ಸಿಗುವುದು. ಅರ್ಥವಾದರೆ ಸ್ಪಷ್ಟತೆ, ಸ್ಪಷ್ಟತೆ ಇದ್ದಲ್ಲಿ ಸಂಶಯ, ಉದ್ವೇಗ ಇಲ್ಲವಾಗುವುದು. ಆಗ ಶಾಂತಿಯೇ ಶಾಂತಿ. ಎದುರಿನದೆಲ್ಲ ಸುಂದರ, ಆದುದೆಲ್ಲ ಒಳಿತೇ; ಆಗುವುದೆಲ್ಲ ಪೂರ್ಣವೊಂದರ ಭಾಗವೆಂಬ ವಿಶ್ವಾಶ-ತಾಳ್ಮೆ. ಇದೇ ಅಲ್ಲದೇ ಜೀವನ. ಇದೇ ಅಲ್ಲವೇ ವ್ಯಕ್ತಿತ್ವದ ವಿಕಸನ. ಇದನ್ನೇ ಅಲ್ಲವೇ ವ್ಯಾಸರು ಧರ್ಮಜನಿಗೆ ತಿಳಿಯಹೇಳಿದ ವಿಷಯ?... ನನಗೆ ಅರ್ಥವಾದುದು ಹೀಗೆ ಎನ್ನುವುದೇ ಸರಿಯೇನೋ!

ನಾವೆಲ್ಲರೂ 'ಮಮಕಾರ'ದಲ್ಲಿ ಮಾಡುವ ಸಣ್ಣಪುಟ್ಟ ಕೆಲಸಗಳೂ ಒಂದು ಮಹತ್ತಾದುದರ ಅಂಗವೇ ಆಗಿರುವುದು. ಇದನ್ನರಿಯುವುದೇ-ವ್ಯಷ್ಟಿಪ್ರಜ್ಞೆಯಿಂದ ಸಮಷ್ಟಿಪ್ರಜ್ಞೆಗೆ ಏರುವುದೇ ಮಾನವ ಜೀವನದ ಮೂಲೋದ್ದೇಶ-ಇರಬೇಕು. 'ಸ್ವಾರ್ಥ'ದಿಂದ 'ಲೋಕಾರ್ಥ'ಕ್ಕೆ.. ನಾವು ಸಮಷ್ಟಿಯ ಅಂಗವೆಂದು ಅರಿತು ನಮ್ಮ ಪಾಲಿಗೆ ಬಂದ ಕೆಲಸವನ್ನು ಅದೆಷ್ಟೇ ನಗಣ್ಯವೆನಿಸಿದರೂ ತನ್ಮಯತೆಯಿಂದ ಸಮಷ್ಟಿಯೊಂದಿಗೆ ಸಹಕರಿಸಿ ಮಾಡಿದರೆ ನಮಗೆ ಅದರ ವ್ಯವಸ್ಥೆಯಲ್ಲಿ ಸ್ಥಾನ, ಸಹಕರಿಸದಿದ್ದರೆ ಅನಗತ್ಯ ಘರ್ಷಣೆ, ನಂತರ ಆ ವ್ಯವಸ್ಥೆಯಿಂದ-ಭೂಮಿಯಿಂದಲೇ ಉಚ್ಚಾಟನೆ! ದೇಹದ ವ್ಯವಸ್ಥೆಯಲ್ಲಿ ರಕ್ತ, ರಕ್ತನಾಳ, ನರತಂತು, ಮಾಂಸಖಂಡ, ಎಲುಬು, ಮಿದುಳು, ಶ್ವಾಸಕೋಶ ಎಂದೆಲ್ಲ ಬೇರೆ ಬೇರೆ ಭಾಗಗಳು ತಮ್ಮದೇ ವಿಶಿಷ್ಟ ಕಾರ್ಯ ಮಾಡುತ್ತಲೇ ಒಂದನ್ನೊಂದು ಅವಲಂಬಿಸಿ, ಸಹಕರಿಸಿ, ವ್ಯವಸ್ಥೆಯನ್ನು ಸಮರ್ಥಿಸಿ, ದೇಹಸ್ವಾಸ್ಥ್ಯ ಕಾಪಾಡುವಂತೆಯೇ-ಪ್ರತ್ಯೇಕ ವ್ಯಕ್ತಿ ಸಮಷ್ಟಿಯನ್ನು ಸಮರ್ಥಿಸಬೇಕಾಗುವುದು. ಇಲ್ಲದಿದ್ದರೆ ಅಸಮತೋಲನ, ಅಸಮಾಧಾನ, ವಿರೋಧ-ವಿಷಮ ಪರಿಸ್ಥಿತಿ. ಕಡೆಗೆ ಈಗಾದಂತೆ ಯುದ್ಧ!

ರಕ್ತದಲ್ಲಿನ ಕಲ್ಮಷವೇ ಹುಣ್ಣುಗಳಾಗಿ, ಮೇಲೆ ಬಂದು, ಜೊತೆಯಲ್ಲೇ ಕೀವನ್ನು ಹೊರಹಾಕಿ ದೇಹವನ್ನು ಶುದ್ಧಗೊಳಿಸುವಂತೆ, ಸಮಾಜದಲ್ಲಿನ ಹೀನಭಾವಗಳು ಸಂಚಯವಾದಾಗ ಈ

ಕಲ್ಮಷವನ್ನು ಹೊರತರುವ ಹುಣ್ಣುಗಳೇ ದುಷ್ಟವ್ಯಕ್ತಿಗಳು. ಮತ್ಸರದ ಮೂರ್ತಿ ದುರ್ಯೋಧನ, ವಂಚನೆಯೇ ಮೈವೆತ್ತ ಶಕುನಿ; ಲೋಭದ ಬೊಂಬೆ ಧೃತರಾಷ್ಟ್ರ, ದ್ವೇಷವೇ ಸಾಕಾರವಾದ ಅಂಬೆ; ಭ್ರಾಂತಿ-ಮೋಹದ ಮೊಟ್ಟೆ ಅಶ್ವತ್ಥಾಮ. ಕಂಸ, ಕರ್ಣ-ದುರ್ಯೋಧನರು ಇದ್ದಾಗಲಲ್ಲವೇ ವ್ಯಾಸ ವಿದುರ ವಾಸುದೇವರ ಅಗತ್ಯ ಬೀಳುವುದು? ಇದುವೇ ಪ್ರಪಂಚದ ಚರಿತ್ರೆ! ಇವರ ಮುಖಾಮುಖಿಯೇ ಯುದ್ಧವಲ್ಲವೇ? ಅಂದರೆ ಜಗತ್ತನ್ನು ಸಮಸ್ಥಿತಿಗೆ ತರುವ ವಿಧಾನವೇ ಯುದ್ಧವೇ? ಈಗ ನಡೆದ ಯುದ್ಧದಂತೆ ಹಿಂದೆಷ್ಟೋ ಆಗಿಹೋದವು. ಇನ್ನೆಷ್ಟು ಮಹಾಯುದ್ಧಗಳು ಭವಿಷ್ಯದಲ್ಲಿ ಅಡಗಿವೆಯೋ! ಈಗ ಭರತಖಂಡಕ್ಕೆ ಸೀಮಿತವಾದದ್ದು ಮುಂದೆ ಇತರ ಭೂಖಂಡಗಳಿಗೂ-ವಿಶ್ವಕ್ಕೇ ವ್ಯಾಪಿಸಿ... ಹಿಂಸಾಚಾರದ ಹಗರಣ ಯಾವ ಪುರುಷಾರ್ಥಕ್ಕೆ? ಇದು ವಿರುದ್ಧ ದಿಕ್ಕಿನಲ್ಲಿ ವ್ಯಾಪ್ತಿಯಲ್ಲವೇ? ಸ್ನೇಹ-ಶಾಂತಿ-ಪ್ರೀತಿ-ವಿಶ್ವಾಸ ವ್ಯಾಪಿಸಬೇಕು. ದ್ವೇಷ, ಅಸೂಯೆ, ಕ್ರೋಧ, ಸಂಶಯ, ಹಿಂಸೆ ಸಂಕುಚಿತವಾಗುತ್ತಾ ಇಲ್ಲವಾಗಬೇಕು. ಕುರುಕ್ಷೇತ್ರದ ಯುದ್ಧ ಪ್ರತಿ ಮಾನವನ ಹೃದಯಕ್ಕೆ ಸೀಮಿತಗೊಂಡು ಅಲ್ಲಿ ನಿರಂತರ-ಅನುಕ್ಷಣ ನಿರ್ಣಯವಾಗಬೇಕು. ಧರ್ಮ ಗೆಲ್ಲುತ್ತಿರಬೇಕು. ಅಧರ್ಮ ಸೋಲುತ್ತಿರಬೇಕು. ಶಾಂತಿಸ್ಥಾಪನೆ ಪ್ರತಿ ಹೃದಯದಲ್ಲಾದಾಗ ಧರ್ಮಸ್ಥಾಪನೆಯಾದಂತೆ. ಇದೇ ಅಲ್ಲವೇ ಬಾಳುವ ಕಲೆ ಕಲಿಸುವ 'ಆರ್ಯಧರ್ಮ'! ಪ್ರತಿ ಮಾನವ ಈ ಮಟ್ಟಕ್ಕೆ ಏರಬಲ್ಲನೇ? ಈ ಏರುವಿಕೆಯೇ ವ್ಯಾಸ ವಾಸುದೇವರ ಧ್ಯೇಯವಾದ ಲೋಕಸಂಗ್ರಹದ ಆಂತರ್ಯದ ಅರ್ಥವೇ?

'ನಾನು' ಎನ್ನುವ ಕಿರಿದು ಅಳಿಸಿಹೋಗಿ 'ನಾವು' ಎಂಬ ಹಿರಿದು ಉಳಿಯುವುದು. ಕಡೆಗೆ 'ನಾವು' ಹೋಗಿ 'ಎಲ್ಲವೂ' ಸೇರುವ..ವಿಶಾಲ...ವಿಶಾಲ..ಗಗನದಂತೆ. ಇದೇ ಏನು ಕೃಷ್ಣ ಪದೇ ಪದೇ ಹೇಳುತ್ತಿದ್ದ 'ಗಗನಸದೃಶಳಾಗು'? ಎಲ್ಲರನ್ನು, ಎಲ್ಲವನ್ನು ಏಕಭಾವದಲ್ಲಿ ಸ್ವೀಕರಿಸುವ ಆಕಾಶದಂತೆ ನಮ್ಮ ಮನಸ್ಸು ತೆರವಾದೀತೇ? ಸ್ವೀಕರಿಸಿದರೂ ಅದರಿಂದ ರಂಜಿತವಾಗದೆ ಮುನ್ನಿನಂತೆಯೇ ನಿರ್ಲಿಪ್ತವಾಗುಳಿವ ಗುಣವೂ ಬರಬೇಕು. ಆಗ ಮಾತ್ರ 'ಗಗನಸದೃಶ' ಮನಸ್ಥಿತಿಯಲ್ಲವೇ? ಏನೇನೆಲ್ಲ ಹೊಡೆತಗಳನ್ನು ಅನುಭವಿಸಿ ಮುದಿಕಾಲಕ್ಕೆ ಈ 'ಗಗನಸದೃಶ' ಕಲ್ಪನೆ ಅರ್ಧಾರ್ಧ ಅರ್ಥವಾದಂತಿದೆಯಲ್ಲ? ಈ ಗೂಢಕಲ್ಪನೆಯನ್ನು ಹರೆಯದಲ್ಲೇ ಪಡೆದು ತನ್ನದಾಗಿಸಿಕೊಂಡವನೇ ನಮ್ಮ ವಾಸುದೇವ?

ಇದೇ ಜಾಡಿನಲ್ಲಿ ಮುಂದೆ ಹೋದರೆ.. ಸಮಷ್ಟಿಪ್ರಜ್ಞೆಯಲ್ಲಿ "ನಾನು ಮಾಡಿದೆ" ಎಂಬ ಭಾವವಿಲ್ಲ. ಕರ್ತೃತ್ವವೇ ಇಲ್ಲವಲ್ಲ! ನಾನು ಮಾಡಿದೆ ಎನ್ನುವುದಿಲ್ಲದೆ, 'ನನಗೆ ಆಯಿತು' ಎನ್ನುವ ಪರಿಣಾಮ... ಭೋಕ್ತೃತ್ವವೂ ಇಲ್ಲವಾಯಿತಲ್ಲವೇ? ಕರ್ತೃತ್ವ-ಭೋಕ್ತೃತ್ವವೇ ಇಲ್ಲದ ಸುಖ ದುಃಖದ ಆತಂಕವಿಲ್ಲದ 'ಮುಕ್ತಭಾವ'.. ಇದುವೇ ಮುಕ್ತಿಯೇ? ವ್ಯಾಸರಿಗೆ, ವಾಸುದೇವನಿಗೆ ವಿದುರನಿಗೂ ಸಹ ಯಾವುದೇ ಕೆಲಸ ತಾವೇ ಮಾಡಬೇಕೆಂಬ ಆಗ್ರಹವೇನಿಲ್ಲ. ಕಾರ್ಯ ಸಮರ್ಪಕವಾದರೆ ಆಯಿತು. ಕಾರ್ಯ ಪರಿಣಾಮ ಎರಡರಿಂದಲೂ ಸ್ವತಂತ್ರರು. ಸಾಕ್ಷೀಭಾವದಲ್ಲಿ ನಡೆಯುತ್ತಿರುವುದನ್ನು ನೋಡುತ್ತ, ಮಾಡುತ್ತ ಆನಂದಿಸುವವರು. ಸುಖದಿಂದ ದುಃಖದಿಂದ

ಬಿಡಿಸಿಕೊಂಡವರು. 'ಧರ್ಮ'ವನ್ನು ಬಿಗಿಯಾಗಿ ಹಿಡಿದರೆ, ಹಿಡಿದು ಏರುತ್ತಾ ಹೋದರೆ.. ಮೆಟ್ಟಿಲು ಮೆಟ್ಟಿಲಾಗಿ.. 'ಮುಕ್ತ'ರಾಗುವೆವೇ?

ಇದೇ ಉಪದೇಶ ನನಗೂ ಹರೆಯದ ವಯಸ್ಸಿನಲ್ಲೇ ಸಿಕ್ಕಿದ್ದರೆ? ಜೀವನದ ಬಹುಪಾಲು ಚಿಂತೆಯ ದಿನಗಳಾಗದೆ ಹೆಚ್ಚು ಆತ್ಮವಿಶ್ವಾಸದ ಬದುಕು ಸಿಗುತ್ತಿತ್ತೇ? ಉಪದೇಶ ಸಿಕ್ಕರೂ ಅರ್ಥ ಮಾಡಿಕೊಳ್ಳಲು ಬುದ್ಧಿ-ಮನಸ್ಸು ಬಲಿತಿರಬೇಕಲ್ಲ! ಚಿಕ್ಕ ಚಿಕ್ಕ ಗುರಿಗಳಿಟ್ಟು ಅವನ್ನು ಸಾಧಿಸುವಲ್ಲಿ ನಾವು ಪ್ರೌಢರಾಗುವೆವೇನೋ! ನನ್ನ ಜೀವನದಲ್ಲೂ ಗುರಿಯಿತ್ತು. ಧರ್ಮರಾಯನಿಗೆ ರಾಜ್ಯ ಸಿಗಬೇಕು ಎನ್ನುವ ಧ್ಯೇಯ ಇತ್ತು. ಅದಕ್ಕಾಗಿ ತ್ರಿಕರಣಪೂರ್ವಕ ಭೀಮಾರ್ಜುನರಾದಿಯಾಗಿ ಎಲ್ಲರೂ ಶ್ರಮಿಸಿದೆವು. ಹಿತೈಷಿಗಳೂ ಸಹಕರಿಸಿ ಪ್ರೋತ್ಸಾಹಿಸಿದರು. ಆದರೆ ಚಿಂತೆ ಬಿಡಲಿಲ್ಲವಲ್ಲ! ಯುದ್ಧ ನಿಶ್ಚಯವಾದದ್ದೇ, ವಾಸುದೇವ ನನ್ನ ಮನದಲ್ಲೂ ತುಮುಲಕ್ಕೆ ಹಚ್ಚಿಬಿಟ್ಟನಲ್ಲ! ಒಳ್ಳೆಯದೇ...ಜೀವ ತುಯ್ದಾಡಿ ನೆಮ್ಮದಿಯ ನೆಲೆ ಕಂಡಿತು. ಬುದ್ಧಿ ಹೆಚ್ಚು ತಿಳಿಯಾಗುತ್ತ ವ್ಯಾಸರ ವಿಚಾರಗಳು ಒಳಗಿಳಿಯಲು ಅನುಕೂಲವಾಯಿತು.

ಇಂದಿನ ಬುದ್ಧಿ, ಮನಸಿನ ಮಟ್ಟದಲ್ಲಿ ನಿಂತುನೋಡಿದರೆ ನನ್ನ ಬದುಕಿಗೂ ಒಂದು ವಿಶೇಷ ಅರ್ಥವಿದೆಯಲ್ಲವೇ? ನನ್ನ ಬದುಕಿನ ವಿಶಿಷ್ಟತೆ ಆರ್ಯಸಮಾಜದ ಏಳ್ಗೆಗೆ ಬೇಕಾಗಿತ್ತೇ? ಕರ್ಣನನ್ನು ಮಗ ಎಂದು ಒಪ್ಪಿಕೊಂಡದ್ದೇ ತಡ, ಹಿಂದೆ ನಡೆದುದು ಮುಂದಾಗುವುದು ಎಲ್ಲಕ್ಕೂ ಹೊಸ ಅರ್ಥ, ಹೊಸ ಆಳ, ಹೊಸ ಬಿಗುವು ಬಂದಿತಲ್ಲವೇ? ಮೊದಲಲ್ಲಿ ಕಿರುತೊರೆಯಾಗಿದ್ದ ನನ್ನ ಬಾಳು ಅರಮನೆಯಲ್ಲಿ ನಿಂತ ನೀರಾಗಿ ಕೊಳೆಯದೆ, ಹೊರ ಹರಿದು, ಗಿರಿಜನ ವನ್ಯಜನರ ನಡುವೆಯೂ ಹರಿದು ಹೊಸದನ್ನು ಸೇರಿಸಿಕೊಳ್ಳುತ್ತ ಹಿರಿದಾಗುತ್ತ, ಹೊಳೆಯಾಗಿ ನದಿಯಾಗಿ ಬೆಳೆಯಿತು. ಅಂತೆಯೇ, ನನ್ನ ಮಕ್ಕಳ ಜೀವನವೂ-ಅನುಭವಗಳ ಅಗಾಧ ಜಲವಾಗಿ.. ಕೇವಲ ರಾಜನಾಗುಳಿಯದೆ ಚಕ್ರವರ್ತಿ ಪಟ್ಟಕ್ಕೆ ಅರ್ಹತೆ ತಂದಿತ್ತು. ಹೀಗೆ ಆಗಬೇಕೆಂದೇ ನನ್ನನ್ನು ತಿದ್ದಿಕೊಂಡಿತೇ ವಿಧಿ? ಪ್ರಕೃತಿಯೂ ಇದರಲ್ಲಿ ಭಾಗಿಯೇ? ಮದುವೆಗೆ ಮೊದಲೇ ಗರ್ಭಧಾರಣೆಯ ಪರೀಕ್ಷೆ. ಅಷ್ಟೆ. ನಂತರ ಅದರಿಂದಾದ ಸಂತಾನವನ್ನೂ ಗೋಪ್ಯವಾಗಿರಿಸಿತು. ಹೆಸರಾಂತ ಧರ್ಮವಂತ ಮನೆತನದ ಭದ್ರತೆಯನ್ನು ಅಪೇಕ್ಷಿಸಿ ಕುರುರಾಜ ಮನೆತನಕ್ಕೆ ಸೇರಿಸಿದ ವಿವಾಹ. ವಿಧಿಗೆ ಬೇಕಿದ್ದುದು ದೇವಸಮಾನ ಸಂತಾನ. ಅದಕ್ಕಾಗಿ ಪಾಂಡುವಿನಿಂದಾಗದೆನಿಸಿ ನಿಯೋಗದ ಸಂತಾನ. ಐದೂ ಜನರ ಮಕ್ಕಳ ತಂದೆಯರು ದೇವವರ್ಗದವರು. ಐವರು ಮಕ್ಕಳ ಐಕ್ಯತೆಗಾಗಿ ಒಗ್ಗಟ್ಟಿನ ಬಲಕ್ಕಾಗಿ ಒಬ್ಬಳೇ ಪತ್ನಿ-ಕ್ಷತ್ರಿಯ ಸಮಾಜದಲ್ಲಿ ರೂಢಿಯಲ್ಲಿಲ್ಲದಿದ್ದರೂ, ಸಮಾಜದ ಅನುಮತಿ ಸಿಕ್ಕಿ ನಡೆದ ವಿಶೇಷ-ದ್ರೌಪದೀ ವಿವಾಹ. ಗೆದ್ದು ತಂದವನು ಅರ್ಜುನನಾದರೂ ಧರ್ಮಜನ ಪಟ್ಟಮಹಿಷಿ! ಸಮಾಜದ ಮನ್ನಣೆಯೊಂದಿಗೇ ಇಂತು ಹೊಂದಿಸಿದ ಎಲ್ಲ ವಿಶೇಷ ಸಂಗತಿಗಳ ಉದ್ದೇಶ? ಧರ್ಮ ರಾಜ್ಯ ಸ್ಥಾಪನೆ-ಸಮಾಜದ ಕ್ಷೇಮಾಭಿವೃದ್ಧಿ.

ನನಗೆ ಇದೆಲ್ಲ ಚಿಕ್ಕವಯಸ್ಸಿನಲ್ಲೇ ತಿಳಿದಿದ್ದರೆ ಅಹಂಕಾರದಿಂದ ಮನಸ್ಸು ಬುದ್ಧಿ ವಿಕಾರವಾಗುತ್ತಿತ್ತೇನೋ! ಅದಕ್ಕೆ ಅವಕಾಶ ಕೊಡದೆ ನನ್ನ ಕಣ್ಮುಂದೆ ಅಜ್ಞಾನದ ತೆರೆ ಎಳೆದು

ತನ್ನ ಕಾರ್ಯ ನಡೆಸಿಕೊಂಡಿತೇ ವಿಧಿ? ವಿಧಿಯ ಕೈವಾಡ ಬಲ್ಲವರಾರು? ವ್ಯಾಸರಂತೆ ಮಾನಸಿಕ ದೂರ ತಂದುಕೊಂಡು ಸಾಕ್ಷೀಭಾವದಲ್ಲಿ ನೋಡುವ ಪೂರ್ಣದೃಷ್ಟಿಯ ಯೋಗಿಗಳಿಗೆ ಮಾತ್ರ ಸಾಧ್ಯವೇನೋ! ನಿಜಸಂಗತಿ-ಕರ್ಣನ ಜನನ-ವ್ಯಾಸರಿಗೆ ಮೊದಲೇ ತಿಳಿದಿತ್ತೇ? ತಮ್ಮ ಸಂಚಾರ ಕಾಲದಲ್ಲಿ ಋಷಿಮುನಿಗಳಿಂದ ಅನೇಕ ಮಾಹಿತಿ ಸಂಗ್ರಹಿಸುವಾಗ ನನಗೆ ತಿಳಿದಿದ್ದ ಮಂತ್ರ, ಹಾಗೂ ಕುತೂಹಲದಲ್ಲಿ ಮಾಡಿದ್ದ ಅದರ ಪ್ರಯೋಗದ ವಿಷಯವೂ ವ್ಯಾಸರಿಗೆ ತಿಳಿದುಬಂದಿರಬಹುದು. ಬಹುದೇನು, ತಿಳಿದಿರಬೇಕು. ಕರ್ಣನ ತ್ಯಜನದಲ್ಲೂ ಅವರಿಗೆ ವಿಧಿಯ ಹಸ್ತಕ್ಷೇಪ ಕಂಡಿತೇ? ಕರ್ಣ ದುರ್ಯೋಧನನ ಸ್ನೇಹ ಬೆಳೆದಂತೆ ಕರ್ಣನಲ್ಲೂ ವ್ಯಾಸರಿಗೆ ತಮ್ಮ ಕಾರ್ಯಕ್ಕೊಂದು ಸಲಿಕೆ ಸಿಕ್ಕಿತೇ? ಅವನ ಹುಟ್ಟನ್ನು ಗೋಪ್ಯವಾಗಿರಿಸಿದ ಕಾರಣ? ದುರ್ಯೋಧನನ ಪಕ್ಷದಲ್ಲೇ ಕರ್ಣನನ್ನು ಉಳಿಸಿದ ಉದ್ದೇಶ? ತಾನು ಕುಂತೀಪುತ್ರನೆಂದು ಗೊತ್ತಾದಾಗಲಾದರೂ ಕರ್ಣ ದುರ್ಯೋಧನನ ಮನಸ್ಸನ್ನು ಪಾಂಡವರ ಕಡೆಗೆ ತಿರುಗಿಸಿ ಯುದ್ಧ ನಿಲ್ಲಸಬಹುದೆಂಬ ದೂರದ ಆಸೆಯೇ? ಅಥವಾ... ಮುಳ್ಳನ್ನು ಮುಳ್ಳಿನಿಂದ ತೆಗೆವ ವಿಧಾನವೇ? ಇಂತೋ... ಅಂತೋ... ದುರ್ಯೋಧನನ ಬತ್ತಳಿಕೆಯಲ್ಲಿ ಮೊನೆ ಮುರಿದ ಬಾಣವಾಗಿ ಹೋದ ಕರ್ಣ!

ಎಲ್ಲ ಘಟನೆಗಳೂ ತಮ್ಮದೇ ರೀತಿಯಲ್ಲಿ ಹೆಣೆದುಕೊಳ್ಳುತ್ತ ಕರ್ಣನ, ದುರ್ಯೋಧನನ ಕೊರಳಿಗೆ ಉರುಳಾದವು. ವ್ಯಾಸರಿಗೆ ಇದೆಲ್ಲ ನಿಚ್ಚಳವಾಗಿ ಕಾಣುತ್ತಿತ್ತಲ್ಲವೇ?...ಒಬ್ಬೊಬ್ಬರ ಗುಣ-ಸ್ವಭಾವದ ಮೇಲೆ ಘಟನೆಗಳ ಪರಿಣಾಮ ಅಂಗೈ ಅಮಲಕದಂತೆ ವ್ಯಾಸರಿಗೆ ಸರ್ವವಿದಿತ. ನಾವು ಮೂಢಮತಿಗಳು. 'ನಾನು ಮಾಡಿದೆ' – 'ನನಗಾಯಿತು' ಎಂದು ಗಲಭೆ ಎಬ್ಬಿಸುತ್ತಿದ್ದೆವು. ನಮ್ಮೆಲ್ಲರ ಅಜ್ಞಾನ, ಅಹಂಕಾರದ ಕೂಗಾಟದಲ್ಲೂ ತಾಳ್ಮೆ ಕಳೆದುಕೊಳ್ಳದೆ, ಏಕಪ್ರಕಾರದ ಪ್ರೋತ್ಸಾಹ ಕೊಟ್ಟು ನಮ್ಮನ್ನು ಸರಿದಾರಿಯಲ್ಲಿ ನಡೆಸಿದ ಹಿರಿಯ ಜೀವ.. ವ್ಯಾಸರು. ಅವರ ಮಮತೆ-ವಿಶ್ವಮಮತೆ! ಎಷ್ಟೇ ಅಜ್ಞಾನಿಯಾದರೂ ಪ್ರತಿಯೊಂದು ಪ್ರತಿಯೊಂದು ಜೀವದಲ್ಲೂ ವೈಶಿಷ್ಟ್ಯಪೂರ್ಣ ಉಪಯುಕ್ತತೆ ಕಂಡು, ಲೋಕದಲ್ಲಿ ಅದರ ಅಸ್ತಿತ್ವಕ್ಕೆ ಅರ್ಥ ಕೊಡುವ 'ಧರ್ಮಪಿತ' ವ್ಯಾಸರು. ನನ್ನ ಅದೃಷ್ಟ ಅಗಾಧವಿರಬೇಕು. ಇಂತಹವರ ಕೃಪಾಹಸ್ತ ನನ್ನ ನೆತ್ತಿಯ ಮೇಲೆ, ನನ್ನ ಮಕ್ಕಳ ಮೇಲೆ ಅನವರತ-ಧನ್ಯೆ ನಾ ಧನ್ಯೆ!

ವ್ಯಾಸರು-ವಿದುರ-ವಾಸುದೇವ-ಇನ್ನೂ ಯಾರಾರೋ... ಇವರಿಗೆಲ್ಲಾ ಕಾಣುವ ಆ ದೊಡ್ಡ 'ಒಂದು'... ಏನು ಹೇಳಿದ್ದಾರೆ?..

"ವಿರಾಟ್ ಪುರುಷ"- ನಾವು ಅದರ ಭಾಗಗಳು. ಅಂಶಗಳೇ...ವಾಸುದೇವ, ಅಂದು, ಪಾಂಡವರಿಂದ ಸಂಧಾನದ ಪ್ರಸ್ತಾಪ ತಂದ ವೇಳೆ ಹೇಳಿದ್ದು ನೆನಪಿದೆ..

"ಅತ್ತೇ, ಪಾಂಡವರೆಂಬ ಧರ್ಮರಥದ ಸಾರಥಿ ನಾನು. ರಥದ ಬಿಡಿ ಭಾಗಗಳಿಗೆ ಯಾವುದೇ ಮೌಲ್ಯವಿಲ್ಲ. ಬೇರೆ ಬೇರೆ ರೂಪದ, ಗಾತ್ರದ ಭಾಗಗಳು ಮತ್ತಾವ ಕೆಲಸಕ್ಕೂ ಬಾರದವು. ಸರಿಯಾಗಿ ಒಂದಕ್ಕೊಂದನ್ನು ಜೋಡಿಸಿ ಚಾಲನೆ ಕೊಟ್ಟರೆ ಎಲ್ಲ ಬಿಡಿ ಭಾಗಗಳ ಮೊತ್ತವನ್ನು ಮೀರಿದ, ಬೇರೆಯದೇ ಆದ, ರಕ್ಷಣೆಯ ಶೀಘ್ರಗಾಮಿ ರಥವಾಗುವುದಲ್ಲವೇ.

ಅಂತೆಯೇ ಪಾಂಡವರೈವರು ಬಿಡಿಯಾಗಿ ಸಾಧಿಸಲಾಗದುದನ್ನು ಒಟ್ಟಾಗಿ ಸಾಧಿಸುವೆವು. ಧರ್ಮಸ್ಥಾಪನೆಗೆ ಈ ಧರ್ಮರಥ ಮತ್ತು ಈ ಧರ್ಮಯುದ್ಧ ಎರಡೂ ಅತ್ಯಗತ್ಯ..."

ವಾಸುದೇವನ ಈ ಸಾಮತಿ ಲೋಕಕ್ಕೂ ಅನ್ವಯಿಸುತ್ತದೆಯಲ್ಲವೇ? ಲೋಕದ ಪ್ರತಿಯೊಂದು ವಸ್ತುವೂ ಅಗತ್ಯವಾದದ್ದೇ. ಪ್ರತಿಯೊಂದರ ಅಸ್ತಿತ್ವಕ್ಕೂ ಅದರದೇ ಮಹತ್ವ ಇದೆ. ರಥದ ಗಾಲಿಯ ಅಡಿಗೆ ಸಿಕ್ಕಿ ನುಜ್ಜಾಗುವ ಮಣ್ಣ ಕಣಕ್ಕೂ ಅರ್ಥವಿದೆ. ಅದು ಕೊಡುವ ವಿರೋಧ-ತಡೆಯಿಂದಾಗಲ್ಲವೇ ಗಾಲಿ ಮುಂದುರುಳುವುದು! ಪ್ರತಿಯೊಂದರ ಅಸ್ತಿತ್ವಕ್ಕೂ ಅರ್ಥವಿದೆ. ಎಲ್ಲವೂ 'ವಿರಾಟ್'ನ ಭಾಗಗಳು. ಈ ಎಲ್ಲ ಭಾಗಗಳಿಂದಾಗಿ 'ವಿರಾಟ್'ನ ಅಸ್ತಿತ್ವ! ಇದನ್ನರಿತ ಕ್ಷಣದಲ್ಲೇ ನಾವೂ ಅದರಲ್ಲೊಂದಾಗಿ, 'ಅದೇ' ಆಗಿಹೋಗುವೆವಲ್ಲವೇ! ವ್ಯಾಸರು 'ಅದೇ' ಆಗಿಹೋಗಿರುವ 'ಸಿದ್ಧ'. ನಾವೆಲ್ಲರೂ 'ಅದೇ' ಆಗಬಹುದಾದ 'ಸಾಧ್ಯ'ಗಳು. ಕೃಷ್ಣ? ಅವನ ಎಲ್ಲ ನಡೆನುಡಿಯಲ್ಲಿ 'ಅದು' ಪ್ರತಿಧ್ವನಿತವಲ್ಲವೇ? ಧರ್ಮಾದಿಗಳು, ದ್ರೌಪದಿ ಕೃಷ್ಣನಲ್ಲಿಟ್ಟಿರುವುದು ಪ್ರೀತಿಯೇ? ವಿಶ್ವಾಸವೇ? ಅಥವಾ ಜ್ಞಾತಾಜ್ಞಾತವಾಗಿರುವ ಈ 'ವಿರಾಟ್'ನ ಅರಿವೇ ಅದರ ಭಾಗ ತಾವೆಂಬ ಆತ್ಮೀಯತೆಯೇ? ಕೃಷ್ಣ ಯಾರು? ಅಲ್ಲಲ್ಲ..ಕೃಷ್ಣ 'ಏನು'? ಇದೆಂಥ ಪೇಚಿನ ಪ್ರಶ್ನೆ ನನ್ನದು? ನನ್ನ ಬುದ್ಧಿ ಮನಸ್ಸು ಎರಡೂ ನಿಲುಕದ ಯಾವುದನ್ನೋ ನಿಲುಕಿಸಿಕೊಳ್ಳುವಲ್ಲಿ.. ನನಗಿದಾವ ಹುಚ್ಚು ಹಿಡಿದಿದೆಯೋ!

ಹದಿಮೂರು ವರ್ಷಗಳ ಕಷ್ಟಕೋಟಲೆ, ವನವಾಸದ ನಂತರ ನಾಳೆ ಧರ್ಮರಾಯನಿಗೆ ಪಟ್ಟಾಭಿಷೇಕ, ವರ್ಷಗಳ ಹಗಲುಗನಸುಗಳು ನನಸಾಗುವ ದಿನ. ಆದರೆ ನನ್ನೊಳಗೆ..ಏನೂ ಇಲ್ಲದ, ಏನೂ ಆಗದ, ಏನೂ ಬೇಡದ ತಾಟಸ್ಥ್ಯವೇ? ಬೆಟ್ಟಹತ್ತಿ ನಿಂತ ಮೇಲೆ ಎದುರಿಗಿನ್ನೊಂದು ಹೊಸ ಲೋಕವೇ ತೆರೆದುಕೊಂಡಂತೆ-ಹಳತೆಲ್ಲ ಕೊಚ್ಚಿಹೋಗಿ.. ಯುದ್ಧದ ಏರು ಮುಗಿದು, ವ್ಯಾಸರ ಉಪದೇಶ ಕೇಳಿದ್ದೇ..ಹೊಸತೊಂದು-ಪ್ರಪಂಚದ 'ದರ್ಶನ'. ದೃಶ್ಯಾದೃಶ್ಯವಾದರೂ ಅದರ ಅಗತ್ಯದ ಅನಿಸಿಕೆ. ಧರ್ಮರಾಯನ ಪಟ್ಟಾಭಿಷೇಕವೊಂದು ಅನಿವಾರ್ಯ ಕಾರ್ಯವಾಗಿದೆ. ಆಗಬೇಕು. ಆಗುತ್ತದೆ. ಈಗ ಮನಸ್ಸಿನಲ್ಲಿರುವುದೆಲ್ಲ ಒಂದೇ ಭಾವ ಅಳುವಿನಿಂದ, ಆತಂಕದಿಂದ ಕಳಚಿಕೊಂಡ ಭಾವ. ಬಿಡುಗಡೆಯ ಹಗುರಭಾವ. ವಿದುರನೊಡನೆ ಮಾತನಾಡಬೇಕೆನಿಸುವುದು. ಈ ತರಹದ ಅನಿಸಿಕೆಗಳು ಅದೂ ನನ್ನ ಮಾತಿನಲ್ಲಿ ಬೇರಾರಿಗೂ ಅರ್ಥವಾಗದು. ವಿದುರನಾದರೆ ತಟ್ಟನೆ ಗ್ರಹಿಸಬಲ್ಲ. ಈಗೀಗ ಅನಿಸುತ್ತದೆ... ನನ್ನಲ್ಲಿ ಬರುತ್ತಿರುವ ವಿಚಾರಗಳಲ್ಲೆಲ್ಲ ವಿದುರನ ಕೈವಾಡವಿದೆಯಲ್ಲವೇ? ಹದಿಮೂರು ವರ್ಷ ಅವನ ಮನೆಯಲ್ಲಿದ್ದುದು 'ಮಕ್ಕಳು ವನವಾಸ ಮುಗಿಸಿ ಬರುವವರೆಗೆ' ಎನ್ನುವ ಕಾಯುವಿಕೆಯಲ್ಲಿ. ನನಗೆ ಗೊತ್ತಿಲ್ಲದೆಯೇ ವಿದುರ ನನ್ನೊಳಗಿನ ವಿಚಾರಗಳನ್ನು ತಿದ್ದಿ, ತೀಡಿ ಚಿಂತನೆಗೆ ಹಚ್ಚುವುದು ನಡೆದಿದೆಯಲ್ಲವೇ? ನನ್ನೊಳಗಿನ ವಿಚಾರಗಳ ಬಹುಪಾಲು ಅವನವೇ! ನನ್ನ-ವಿದುರನ ಸಂಬಂಧ-ಇದ್ದೂ ಇಲ್ಲದಂತಹುದು. ಸಲುಗೆಯಿದ್ದರೂ ಒಂದು ಬಗೆಯ ದೂರ... ವಾವೆಯಲ್ಲಿ ಅತ್ತಿಗೆ ಮೈದುನರಾದರೂ ವ್ಯವಹಾರದಲ್ಲಿ ವಿದುರನದು ಒಂದು ಮಾರು ದೂರದಿಂದಲೇ!... ಆದರೂ ಮನದಾಳದವರೆಗೆ ಇಳಿಯಬಲ್ಲವ... ಮನದಲ್ಲಿರುವುದನ್ನು ಹೆಕ್ಕಿ ಹೊರಹಾಕಬಲ್ಲ ಆತ್ಮೀಯ...ಆತ್ಮೀಯ ಬಂಧು? ಏನೋ...

ಇದ್ದಾನಲ್ಲ ಅಷ್ಟು ಸಾಕು. ಬೇಕೆಂದಾಗ ಮಾತನಾಡಿಸಿ ಮನ ಹಗುರ ಮಾಡಿಕೊಳ್ಳಲು ಇದ್ದಾನಲ್ಲ.. ವಿದುರನನ್ನು ನಾನೆಷ್ಟು ಅವಲಂಬಿಸಿದ್ದೇನೆ... ಊಟ ವಸತಿಯಷ್ಟೇ ಅಲ್ಲ... ಮನಸ್ಸು ಬುದ್ಧಿಗೂ ಉಣಿಸಿದವ. ವ್ಯಾಸರ, ವಾಸುದೇವನ ಕಾರ್ಯಕ್ಕೆ ನನ್ನನ್ನು ಹದಮಾಡಿಟ್ಟವ!

ನನ್ನನ್ನು ಹದಮಾಡಿದಂತೆ ಅತ್ತಿಗೆ ಗಾಂಧಾರಿಯನ್ನೇಕೆ ಮಾಡಲಿಲ್ಲ? 'ಮಹಾರಾಣಿ' ಎಂಬ ಕಾರಣವೇನೋ! ನನ್ನ ವಿಧವೆ ಪಟ್ಟವೂ ನನಗೆ ವರವೇ ಆಯಿತಲ್ಲವೇ? ಆದದ್ದೆಲ್ಲ ಒಳಿತಿಗೇ!.. ಗಾಂಧಾರಿಗೆ? ಒಳಿತಾಯಿತೇ? ಆಗಿಲ್ಲವೇ?.. ಜೀವನ ಪಾಠ ಕಲಿಸಿತಾದರೂ ಕಲಿಯದಿದ್ದರೆ ಬಲವಂತದಲ್ಲಿ ಮತ್ತೆ ಮತ್ತೆ ಪೆಟ್ಟು ಕೊಟ್ಟು ಕಲಿಸುತ್ತದೆ. ತಮ್ಮ ಮಕ್ಕಳ ನಲವತ್ತು ವರ್ಷಗಳ ಅನೀತಿಯ, ದುರ್ನಡತೆಯ ಬಾಳು ಧೃತರಾಷ್ಟ್ರ ಗಾಂಧಾರಿಯರಿಗೆ ಸಹ್ಯವಾಯಿತು. ರಣಭೂಮಿಯಲ್ಲಿ ತನ್ನ ತಾ ರಕ್ಷಿಸಿಕೊಳ್ಳುವ ಭೀಮನ ಯುದ್ಧರೀತಿ ಸಹ್ಯವಾಗಲಿಲ್ಲ. ಪಾಂಡವರನ್ನು ಅರಗಿನ ಮನೆಯಲ್ಲಿಟ್ಟು ಬೆಂಕಿಯಿಕ್ಕಿದ್ದು, ಅಭಿಷಿಕ್ತ ಕುಲವಧುವನ್ನು ತುಂಬಿದ ಸಭೆಯಲ್ಲಿ ಎಳೆದಾಡಿದುದು ಸಹ್ಯವಾಯಿತು. ಯುದ್ಧದಲ್ಲಿ ತನ್ನ ಮಕ್ಕಳ ಸೋಲು-ಸಾವು ಸಹ್ಯವಾಗಲಿಲ್ಲ. ಸಂಧಾನದ ಪ್ರಸ್ತಾಪದೊಂದಿಗೆ ದೂತನಾಗಿ ಬಂದಿದ್ದ ಕೃಷ್ಣನನ್ನು ಬಂಧಿಸುವ ದುರ್ಯೋಧನನ ಯತ್ನ ಸಹ್ಯವಾಯಿತು. ಕೃಷ್ಣನು ಪಾಂಡವ ಪಕ್ಷಪಾತಿ ಎನ್ನುವುದು ಸಹ್ಯವಿಲ್ಲ! ಈಗ ದುರ್ಯೋಧನ ಮೊದಲಾದವರಿಲ್ಲದ ಹಸ್ತಿನಾವತಿಯ ಅರಮನೆಯಲ್ಲಿ ಧರ್ಮಾದಿಗಳ ಆಗಮನ ಸಹ್ಯವಾದೀತೇ? ಪುತ್ರವ್ಯಾಮೋಹದ ಮೋಡ ಬುದ್ಧಿಯನ್ನು, ಮನವನ್ನೂ ಇನ್ನೂ ದಟ್ಟೈಯಿಸಿ ಕವಿದಿದೆ. ಗಾಂಧಾರಿ ಧೃತರಾಷ್ಟ್ರ ಇಬ್ಬರೂ ತಾವೇ ಕಟ್ಟಿದ ಅಗ್ನಿಪಂಜರದೊಳಗೆ ಹೊಕ್ಕವರು-ತಾವಾಗಿಯೇ ಹೊರಬರಬೇಕು. ಅಲ್ಲಿಯವರೆಗೂ ಪುತ್ರಶೋಕದ ಝಳ... ಬೇಯಲೇಬೇಕು.

ಈಗಲೂ ಕಣ್ಣಿಗೆ ಕಟ್ಟಿದೆ-ಗಾಂಧಾರಿಯ ವಿಹ್ವಲ ಸ್ಥಿತಿ... ದುರ್ಯೋಧನ ಹುಟ್ಟಿದಾಗಿನಿಂದಲೂ-ಎಲ್ಲರಿಂದಲೂ ಅವನ ಬಗ್ಗೆ ಕೇಳುತ್ತ ಬಂದಿದ್ದ ದೂರುಗಳು! ಕಡೆಗೆ ಬರಿದಾದ ಒಡಲು-ಮನೆ; ಏನೂ ಮಾಡಲಾಗದ ಹತಾಶೆ; ಎಲ್ಲವನ್ನೂ ಹಸಿರುಗಟ್ಟಿದ ಪಿತ್ತದಂತೆ ಕಾರಿಕೊಂಡದ್ದು ವಾಸುದೇವನ ಮೇಲೆ!

'ವಾಸುದೇವ, ನಿನ್ನಲ್ಲಿ ವಾಕ್ಚಾತುರ್ಯವಿತ್ತು, ಶಕ್ತಿ ಸಾಮರ್ಥ್ಯವಿತ್ತು. ದಾಯಾದಿಗಳಲ್ಲಿನ ಹೊಡೆದಾಟವನ್ನು ನೀನು ಮನಸ್ಸು ಮಾಡಿದ್ದರೆ ತಪ್ಪಿಸಬಹುದಾಗಿತ್ತು. ನೀನು ಉಪೇಕ್ಷಿಸಿದೆ. ಭರತಕುಲದ ನಾಶವಾದಂತೆಯೇ ನಿನ್ನ ಯಾದವ ಕುಲವೂ ದಾಯಾದಿ ಜಗಳದಲ್ಲಿ ನಾಶವಾಗುವುದು. ಕುರುವಂಶದ ಸ್ತ್ರೀಯರು ಧೃತಿಹೀನರಾಗಿ, ಗೋಳಾಡುತ್ತಿರುವಂತೆಯೇ ಯಾದವ ಸ್ತ್ರೀಯರೂ ಹೀಗೆಯೇ ಬೀದಿಗಿಳಿದು ಗೋಳಾಡುವರು. ನೀನು ಎಲ್ಲರನ್ನೂ ಕಳೆದುಕೊಂಡು ಅನಾಥನಂತೆ ಕಾಡಿನಲ್ಲಿ ಅಲೆಯುತ್ತ ಕುತ್ಸಿ ರೀತಿಯಲ್ಲಿ ಸಾಯುವೆ.."

ವಾಸುದೇವನದು ಅದೇ ಅರ್ಥಗರ್ಭಿತ ನಗೆ-ನಸುನಗೆ!

"ಅಮ್ಮಾ ಕ್ಷತ್ರಿಯೆ! ಇದನ್ನು ನಾನು ಬಲ್ಲೆ. ದೈವ ನಿಯಮದಂತೆ ಯಾದವ ವೀರರೂ ಪರಸ್ಪರ ಹೊಡೆದಾಡಿ ಸಾಯುತ್ತಾರೆ. ಅವರೂ ನನ್ನಿಂದಲೇ ಸಾಯಬೇಕು. ಮತ್ತಾರೂ

ಯಾದವರನ್ನು ಕೊಲ್ಲಲಾರರು. ದುಃಖ ಬಿಟ್ಟೇಳು! ನಿನ್ನ ತಪ್ಪನ್ನು ನನ್ನ ಮೇಲೆ ಹಾಕಬೇಡ. ನಿನ್ನಿಂದಲೇ ಕುರುವಂಶ ನಾಶಮಾಡಿದ್ದು. ನಿನ್ನ ಮಗ ಹೊಟ್ಟೆಕಿಚ್ಚಿನವ, ದುರಾತ್ಮ, ದುರಭಿಮಾನಿ, ಕಠಿಣ ಮನಸಿನವ, ವೈರಸಾಧಿಸುವವ, ಹಿರಿಯರನ್ನು ಗೌರವಿಸವದವ. ಅವನು ಮಾಡಿದ ದುಷ್ಕೃತ್ಯವನ್ನು ಸರಿಯನ್ನುವಿಯೇನು? ಹಸುವು ಭಾರ ಎಳೆಯುವ ದನವನ್ನು, ಕುದುರೆಯು ಓಡುವ ಕುದುರೆಯನ್ನೂ ಪಡೆಯುವಂತೆ, ನಿನ್ನಂಥ ರಾಜಪುತ್ರಿಯು ಅವನಂಥ ವಧಾಪೇಕ್ಷಿಯಾದವನನ್ನು ಹೆತ್ತಿದ್ದು ಸಹಜವಾಗಿಯೇ ಇದೆ!..."

ಗಾಂಧಾರಿಯ ಕ್ರೋಧದ ಹೆದ್ದರೆಗೆ ಎದೆಕೊಟ್ಟು ನಿಂತವ ಕೃಷ್ಣನೊಬ್ಬನೇ!... ಗಾಂಧಾರಿಗೆ ಸತ್ಯದ, ನ್ಯಾಯದ ಕಹಿ ಔಷಧಿಯನ್ನು ಮೂಗು ಹಿಡಿದು ಕುಡಿಸಿದವನೂ ಅವನೇ. ಗಾಂಧಾರಿ ಕಾರಿದ ಶಾಪದ ಹೊಲೆಯನ್ನು ನಗುನಗುತ್ತಲೇ ಹೊತ್ತವರೂ ಅವನೇ. ತನ್ನ ಕುಲದ ನಾಶವನ್ನು ಬಯಸಿದವರ ಮೇಲೂ ಅದೇ ತಾಳ್ಮೆ, ಅದೇ ಮರುಕ–ಅದೇ ಸಾಂತ್ವನದ ನುಡಿ..

'ನಾನು'–'ನನ್ನ ಮಗ'–'ನನ್ನ ಸಿಂಹಾಸನ'–'ನನ್ನ ರಾಜ್ಯ', ಎಂದು 'ನನ್ನ'ಯ ಕಪ್ಪೆಗೂಡಿನಲ್ಲಿ ಒಳಮುಖವಾಗಿ ತೂರಿಕೊಂಡಿರುವವರೆಗೆ ಹೊರಗಿನ ವಿಶಾಲ ಜಗತ್ತು ಕಲ್ಪನೆಗೂ ಬಾರದ ವಿಷಯ. ಜೀವನಪರ್ಯಂತ ಕುರುಡು ಕುರುಡಾಗಿಯೇ ಬದುಕಿ, ತಾವು ಹುಟ್ಟಿದ ಮನುಷ್ಯಲೋಕದ ಪರಿಚಯವನ್ನಾದರೂ ಮಾಡಿಕೊಳ್ಳದೆ ಕೊನೆಯುಸಿರೆಳೆದರೆ ಎಂತಹ ನಷ್ಟ! ಧೃತರಾಷ್ಟ್ರ ಗಾಂಧಾರಿಯರು ಈಗಲಾದರೂ ಎಚ್ಚೆತ್ತು, ಯುದ್ಧದ ನಂತರದ ಹೊಸ ಜಗತ್ತನ್ನು ಒಪ್ಪಿಕೊಂಡು ನೆಮ್ಮದಿ ಪಡೆಯುವುದು ಲೇಸು. ಅವರಿಗೀಗ ತಮ್ಮ ದುಃಖವನ್ನು ಅರ್ಥ ಮಾಡಿಕೊಂಡು ಸಂತಯಿಸುವ ವಿಶ್ವಾಸಪಾತ್ರ ಆತ್ಮೀಯರೊಬ್ಬರ ಅವಶ್ಯಕತೆ ಬಹಳವಿದೆ. ಸಂತಯಿಸಿ, ನಂಬಿಕೆ ತರಿಸಿ ಕೈಹಿಡಿದು ಮಮಕಾರದ ಗೂಡಿನಿಂದ ವಿಶಾಲ ಜಗತ್ತಿಗೆ ಕೈಹಿಡಿದು ಕರೆತರುವ ಬಂಧುವಿನ ಅಗತ್ಯವಿದೆ. ನಾನು ಅವರೊಡನಿದ್ದು ಸಾಂತ್ವನ ನೀಡಬಲ್ಲೆ ಎನಿಸುವುದು. ನನ್ನ ಕರ್ತವ್ಯವೂ ಹೌದು. ಆದರೆ, ಪಾಂಡವರ ತಾಯಿ–ನಾನು ಕುಂತಿ–ಅವರ ವಿಶ್ವಾಸ ಗಳಿಸುವುದೆಂತು? ವಿಶ್ವಾಸ ಗಳಿಸಿ ಅವರ ಮನಸ್ಸಿಗೆ ನೆಮ್ಮದಿ ಸಿಗುವಂತೆ ಸೇವಿಸಿದೆನಾದರೆ ವ್ಯಾಸರ, ವಿದುರನ ಶಿಷ್ಯೆಯಾದುದು ಸಾರ್ಥಕ!



# ಅಧ್ಯಾಯ ೫

ಕರ್ಣನ ಬಲಿ ಕೇಳಿದೆನಲ್ಲವೇ? ಪಾಂಡವರ ವಿಜಯಕ್ಕಾಗಿ ನಿನ್ನ ಕರ್ಣನ ಜೀವನ ಬಲಿ! ಇಕೋ! ಜೀವಕ್ಕೆ ಜೀವ, ನಿನ್ನ ಕುರುವಂಶದ ಕುಡಿಯ ಜೀವ, ಅಭಿಮನ್ಯುವಿನ ಮಗು–ನಿನ್ನ ಮಡಿಲಿಗಿಟ್ಟೆ, ಸಂಬಾಳಿಸು..." – ಪರೀಕ್ಷಿತನ ಜನನವಾಗಿತ್ತು!

ಕೃಷ್ಣನಿಗೇನಾಯಿತು? ಇದು ಕೃಷ್ಣನ ದನಿಯಲ್ಲ, ಗುಡುಗಿನಂತೆ ಗುಂಭವಾಗಿ ಮೊಳಗಿದ ಸ್ವನ. ಅದರೊಳಗಿನಿಂದ ಕೇಳಿ ಬಂದ ಕೊಳಲುಲಿವಿನ ಅಳು–ತುಂಬಿದುಸುರಿನ ಅಳು. ಹಸುಳೆಯ ಅಳು. ಕೈಕಾಲು ಬಡಿವ ಹಸುಳೆಯನ್ನು ನನ್ನ ಕೈಗಿರಿಸುವಾಗ ಸವರಿದ ಕೃಷ್ಣನ ಕೈ–ನನ್ನ ದೇಹಾದ್ಯಂತ ಮಿಂಚು! ವರ್ಣಿಸಲಾಗದ ಅನುಭವ. ಮಗುವನ್ನು ನನ್ನ ಮಡಿಲಿಗಿಟ್ಟಾಗ ತೀರ ಸನಿಹದಲ್ಲಿ... ಮುಖಕ್ಕೆ ಮುಖ ಬಂದಾಗ... ಯಾರೀತ? ಕೃಷ್ಣನೇ? ಹೌದು... ಅಲ್ಲಲ್ಲ... ಅವನೇ! ಆದರೆ ಏನೋ ಹೊಸತು ಅವನಲ್ಲಿ. ಅಥವಾ... ನನ್ನಲ್ಲಿ? ಮನಸ್ಸು ಬುದ್ಧಿಯನ್ನು ದಾಟಿ ಒಳಸರಿದು ಬಂದ ಅನುಭವ. ಕೃಷ್ಣನೇ ಆದರೂ ಅವನಂತಿಲ್ಲ. ತನ್ನ ನಿಜರೂಪ ತೋರಿಸಿದನೇ? ನಾವು ಇದುವರೆಗೆ ನೋಡಿದ್ದುದು ನಿಜವಲ್ಲವೇ? ನಿಜವಾದರೆ, ಈಗ ಇನ್ನೂ ಹೆಚ್ಚು ನಿಜವೆಂದೆನಿಸುವ ಈ ರೂಪ ಏನು?.. ಸೌಮ್ಯವಲ್ಲದ ಕ್ರೂರವೂ ಅಲ್ಲದ 'ದೃಷ್ಟಿ' ಯಾರದು? ಈತ ಕೇಳುತ್ತಿರುವುದೇನನ್ನು? ಹೇಳುತ್ತಿರುವುದೇನನ್ನು? ದಿಙ್ಮೂಢಳಾಗಿ ಅವನನ್ನೇ ದಿಟ್ಟಿಸುತ್ತಿದ್ದವಳ ಬಳಿಗೇ ಬಗ್ಗಿ, ಹೇಳಿದ 'ಜೀವಕ್ಕೆ ಜೀವ'! ಮಿಂಚು ಹೊಡೆದಿತ್ತು, ಅದೇ ಕ್ಷಣದಲ್ಲಿ ನನ್ನ ದೇಹದ ಶಕ್ತಿಯೆಲ್ಲ ಕಣ್ಣಿಗೇ ಹರಿದಂತೆ.. ದೇಹವೆಲ್ಲ ಕಣ್ಣಾದಂತೆ... ಕಣ್ಣಿನಿಂದಲೇ ಹರಿದು ಆತನ 'ದೃಷ್ಟಿ'ಯಲ್ಲಿ ಸೋರಿಹೋದಂತೆ... ಎಲ್ಲವೂ ಶೂನ್ಯ... ಶೂನ್ಯದ ಮೌನ. ಕಿವಿಗಡಚಿಕ್ಕುವ ಮೌನ...

* * *

ಕಣ್ಮುಂದೆ ಎತ್ತರೆತ್ತರಕ್ಕೆ ಆಡುತ್ತಿರುವ ಕಾಳ್ಗಿಚ್ಚಿನ ಕೆನ್ನಾಲಗೆ–ಅದರಿಂದ ಹೊರಹಾರಿ ಹಾರಿ ಸಿಡಿಯುವ ಕಿಡಿಗಳ ಸದ್ದು ಕಿವಿಯಲ್ಲಿ ಮೊರೆವುದೂ ವಿಚಿತ್ರ ಅನುಭವ! ಈ ಕಾಳ್ಗಿಚ್ಚಿನಲ್ಲೇ ಲೀನವಾಗುವೆನೆಂಬ ನಿರ್ಧಾರದ ಕಾವಿನಿಂದಾಗಿ ಮನದೊಳಗೆ ಅಡಗಿದ್ದ ಯಾವಾವುದೋ

ಅನುಭವಗಳು ನೆನಪುಗಳು ಹೊರಬರುತ್ತಿರುವುದೂ ವಿಚಿತ್ರ.. ಪರೀಕ್ಷಿತನ ಜನನವೂ ಇಂಥದೇ ಆಳದ-ಅಂತರಾಳದ ಅನುಭಾವವೇ!

ಅಂದು ಆಡಿದೊಂದು ಮಾತು ಬೀಜವಾಗಿ ಮನದಲ್ಲಿ ಬಿದ್ದದ್ದು. ಮೊಳಕೆಯೊಡೆದು, ಸಸಿಯಾಗಿ ಹೊರಬರುವಂತೆ, ಇಂದು ಬೆಳಗಿನಿಂದಲೂ ಕೃಷ್ಣನ ಈ ಮಾತು-'ಜೀವಕ್ಕೆ ಜೀವ'! ಜೀವದಿಂದ ಜೀವ, ಜೀವದ ಜೀವ,...ಮತ್ತೆ ಜೀವದೊಳಗೆ ಜೀವ! ಕೃಷ್ಣನ ಮಾತು, ಆಡಿದ್ದ ದನಿ, ಆಗಿನ ಸನ್ನಿವೇಶ.. ಪರೀಕ್ಷಿತನ ಜನನವು 'ಪಾಠ' ಕಲಿಯಲು ಒಂದು ಸದವಕಾಶ. ಪ್ರತಿಯೊಂದು ಸನ್ನಿವೇಶವೂ ಪಾಠವೇ! ಅರಿತುಕೊಳ್ಳುವ ಹದನು, ಪಕ್ವತೆ ನಮ್ಮಲ್ಲಿರಬೇಕಷ್ಟೆ. ನೆನೆಸಿಕೊಂಡರೇ ಮೈನವಿರೇಳಿಸುವ ಪ್ರಸಂಗ..ಪರೀಕ್ಷಿತನ ಜನನ.

ಅಂದು, ಹೆರಿಗೆ ಮನೆಯಲ್ಲಿ ದಿಗಿಲು-ಹತಾಶೆಯ ಮೌನ. ಹುಟ್ಟಿದ್ದ ಮಗು ಉಸಿರಾಡದೆ, ಅಳದೆ, ಕ್ಷಣಕ್ಷಣಕ್ಕೂ ನೀಲಿಗಟ್ಟುತ್ತಿದ್ದ ದೇಹ..ತಣ್ಣಗಾಗಿತ್ತು. ಎದೆಬಡಿತವೇ ಕೇಳಿಸುತ್ತಿರಲಿಲ್ಲ. ನಿಶ್ಚೇಷ್ಟಿತ ಮಗು ನನ್ನ ಮಡಿಲಲ್ಲಿ ಮಲಗಿತ್ತು. ಅಳಲೂ ತ್ರಾಣವಿಲ್ಲದೆ ಮೂರ್ಛೆ ಹೋಗಿದ್ದ ಉತ್ತರೆ. ಅವಳಿಗಾಸರೆಯಾಗಿ ಕುಳಿತ ದ್ರೌಪದಿ. ಬಳಿಯಲ್ಲೇ ಬಿಕ್ಕಳಿಸಿ ಅಳುತ್ತಿದ್ದ ಸುಭದ್ರೆ. ದಾದಿಯರು ಬಾಯಿಗೆ ಸೆರಗಿಟ್ಟು ಆಣತಿಗೆ ಕಾಯುತ್ತಾ.. ಏನೂ ಮಾಡಲು ತೋಚದೆ.. ಎಲ್ಲವೂ ಮುಗಿದು ಹೋಯಿತೇ?...

ಹೆರಿಗೆ ಮನೆಯ ಹೊಸ್ತಿಲಲ್ಲೇ, ಹೊದ್ದಿದ್ದ ದಾವಳಿಯನ್ನಿಟ್ಟು ಒಳಗೇ.. ಒಳಗೇ ಬಂದುಬಿಟ್ಟ ಕೃಷ್ಣ, ಬಂದವನೇ, ನೀರು ತುಂಬಿದ್ದ ಗಂಗಾಳದಲ್ಲಿ ಕೈ ಅದ್ದಿ ಕಣ್ಮುಚ್ಚಿ ಧ್ಯಾನಸ್ಥನಾದ. ಎರಡು ಕ್ಷಣ; ನನ್ನ ಬಳಿ ಬಂದು, ಬಗ್ಗಿ ತಣ್ಣಗಾಗಿದ್ದ ಮಗುವನ್ನೆತ್ತಿ ತನ್ನ ಎಡತೋಳಿನಲ್ಲಿ ಮಲಗಿಸಿಕೊಂಡ. ಬಲಗೈಯಿಂದ ಗಂಗಾಳದ ಅಭಿಮಂತ್ರಿತ ಜಲವನ್ನು ಪೂಸುತ್ತ, ಮಗುವಿನ ತಲೆಯಿಂದ ಕಾಲುಗುರಿನವರೆಗೆ ಸವರುತ್ತ, ಸವರುತ್ತ ಮತ್ತೆ ಧ್ಯಾನಸ್ಥನಾದ. ಹತ್ತು ನಿಮಿಷದವರೆಗೆ ಕೃಷ್ಣನ ಎದೆಗೆ ತಾಗಿಕೊಂಡಿದ್ದ ಮಗುವಿನ ದೇಹವನ್ನು ಸವರುತ್ತಿತ್ತು ಕೃಷ್ಣನ ಬಲಗೈ. ಒಮ್ಮೆ ಬಗ್ಗಿ, ಮಗುವಿನ ನೆತ್ತಿಬಾಯಿಗೆ ಬಾಯಿಟ್ಟು ನಾಲ್ಕೈದು ಬಾರಿ ಊದಿದ ಕೃಷ್ಣನ ಉಸಿರು. ಮಗುವಿನೆದೆಯ ಮೇಲೆ ಒತ್ತಿದ್ದ ಕೃಷ್ಣನ ಹಸ್ತ! ಮತ್ತೆ ನೀರು ಪೂಸು, ಸವರು, ನೆತ್ತಿ ಊದು. ಕೃಷ್ಣನ ಅಂಗೈ ಪುಟ್ಟ ಎದೆಯನ್ನು ಊರಿದಂತೆ ಮಗು ಬೆಚ್ಚಿ, ತುಟಿಯಲುಗಿ, ಬಿರಿದು...ಕ್ಷೀಣ, ಅತಿ ಕ್ಷೀಣ ದನಿಯಲ್ಲಿ ಅತ್ತಿತು. ಪ್ರಾಣ ಸಂಚಯವಾಗಿತ್ತು. ಮಗು ಉಸಿರೆಳೆದು ಅಳಲು ಮೊದಲಿಟ್ಟಿತು. ಎಲ್ಲರ ದೃಷ್ಟಿ ಮಗುವಿನಲ್ಲೇ ನೆಟ್ಟಿತ್ತು. ಮಗುವಿನ ಅಳು. ಅವರ ಮೊಗದಲ್ಲಿ ಸಂತಸ ಚಿಮ್ಮಿಸಿತ್ತು. ನನ್ನ ಕಣ್ಣು ಕೃಷ್ಣನ ಕೈಯಿಂದ ಮೇಲೇರಿ, ಮುಖಕ್ಕೆ ತಲುಪಿದಂತೆ..

ಅಲ್ಲಿ ನನ್ನಳಿಯ, ಎಂದಿನ ವಾಸುದೇವನ ಮುಖವಿರದೆ, ಅಪರಿಚಿತ ಭಾವದ ಗಂಭೀರ ಮುಖವಿತ್ತು. ಹಣೆಯಿಂದ, ಕಪೋಲದಿಂದಿಳಿದ ಬೆವರ ಹನಿಗಳು ಗದ್ದದಲ್ಲಿ ತೊಟ್ಟಿಕ್ಕುತ್ತಿತ್ತು. ಬಹಳ ದೂರ.. ದೂರದಿಂದ ಬಹುಭಾರದ ಸರಕನ್ನು ಹೊತ್ತು ತಂದ ದಣಿವಿತ್ತು. ತನ್ನದೇ ಉಸಿರಾಟಕ್ಕೆ ಹೋರಾಡುತ್ತಿರುವಂತೆ ಏರಿಳಿವ ಎದೆ! ಕೃಷ್ಣನಿಗೆ ದಣಿವು? ಯುದ್ಧದಲ್ಲಿಯೂ

ಸಾವಿನೊಡನೆ ಸೆಣೆಸಿದಾಗಲೂ ಆಗದಿದ್ದ ದಣಿವು! ಪುಟ್ಟ ಪೋರನ ಮೈಸವರಿದ್ದಕ್ಕೇ ಇಷ್ಟು ದಣಿವು? ಸತ್ತು ಮತ್ತೆ ಹುಟ್ಟಿದವ ಪರೀಕ್ಷಿತ, ಅವನನ್ನು ಬದುಕಿಕೊಳ್ಳಲು ಸತ್ತಂತೆ ದಣಿದವ ನಲವತ್ತು ದಾಟಿದ ಕೃಷ್ಣ!

ಏನಾಯಿತು? ಅಲ್ಲಿ, ಹೆರಿಗೆ ಮಂಚದ ಬದಿಗೆ ನಿಂತವನಾರು? ಅವನು ಮಾಡಿದ್ದಾದರೂ ಏನು? ನನ್ನ ಬುದ್ಧಿಗೆ ನಿಲುಕದೇ ಹೋದ ಕಾರ್ಯ. 'ಅದನ್ನು ನೀನು ಅರ್ಥೈಸಲಾರೆ' ಎಂಬಂತೆ ಮೊಳಗಿದ ಕೃಷ್ಣನ ವಾಕ್ಯ. ತಾಯಿಗೆ ಲೆಕ್ಕ ಒಪ್ಪಿಸುವಂತೆ, ...ಜೀವಕ್ಕೆ ಜೀವ' ಎಂದರೂ ಅದರಲ್ಲೇನೋ ಗೂಢಾರ್ಥವಿದ್ದಂತೆ ದನಿಯಲ್ಲಿ ಗಡಸು, ಕೈಗಳಲ್ಲಿ ಹರಿದ ಮಿಂಚು, ದೃಷ್ಟಿಯಲ್ಲಿನ ಮೊನಚು... ಮೊನಚೇ? ಉಹ್ನು... ಆ ದೃಷ್ಟಿಯಿಂದ ನನ್ನನ್ನು ಕಟ್ಟಿ ತನ್ನೊಂದಿಗೆ ಎತ್ತಲೋ ಕೊಂಡೊಯ್ಯುತ್ತಿರುವಂತೆ... ಭಯದೊಂದಿಗೇ... ವಿಚಿತ್ರ ಸೆಳೆತ. ಆ ಸೆಳವಿನಲ್ಲೇ ಬಹುದೂರದ ಬಹುಕಾಲದ ಪಯಣ. ಕಡೆಗೆ ಸಹಿಸಲಾರದೆ ನನ್ನ ಕಂಗಳು ತಂತಾವೇ ಮುಚ್ಚಿದವು. ಎರಡು ಕ್ಷಣ.

ಮತ್ತೆ ಕಣ್ತೆರೆದರೆ ಕೃಷ್ಣನಾಗಲೇ ಬಾಗಿಲ ಕಡೆಗೆ ತೂರಾಡುತ್ತಾ ನಡೆದಿದ್ದ. ಬಳಲಿ, ಈಗಲೋ ಆಗಲೋ ಭೂಮಿಗೆ ಕುಸಿಯುವಂತಿತ್ತು ಅವನ ಹೆಜ್ಜೆ. ಹೆರಿಗೆಯಾಗಿ ಬಸವಳಿದಂತೆ! ಮಗುವಿಗೆ ಪ್ರಾಣಕೊಟ್ಟ ತಾಯಿಯಾಗಿದ್ದ ಕೃಷ್ಣ! ಹೆತ್ತೊಡಲ ಋಣ ತೀರಿಸಿದ ಏಕೈಕ ಪುರುಷ; ಮಹಾಪುರುಷ; ಸಾವು–ಹುಟ್ಟುಗಳಿಗೆ ಬೇರೆಯೇ ಅರ್ಥಕೊಟ್ಟ ಧೀಮಂತ. ಬುದ್ಧಿಯಿಂದ ಯೋಚಿಸಿ, ಮನಸ್ಸಿನಲ್ಲಿ ಭಾವಿಸಿ, ಹುಟ್ಟು–ಸಾವು ತಿಳಿಯತೆನ್ನುವ ನಮ್ಮಂಥ ಮೂಢರಿಗೆ ಪ್ರತ್ಯಕ್ಷ ಪ್ರಯೋಗ ಮಾಡಿ ನೇರ ನಮ್ಮ ಅನುಭವಕ್ಕೇ ಬರುವಂತೆ ಮಾಡಿದ ಅವನ ಯತ್ನವೇ? ಮನಸ್ಸು ಬುದ್ಧಿಗಳಾಚೆಗೆ ಪ್ರಾಣಕ್ಕೂ ಆಧಾರವಾದ ಮಹತ್ತೊಂದರ ಕಡೆಗೆ ಅವನ ಸಂಕೇತವಿತ್ತಲ್ಲವೇ?

ಪೂರ್ಣವಾಗಿ ಸೋರಿಹೋಗಿದ್ದ ಪ್ರಾಣಶಕ್ತಿಯನ್ನು ಮಗುವಿನಲ್ಲಿ ಮತ್ತೆ ತುಂಬಿದ ಬಗೆ? ಕೃಷ್ಣ ಆ ಕೆಲಕ್ಷಣಗಳಿಗೆ ಆ ಮಹತ್ತಿಗೂ ಆ ಮಗುವಿಗೂ ಸಂಪರ್ಕ ಕಲ್ಪಿಸಿದ ನಳಿಕೆಯಾದನೆ? ಅಥವಾ.. ದೇಹದಿಂದ ಹೊರಹರಿದಿದ್ದ ಪ್ರಾಣವನ್ನು ಮತ್ತೆ ಆಕರ್ಷಿಸಿ ಮಗುವಿನಲ್ಲಿ ತುಂಬಿದನೇ ಕೃಷ್ಣ? "ಎಲ್ಲರ ಮನವನ್ನಾಕರ್ಷಿಸುವ" ಎಂಬರ್ಥದಲ್ಲಿ 'ಕೃಷ್ಣ'ನನ್ನು ನೋಡುತ್ತಿದ್ದೆ. ಈಗ ಎಲ್ಲರ ಪ್ರಾಣವನ್ನೇ ಆಕರ್ಷಿಸಬಲ್ಲವ? ನಮ್ಮೊಳಗಿನ ಆಲೋಚನೆ–ಭಾವನೆಗಳನ್ನೇ ಆಕರ್ಷಿಸಬಲ್ಲವ? ಕೃಷ್ಣ ಯಾರು/ಇಂದಿಗೂ ಉತ್ತರವಿಲ್ಲ ನನ್ನಲ್ಲಿ! ಒಮ್ಮೆ ಶರೀರವನ್ನು ಬಿಟ್ಟುಹೋದ ಪ್ರಾಣವನ್ನು ಮತ್ತೆ ತುಂಬುವ ಶಕ್ತಿ ಬೆಳೆಸಿಕೊಂಡದ್ದು ಹೇಗೆ? ಹೀಗೆ ತುಂಬಬಹುದಾದರೆ 'ಸಾವು' ಎನ್ನುವ ಪದದ ಅರ್ಥ?... ಅಥವಾ ಸಾವು ಎನ್ನುವುದು ಬಂದು–ಹೋಗಿ–ಬಂದು–ಹೋಗಿ–ಬರಬಹುದಾದ ಒಂದು ಸ್ಥಿತಿಯೇ? ಸಾವೆಂದರೆ ಹಿಂತಿರುಗಿಸಲಾರದ ಕಾಲದಂತೆ; ಆ ದೇಹವನ್ನು ವಿಸರ್ಜಿಸುವುದು ಪ್ರಕೃತಿ ನಿಯಮ ಎಂದು ತಿಳಿದಿದ್ದೆ. ಕೃಷ್ಣನು ಲೋಕಸಂಗ್ರಹಕ್ಕಾಗಿ ಈ ನಿಯಮವನ್ನು ಮುರಿದು ಪರೀಕ್ಷಿತನಿಗೆ ಮರುಹುಟ್ಟು ಕೊಟ್ಟನೇ? ಕೇವಲ ಧರ್ಮಕ್ಕಾಗಿ–ಧರ್ಮರಾಜ್ಯದ ಅರಸನಿಗಾಗಿ–ಲೋಕಹಿತಕ್ಕಾಗಿ ಈ ರೀತಿ

ಮಾಡಿದರ್ನ? ನಾವು ಕೆರೆಗೆ ಹೋಗಿ ಕೊಡನೀರು ತಂದಂತೆ ಕೃಷ್ಣನು ಆ ಮಹಾಪ್ರಾಣದ ಮಹಾರ್ಣವಕ್ಕೇ ಸರಿದು ತಂದ ಪ್ರಾಣ-ನಮ್ಮ ಪರೀಕ್ಷಿತನದು! ನಿಯತಿಯನ್ನು ಯಾವಾಗ, ಹೇಗೆ, ಮೀರಬೇಕೆ ಬೇಡವೇ ಎಂಬೆಲ್ಲ ಪ್ರಶ್ನೆಗಳು ನಮ್ಮ ಬುದ್ಧಿಗೆ ಎಟುಕದ ವಿಚಾರ. ಕೃಷ್ಣನಿಗೆ? ವ್ಯಾಸರಿಗೆ? ನಿರ್ಣಯಿಸುವ ಹಕ್ಕು-ಹೊಣೆ ಎರಡೂ ಅವರಿಗುಂಟು! ಇದೇ ಶಕ್ತಿಯನ್ನೇ ತಾನೇ ವ್ಯಾಸರು ಸಂಕೇತಿಸಿದ್ದು..

"ಕೃಷ್ಣನ ಕಾರ್ಯ-ಲೋಕದ ಹೊರಗುಳಿದು ಮಾಡುವ ಲೋಕಸಂಗ್ರಹ. ಅವನು ವಿಶ್ವದ ಒಿತಕ್ಕಾಗಿ ಮೀಸಲು. ಅವನನ್ನು ಚಕ್ರವರ್ತಿಯಾಗಿ ಕೂರಿಸಿದರೆ ಅವನ ಶಕ್ತಿಯನ್ನು ಸೀಮಿತಗೊಳಿದಂತೆ.."

ಘಟೋತ್ಕಚ ಹುಟ್ಟಿದಾಗ ಅನುಭವಿಸಿದ್ದು ನನ್ನ ಚೊಚ್ಚಲ ಮೊಮ್ಮಗ ಎಂಬ ಹಸಿಹಸಿ ಪ್ರೀತಿ-ಕೇವಲ ಪಾಂಡು ಸಂಸಾರಕ್ಕೆ ಸಿಕ್ಕ ಮಗು. ದ್ರೌಪದಿಯ ಮಕ್ಕಳೈವರು ಹುಟ್ಟಿದಾಗ ಇದ್ದುದು ಪ್ರೀತಿಯೊಂದಿಗೆ, ಆಗಬೇಕಾದ 'ಶುಭಸಂಗತಿ' ಎಂಬ ಸಂತೋಷ; ಹೆಮ್ಮೆ; ಪಾಂಡುವಿನ ವಂಶ ಬೆಳೆದ ಬಗ್ಗೆ ಸಮಾಧಾನ. ಸಮಾಜದಲ್ಲಿಯೂ ಕುರುವಂಶದ ಕುಡಿಗಳೆಂಬ ಮಾನ್ಯತೆ ಸಿಕ್ಕ ತೃಪ್ತಿ. ಅಭಿಮನ್ಯು ಹುಟ್ಟಿದಾಗ ಇವೆಲ್ಲದರ ಜೊತೆಗೆ ನನ್ನ ತೌರಿನ ಸಂಬಂಧ ಮತ್ತೆ ಕೊನರಿದ ಹಿಗ್ಗು! ರಾಜಕೀಯವಾಗಿ ಪಾಂಡವರ ಬಲವರ್ಧನೆಯಾದ ಕ್ಷೇಮಭಾವ. ಅದೇ ಪರೀಕ್ಷಿತನ ಜನನ? ...ಇವೆಲ್ಲ ಭಾವನೆಗಳನ್ನು ಕ್ಷುಲ್ಲಕವಾಗಿಸಿದ, ಲೋಕಹಿತಕ್ಕಾಗಿ ನಮ್ಮೆಲ್ಲರ ಕಣ್ಮಣಿ ಕೃಷ್ಣ ತನ್ನ ಪ್ರಾಣ ಪಣವಾಗಿಟ್ಟು ಮೃತ್ಯುವಿನಿಂದ ಸೆಳೆದುಕೊಂಡ ಧನ್ಯತಾಭಾವ. ಅಲೌಕಿಕವಾದೊಂದು ಅನುಭವವಾದ ಅರಿವು. ಬುದ್ಧಿ ಮನಸ್ಸನ್ನು ದಾಟಿ...ಒಳಗಿಳಿದು... ಉಳಿದುಕೊಂಡು ಅರಿವು... ನಿಜ. ಪರೀಕ್ಷಿತನ ಜನನವಾದದ್ದೇ ನಮ್ಮೊಳಗಿನ ಅಲೌಕಿಕವನ್ನು ಪ್ರಚೋದಿಸಲು!

ಕೃಷ್ಣನನ್ನು ಹುಟ್ಟಿದಾರಭ್ಯ ನೋಡುತ್ತಿದ್ದೇನಲ್ಲ. ಅವನ ಶಕ್ತಿ ಸಾಮರ್ಥ್ಯಗಳು ಪದರ ಪದರವಾಗಿ ಬಿಚ್ಚಿಕೊಳ್ಳುತ್ತಾ.. ನಮಗೆ ಕೃಷ್ಣನೆಂದರೆ ಏನಾದರೊಂದು ವಿಸ್ಮಯ ತೋರುವ ವ್ಯಕ್ತಿಯಾಗಿಯೇ ಅನುಭವ. ವ್ಯಕ್ತಿಯೇನು ಬಂತು, ವ್ಯಕ್ತಿತ್ವವೇ ಇಲ್ಲದ, ಕೇವಲ 'ಅಸ್ತಿತ್ವ'ದ ಸ್ತರವನ್ನೇರಿಬಿಟ್ಟವ. ಅವನನ್ನು ವ್ಯಕ್ತಿತ್ವದ ಚೌಕಟ್ಟಿನಲ್ಲಿ ಬಂಧಿಸುವುದೆಂತು? ಬೇಕು-ಬೇಡಗಳಿಲ್ಲ; ಮಾನ ಅಪಮಾನಗಳಿಲ್ಲ; ಬಂಧು ಬಾಂಧವರ ಹಿಡಿತವಿಲ್ಲ. ಅವನದೆಂಬ ಗುಣಾವಗುಣಗಳಿಲ್ಲ. ಕಡೆಗೆ ನಿಸರ್ಗ-ನಿಯತಿಯ ನಿಯಮಗಳ ಬಿಗಿತವೂ ಇಲ್ಲ! ಅವನಲ್ಲಿ ಎಲ್ಲವೂ ಉಂಟು. ಆದರೇನು-ಏನೇನೂ ಇಲ್ಲ! ಧರ್ಮಮಾರ್ಗಿಗಳನ್ನು ಪ್ರೋತ್ಸಾಹಿಸುವಂತೆಯೇ ಅಧರ್ಮಿಗಳಿಗೆ 'ಪಾಠ' ಕಲಿಸುವ ಕೆಚ್ಚೆದೆಯ ಕೃಷ್ಣ. ಮಿಕ್ಕಾದಂತೆ ಎಂದಿನ ಹಸನ್ಮುಖಿ, ಸ್ನೇಹಪರ, ಜನಪ್ರಿಯ ಕುಶಲ ಕೆಲಸಗಾರ ನಮ್ಮ ವಾಸುದೇವ-ಅವನು ತೆರೆದ ಪುಸ್ತಕದಂತೆ. ಮುಚ್ಚು ಮರೆ ಏನೂ ಇಲ್ಲ. ಆದರೆ ಅವನನ್ನು ಓದಿ ಅರ್ಥೈಸಿದವರಾರು? ಏನು ಸಂದೇಹ ಸಲಹೆ ಕೇಳಿದರೂ ಉತ್ತರ ಸಿದ್ಧ. ಕೆಲವೇಳೆ ಗಂಭೀರವಾಗಿ, ಕೆಲವೇಳೆ ಹಾಸ್ಯದ ಲೇಪ! ಆದರೆ ಕೇಳಬಂದವರಿಗೆ ತಿಳಿದಿದ್ದಷ್ಟನ್ನು ಹೇಳದಿರಲಾರ. ಅರಸಿ ಬಂದವರಿಗೆ ನಿರಾಶೆ ಮಾಡಲಾರ. ಹಾಗಾಗಿ ಅವನ

ಬಳಿ ಜನರ ಓಡಾಟ ಇದ್ದದ್ದೇ, ಏನಾದರೊಂದು ಯೋಜನೆಯಲ್ಲಿ ಸದಾ ಕಾರ್ಯನಿರತ. ಅವನ ಆಹಾರ-ವಿಹಾರ, ಕಡೆಗೆ ನಿದ್ದೆಯೂ ಪರರಿಗಾಗಿ ಎನ್ನುವಂತೆ.

ಅಪರೂಪಕ್ಕೆ ಬಿಡುವಾದರೆ ಮಾಡುವುದೇನು? ಒಬ್ಬಂಟಿಯಾಗಿ, ಮರದಡಿಯ ಹಸಿರುಹುಲ್ಲಿನ ಮೇಲೆ ಅಂಗಾತ ಮಲಗಿ, ಮೇಲೆದ್ದ ಮರದ ಬೇರನ್ನು ತಲೆದಿಂಬಾಗಿಸಿ, ತಲೆಯಡಿ ಎರಡೂ ಅಂಗೈಯಿಟ್ಟು, ಆಕಾಶ ನೋಡುತ್ತ ವಿರಮಿಸುವುದು. ಮಾತಿಲ್ಲ, ನಿದ್ದೆಯಿಲ್ಲ, ಹೊರಳಿಲ್ಲ. ಆಕಾಶದಲ್ಲಿ ಒಂದಾಗಿ... ರಾತ್ರಿಯಾದರೆ ನಕ್ಷತ್ರಗಳಲ್ಲಿ ಒಂದಾಗಿ... ಆಗವನ ಮೊಗ ತಿಳಿಗೊಳದಂತೆ, ಅವನು ನಿರುಕಿಸುವ ಆಗಸದಂತೆ ಭಾವರಹಿತ, ಬಹುಶಃ ಅವನು ಮರಣಿಸುವಾಗಲೂ ಇದೇ ರೀತಿ ಭಾವರಹಿತನಾಗಿ, ಮೌನಿಯಾಗಿ ವಿರಮಿಸುತ್ತಲೇ ಜಗದಿಂದ ವಿರಮಿಸುವನೇನೋ! ಎಳವೆಯಲ್ಲಿ ಬಿಡುವಿನ ವೇಳೆ ಪಿಳ್ಳಂಗೋವಿ ನುಡಿಸುತ್ತಿದ್ದನಂತೆ. ಕೋಗಿಲೆಯ ಉಲಿವಿಗೆ ಉತ್ತರಿಸುತ್ತ ಕಲಿತ ಭಾವಪೂರ್ಣ ಸ್ವರ ಲಹರಿ ಅವನದಂತೆ- 'ನನಗೂ ನಿನ್ನ ಪಿಳ್ಳಂಗೋವಿ ಕೇಳಿಸುವೆಯಾ?" ಎಂದರೇನಂದ..

"ಅತ್ತೇ, ಒಮ್ಮೆ ಪಾಂಚಜನ್ಯ ಮೊಳಗಿದಮೇಲೆ ಪಿಳ್ಳಂಗೋವಿ ಉಲಿವುದು ಸಾಧ್ಯವೇ? ನಿನ್ನ ಮಗನಾಗಿ ಹುಟ್ಟಬಂದಾಗ ನಿನಗಾಗಿಯೇ ಕೊಳಲು ನುಡಿಸುವೆ, ಸರಿಯೇ?..."

ಪಾಂಚಜನ್ಯ ಮೊಳಗಿಸಲೆಂದೇ ಹುಟ್ಟಿದವ. ಪ್ರತಿ ಜೀವಿಯ ಹೃದಯದಲ್ಲಿ ಅದರ ರವ ಅನುಗಾಲ ಅನುರಣಿಸಲೆಂದು ಶ್ರಮಿಸಿದವ. ಅದರ ಉದ್ದೇಶ ನೆರವೇರಿದ ನಂತರವೇ ವಿರಮಿಸುವವ ಈ ವಾಸುದೇವ. ಕೊಳಲಲ್ಲಿ ಉಸುರಿ ನುಡಿಸಿದಂತೆ ಜೀವಕ್ಕೆ ಜೀವ ಉಸುರಿ, ನಂತರ ಪಾಂಚಜನ್ಯದ ಶಕ್ತಿಯೂಡಿ, ಜೀವವನ್ನು ತನ್ನ ಕೆಲಸಕ್ಕೆ ನಿಯೋಜಿಸಿಕೊಳ್ಳುವವ. ಕೃಷ್ಣನ ಈ ಲೋಕವಿಲಕ್ಷಣತೆಯನ್ನು ಮೊದಲ ಬಾರಿಗೆ ನನಗೆ ವರ್ಣಿಸಿ ಹೇಳಿದ್ದು ವಿದುರ. ಅಂದು ನನಗೆ ನಂಬಿಕೆಯಾಗಿರಲಿಲ್ಲ. ನಾನೇ ಕಣ್ಣಾರೆ ಕಂಡಿರಲಿಲ್ಲವಲ್ಲ..

"ಕುಂತೀ.. ಇಂದು ರಾಜಸಭೆಯಲ್ಲಿ ದುರ್ಯೋಧನ ಕೃಷ್ಣನನ್ನು ಬಂಧಿಸಲು ಮುಂದಾದ. ಆಗ.. ಆಗ ಕೃಷ್ಣನನ್ನು ನೋಡಬೇಕಿತ್ತು.. ಅಚ್ಚರಿ! ಒಂದು ವ್ಯಕ್ತಿಯಲ್ಲಿ ಈ ಮಟ್ಟದ ನಿಸ್ಪೃಹತೆ? ಎಲ್ಲ ಭಾವಗಳೂ.. ಕೋಪ, ಮರುಕ, ಜಿಗುಪ್ಸೆ, ವಿಡಂಬನೆಯ ವಿಕಟನಗೆ, ನಿಂತ ವೀರ ನಿಲುವು.. ಆದರೂ ಕೃಷ್ಣನ ಕಣ್ಣುಗಳು ವಿಶ್ವಪ್ರೇಮದ ಶಾಂತಕೊಳಗಳಾಗಿದ್ದವು! ಎಲ್ಲ ಹೇಗೆ ಸಾಧ್ಯ ಎಂದು ನನ್ನ ಕೇಳಬೇಡ.. ಇವೆಲ್ಲ ಭಾವಗಳಿದ್ದೂ.. ಪ್ರೇಮಮಯಿ ವಾತ್ಸಲ್ಯಪೂರ್ಣ ದೃಷ್ಟಿ. ಆ ಮುಖ! ಆ ಸಿರಿಮುಖದ ಒಂದು ದರ್ಶನಕ್ಕಾಗಿ ನೂರು ಜನ್ಮಾಂತರವಾದರೂ ಕಾಯುವೆ. ಕುಂತೀ.. ನನಗೆನಿಸುವುದು ಏನು ಗೊತ್ತೇ? ಕೃಷ್ಣ ಯಾರನ್ನಾದರೂ ಕೊಂದಾಗಲೂ ಅವರ ಬಗ್ಗೆ ಪ್ರೀತಿಯೇ ಹೊರತು ಹಗೆತನ ಹೊಂದಲಾರ. ಹೊರನೋಟಕ್ಕೆ ಕಾಠಿಣ್ಯ ತೋರಿದರೂ ಆಂತರ್ಯದಲ್ಲಿ ಅವರ ಒಳಿತಿಗಾಗಿ ಸಕಲ ಪ್ರಯತ್ನ ಮಾಡುವವ. ಕುಂತೀ, ನೀನು ಧನ್ಯೆ, ಅವನ ರಕ್ತ ಸಂಬಂಧಿಯಾಗಿದ್ದೀಯೆ. ನಿನ್ನ ಮಕ್ಕಳೂ ಅವನ ಸ್ನೇಹ ಸಂಪಾದಿಸಿದ್ದಾರೆ..."

ಲೋಕವನ್ನೇ ತನ್ನೊಳಗಿಟ್ಟು ಸುತ್ತಿಕೊಂಡ ಆಗಸದಂತೆ.. ಕೃಷ್ಣ ಯಾರನ್ನು ತಾನೇ ಹೇಗೆ ದ್ವೇಷಿಸಬಲ್ಲ? ಗಗನ ಸದೃಶ ವ್ಯಕ್ತಿ... ಅಲ್ಲಲ್ಲ...ಗಗನ ಸದೃಶತತ್ವ! ಅವನೊಳಗಿರುವುದೆಲ್ಲ ಕೇವಲ ಧರ್ಮ–ಪ್ರೇಮ–ಆನಂದ. ಅಷ್ಟೇ..ಅಷ್ಟೇ! ಮನೆಗೆ ಬರುವ ಬಂಧುಮಿತ್ರರೋ–ಪರಿಚಿತರೋ ಅತಿಥಿಗಳೋ–ರಥದ ಕುದುರೆಯೋ–ಮನೆ ಬಾಗಿಲ ನಾಯಿ..ಅನ್ನಕ್ಕೆ ಬರುವ ಕಾಗೆ, ಗುಬ್ಬಿ..ಎದುರು ಬಂದ ಹಸು, ಆನೆ, ಗಿಡ, ಗುಬ್ಬಿ, ಮರ, ಬಳ್ಳಿ..ಎಲ್ಲರಲ್ಲೂ ಎಲ್ಲದರಲ್ಲೂ ಒಂದೇ ತೂಕದ ಪ್ರೀತಿ, ಯಾರೂ ಯಾವುದೂ ಹೆಚ್ಚಿಲ್ಲ ಕಡಿಮೆಯಿಲ್ಲ. ಅದೊಂದು ರೀತಿಯ ವಿಚಿತ್ರ ಪ್ರೀತಿ. 'ಉದಾಸೀನ'ಭಾವದ ಪ್ರೀತಿ. ಇದರಿಂದಾಗಿಯೇ ಏನೋ.. ಕೃಷ್ಣನನ್ನು ಲೋಕರೀತಿಯಲ್ಲಿ ಯಾರೂ ಪ್ರೇಮಿಯಾಗಿ ಪಡೆಯಲಾರೆವು. ಬೀಸುವ ಗಾಳಿಯನ್ನು ಹಿಡಿದಂತೆ. ಬೆಳಗುವ ಬಿಸಿಲನ್ನು ಕಟ್ಟಿದಂತೆ ಅಸಾಧ್ಯ ಕಾರ್ಯ! ನಾವೇ ಬೀಸುವ ಗಾಳಿಯಾಗಬೇಕು. ಬೆಳಗುವ ಬಿಸಿಲಾಗಬೇಕೇನೋ–ಅದೇ ಸುಲಭ! ಇಂತಹ 'ಉದಾಸೀನ'ನನ್ನೂ ತಮ್ಮ ಮಹಾರಣರಂಗಕ್ಕೆ ಎಳೆದು ತಂದವರು ಕುರುವಂಶದ ಕುಮಾರರು! ಒಬ್ಬ ಧರ್ಮಕ್ಕಾಗಿ ಎಂದು ಮತ್ತೊಬ್ಬ ತನ್ನ ಹಕ್ಕು ಎಂದು – ಭಳಿರೆ! ಇದು ಕುರುವಂಶದ "ಯಶಸ್ಸು"! ಕುರುವಂಶವೋ–ಮನುವಂಶವೇ ಈ ರೀತಿಯೋ–ಒಳಿತು ಕೆಡುಕುಗಳ ತಾಕಲಾಟ ಎಷ್ಟರಮಟ್ಟಿಗೆಂದರೆ ದೈವವೇ ಇಳಿದುಬಂದು ಅವರೊಡನೆ ಒಂದಾಗಿ ಒದ್ದಾಡಬೇಕೇನೋ! 'ಉದಾಸೀನ'ರನ್ನು–ಎಲ್ಲವನ್ನೂ ಬಿಟ್ಟು ಕುಳಿತವರನ್ನು ತನ್ನ ಸುಳಿಯಲ್ಲಿ ಹಿಡಿದು ತಿರುಗಿಸುವ ಜೀವನವೇ..ನಿನಗೆ ಬಗ್ಗದವರಾರು?!

ಜೀವನವು ಬಗ್ಗು ಬಡಿದರೂ ತಮ್ಮೆಡೆಗೆ ಕೃಷ್ಣನನ್ನು ಬಾಗಿಸಿಕೊಂಡವರು ನನ್ನ ಮಕ್ಕಳು. ಪಾಂಡವರು ಮತ್ತವರ ಒಡನಾಡಿ ದ್ರೌಪದಿ!..ಅಲ್ಲಲ್ಲ...ಅದಕ್ಕೂ ಹೆಚ್ಚು ಸತ್ಯ..ಅವನೊಳಗೆ ಪ್ರವೇಶಗಿಟ್ಟಿಸಿಕೊಂಡವರು. ಧರ್ಮವ್ರತರಾದವರಲ್ಲಿ ಅಷ್ಟೊಂದು ಆತ್ಮಬಲ ಇರಬಹುದೇ?! ಒಬ್ಬೊಬ್ಬರದೂ ಒಂದೊಂದು ರೀತಿಯ ನಂಟು ಕೃಷ್ಣನೊಡನೆ.

ವಿದುರ ಹೇಳಿದಂತೆ ನನ್ನ ಮಕ್ಕಳು ವಾಸುದೇವನ ಸ್ನೇಹಿತರೇ ನಿಜ. ನನ್ನ ಮಕ್ಕಳಿಗಾಗಿ ಏನನ್ನಾದರೂ.. ಬೇಕಾದರೆ ಇಡೀ ಸಮಾಜವನ್ನೇ ಎದುರು ಹಾಕಿಕೊಳ್ಳುವ ನನ್ನಳಿಯ ವಾಸುದೇವ. ಅದರಲ್ಲೂ ಅರ್ಜುನನೊಡನೆ ಅಂತರಂಗದ ಸ್ನೇಹ. ಕೃಷ್ಣ ಅರ್ಜುನರು ಎರಡು ದೇಹ ಒಂದೇ ಜೀವ ಎಂಬಂತೆ. ನೋಡಲು ಕೂಡ ಬಹಳ ಸಾಮ್ಯತೆ. ಒಂದೇ ವಯಸ್ಸು, ದೇಹಮಾಟ, ಬಣ್ಣ, ಗುಂಗುರು ಕೂದಲು, ನಿಲುವು. ಹರೆಯದ ವಯಸ್ಸಿನಿಂದಲೂ ನೋಡಿದ್ದೇನೆಲ್ಲ.. ಇಬ್ಬರೂ ಸೇರಿದರೆ ನಗೆಹೊನಲು. ಇಲ್ಲವೇ, ಆಳವಾದ ಆಲೋಚನೆಯಂತೆ, ಎರಡೂ ತಲೆಗಳು ತಾಗಿಕೊಂಡು. ಆಟ–ಊಟ–ನೋಟ–.. ಕೃಷ್ಣನಿದ್ದಾಗಲೆಲ್ಲ ಅರ್ಜುನನಲ್ಲಿ ಅದೇನೋ ಹುರುಪು; ಜೀವಂತ ವಿನೋದ ಕಲಾಪಗಳು. ರಾತ್ರಿಯೆಲ್ಲ ಅಂಗಳದ ಬೆಳದಿಂಗಳಲ್ಲಿ ಹರಟುತ್ತಾ.. ಎರಡು ಮೂರು ಸಲ ಕರೆದರೂ ನಿದ್ದೆಗೆಂದು ಕೂಡ ಒಳಬರದೆ, ಮಾತಿನಲ್ಲೇ ಬೆಳಗು ಕಂಡುದುಂಟು. ಕೃಷ್ಣನು ದ್ವಾರಕೆಗೆ ಹಿಂದಿರುಗಿದ ದಿನದಿಂದಲೇ ಅವನ ಬರುವಿಕೆಗೆ ದಿನಗಳೆಣಿಸುತ್ತಾ, ಅವನು ಹೇಳಿಟ್ಟ ಕೆಲಸ ಮಾಡುತ್ತಾ..ಕೃಷ್ಣನಿಗೆ ಕಾಯುವುದು ಅರ್ಜುನನ

ಜಾಯಮಾನ! ಕೃಷ್ಣ ಬಂದ ದಿನವೇ, ಅವನ ಮಾರ್ಗಾಯಾಸವನ್ನೂ ಲೆಕ್ಕಿಸದೆ. ನಿಧಾನದಲ್ಲಿ ಉಣ್ಣಲೂ ಬಿಡದೆ ತನ್ನಲ್ಲಿಗೇ ಎಳೆದೊಯ್ಯುವ ಅರ್ಜುನ! ಜಕ್ಕವಕ್ಕಿಗಳಂತೆ ಅನಂತ ಆಕಾಶದಲ್ಲಿ ನಿರಾತಂಕದ ಹಾರಾಟ ನಡೆಸುವ ಜೋಡಿ.

ಈಗ ಅರ್ಥವಾಗುತ್ತದೆ. ಕೃಷ್ಣನ ಹಿರಿಮೆಯನ್ನು ಅರಿತು, ಅವನಂತೆಯೇ ತಾನೂ ಆಗಬೇಕೆಂಬ ಮಹಾದಾಸೆಯಿಟ್ಟು ಅವನನ್ನೇ ಎಲ್ಲ ರೀತಿಯಲ್ಲೂ ಅನುಕರಿಸುವ ಸಾಹಸ–ಅದಕ್ಕಾಗಿ ಕೃಷ್ಣನ ಸಂಗಡ ದೊರಕುವ ಎಲ್ಲ ಕ್ಷಣಗಳನ್ನೂ ಗಳಿಸುವ ಆತುರ–ಈ ಯತ್ನದಲ್ಲಿ ಕೃಷ್ಣನ ಅಂತರಂಗದವರೆಗೂ ತಲುಪಿದ. ಉದ್ಧಾರವಾದ ಅರ್ಜುನ–ಪರುಷಮಣಿ ತಾಗಿದ ಕಲ್ಲಿನಂತೆ, ಅಪರಂಜಿಯಾದ. ಅರ್ಜುನನೇ ನನ್ನ ಬಳಿ ಅಪರೂಪಕ್ಕೆ ಬಿಚ್ಚಿಕೊಂಡ ಆತ್ಮೀಯ ಅನುಭವ ವಿಶೇಷ..

ದುರ್ಯೋಧನ ಗದಾಯುದ್ಧದಲ್ಲಿ ನೆಲಕಚ್ಚಿದ ಸಂಜೆಯೇ.. ಕೃಷ್ಣ ಅರ್ಜುನನನ್ನು ರಥದಿಂದ ಮೊದಲ ಇಳಿಯ ಹೇಳಿ, ನಂತರ ತಾನಿಳಿದ ಕ್ಷಣವೇ ಆ ರಥ..ಅವನ ಸಾರಥ್ಯ ಕಂಡ ರಥ ಮುರಿದುಬಿದ್ದು, ಹೊತ್ತಿಕೊಂಡು ಉರಿದುಹೋಯಿತಂತೆ. ನನಗೆ ಈ ವರದಿ ತಂದವ ಸಹದೇವ. ಅರ್ಜುನನಲ್ಲೇ ವಿಚಾರಿಸಿದಾಗ ತಲೆಬಾಗಿಸಿದ. ಎರಡು ಕ್ಷಣ ಬಿಟ್ಟು ಹೇಳಿದ–"ಅಮ್ಮ..ರಥ ಉರಿದುಹೋದುದಕ್ಕೆ ಕೃಷ್ಣ ಏನು ಹೇಳಿದ ಗೊತ್ತೇ?..

'ರಥದ ಉದ್ದೇಶ ಫಲಿಸಿತು. ಇನ್ನದರ ಅಗತ್ಯವಿಲ್ಲ. ಶತ್ರುಗಳ ಅಸ್ತ್ರಪ್ರಹಾರದಿಂದ ನಿನಗೆ ರಕ್ಷಣೆ ಇದರಲ್ಲಿ ಸಿಕ್ಕಿತು. ಶತ್ರುವಧೆಯಾದ ಮೇಲೆ, ರಣರಂಗದ ಏರುತಗ್ಗಿನ ನೆಲದಲ್ಲಿ ಅಡ್ಡಾದಿಡ್ಡಿಯಾಗಿ, ಬಹುವೇಗದಲ್ಲಿ ಉಪಯೋಗಿಸಿ ಸಡಿಲಗೊಂಡ ಜೀರ್ಣವಾದ ಈ ರಥ ದಹನವಾದುದು ಒಳಿತೇ! ಹೀಗೆಯೇ ಪ್ರಪಂಚದ ಪ್ರತಿಯೊಂದು ವಸ್ತುವೂ ಉದ್ದೇಶಪೂರ್ವಕ ಬಂದುದು. ಉದ್ದೇಶಿತ ಕಾರ್ಯದ ನಂತರ ಅದು ಅನಗತ್ಯವಾಗುವುದು. ಅಂತೆಯೇ ಜನರೂ ಸಹ. ಪ್ರತಿಯೊಬ್ಬನೂ ಯಾವುದೋ ಉದ್ದೇಶಕ್ಕಾಗಿ ಭೂಮಿಯಲ್ಲಿ ಜೀವಿಸುವನು. ಆ ಉದ್ದೇಶ ನೆರವೇರಿದೊಡನೆಯೇ ಭೂಮಿಗೆ ಬೇಡವಾಗುವನು. ಅವನ ಜೀವನ ಮುಗಿಯುವುದು. ನನ್ನದೂ–ನಿನ್ನದೂ–ಎಲ್ಲರದೂ ಅಷ್ಟೇ! ಕೆಲಸವಾದೊಡನೇ ವಿಸರ್ಜನೆ ಅನಿವಾರ್ಯ. ಅಗತ್ಯವೂ ಕೂಡ..." ಎಂದನಮ್ಮ... ಇದನ್ನು ಹೇಳುವಾಗಿನ ಅವನ ದನಿ... ದಂಡಧರನಂತೆ ಗಂಭೀರ ಮುಖದಲ್ಲಿ ಅಂತಿಮ ತೀರ್ಮಾನದ ಸ್ವರ!

ಅಮ್ಮ, ಯುದ್ಧ ಆರಂಭವಾದ ಸಮಯದಲ್ಲೇ.. ಯಾರಲ್ಲಾದರೂ ಹೇಳಿಕೊಳ್ಳಬೇಕೆನ್ನುವಂತಹ ವಿಚಿತ್ರ ಅನುಭವ ಆಯಿತು. ಬೇರೆ ದಿನಗಳಲ್ಲಾದರೆ ನೀನೋ–ದ್ರೌಪದಿಯೋ ಸಿಗುತ್ತಿದ್ದಿರಿ. ರಣರಂಗದಲ್ಲಿ ನೀವೆಲ್ಲಿ? ಕೃಷ್ಣನೊಂದಿಗೆನ್ನುವಿಯಾ? ಅವನೇ ಕೊಟ್ಟ ಅನುಭವ! ಹೇಳಿಕೊಳ್ಳಲು ಪದಗಳೇ ಸರಿಹೋಗಲೊಲ್ಲವು.. ನಾನೇ ತಂದುಕೊಂಡದ್ದು. 'ವಿಜಯ' ನಾನೆಂಬ ಗರ್ವ.. ಶತ್ರುಬಲ ನೋಡಬೇಕು ಮುಂಚೂಣಿಗೆ ರಥ ನಡೆಸು ಎಂದೆ. ಕೃಷ್ಣ ಕೊಂಡೊಯ್ದ. ಎದುರಿಗೆ.. ತಾತ ಭೀಷ್ಮ, ಗುರು ದ್ರೋಣ, ಆಚಾರ್ಯ ಕೃಪ... ಬೇರೆ ಬೇರೆ ರಥಗಳಲ್ಲಿದ್ದವರೆಲ್ಲ ನನ್ನ ಬಂಧುಗಳೇ, ಮಿತ್ರರೇ! ಇವರನ್ನೆಲ್ಲ ಕೊಂದು ಗಳಿಸುವುದಾದರೂ

ಏನು ಎನಿಸಿಬಿಟ್ಟಿತು. ಗಾಂಡೀವ ಕೈಯಿಂದ ಜಾರಿತು. ಯುದ್ಧವನ್ನೇ ಮಾಡದಿದ್ದರೆ? ಎನಿಸಿ ಕೃಷ್ಣನಲ್ಲಿ ಹೇಳಿಯೂಬಿಟ್ಟೆ! ಯುದ್ಧದ ಅಗತ್ಯ ಕುರಿತು ಬಹಳ ತಿಳಿಯಹೇಳಿದ ಕೃಷ್ಣ. ಈಗದೆಲ್ಲಾ ಸ್ಪಷ್ಟವಾಗಿ ನೆನಪಿಲ್ಲ. ಎಲ್ಲವನ್ನೂ ಮರೆಸುವಂತಹ ಎಲ್ಲವನ್ನೂ ಎಲ್ಲ ಎಲ್ಲವನ್ನೂ ಮರೆಸುವಂತಹ ಅನುಭವವೊಂದೇ ಒಳಗಿಳಿದುದು. ಈಗಲೂ ಕಣ್ಮುಚ್ಚಿದರೆ ಕಾಣುವುದು. ಕೃಷ್ಣನ ಮುಖ ಅಗ್ನಿಯಂತೆ ದುಮಿದುಮಿಸುತ್ತಿತ್ತು. ಕಣ್ಣುಗಳು ಮಧ್ಯಾಹ್ನದ ಸೂರ್ಯನಂತೆ..ಏನೆಂದು ವರ್ಣಿಸಲಿ? ಇಡೀ ವಿಶ್ವವೇ.. ವಿಶ್ವವೇ, ಚರಾಚರಗಳೆಲ್ಲ ಏಕರೂಪವಾಗಿ ಪುರುಷಾಕಾರ ತಳೆದಿತ್ತು. ಹರಡಿ ಹರಡಿ ಹರಡಿಕೊಳ್ಳುತ್ತಾ ಎಲ್ಲವನ್ನೂ ತನ್ನೊಳಗೇ ಇರಿಸಿಕೊಳ್ಳುವಂತೆ ವ್ಯಾಪಿಸುತ್ತ ಗಗನವೂ ಅವನೊಳಗೆ! ವಿಚಿತ್ರ ಕೇಳಿದೆಯಾ–ಗಗನವೂ ಅವನೊಳಗೆ ಎಲ್ಲವೂ ಸೃಷ್ಟಿಯೇ ಅವನ ಮುಖದೊಳಗೆ..ಬಾಯೊಳಗೇ ಹರಿದು ಹೋಗುತ್ತಿತ್ತು. ಇಲ್ಲವಾಗುತ್ತಿತ್ತು. ಆ ಬಾಯಿಂದ ಹೊರಬರುತ್ತಿದ್ದುದೊಂದೇ–'ಹುಂ'ಕಾರ ನಾದ! 'ಓಂ'ಕಾರ.. ಈಗಲೂ ಆ ಓಂಕಾರ ನನ್ನ ಕಿವಿಯಲ್ಲಿ..ಅಲ್ಲ ನನ್ನೆದೆಯಲ್ಲೇ..ಅಲ್ಲಲ್ಲ ನನ್ನ ಹೊಟ್ಟೆಯೊಳಗಿನಿಂದ ಕೇಳಿ ಬರುತ್ತದೆ. ಕಣ್ಮುಚ್ಚಿದರೆ ಕಾಣುವ ಆ ವಿಶ್ವಾಕಾರ; ಒಳಗಿವಿ ಕೊಟ್ಟರೆ ಕೇಳುವ ಓಂಕಾರ! ಹೊರಮನಸ್ಸು ಹೇಳುತ್ತದೆ–ಕೃಷ್ಣ ನನ್ನ ಸಖ, ಪ್ರೀತಿಪಡುವ ನನ್ನ ಗೆಳೆಯ ಬಳಿಯಲ್ಲಿದ್ದಾನೆ. ಒಳಮನಸ್ಸು ಕಂಡುಕೊಂಡಿದೆ–ಎಲ್ಲರೊಳಗೆ ಇದ್ದು, ಎಲ್ಲರೂ ಯಾವುದರೊಳಗೋ ಆ 'ಒಂದು', ಅದೇನಿದೆಯೋ 'ಅದು' ಈ ಕ್ಷಣದಲ್ಲಿ ನನ್ನೊಳಗೆ 'ಕೃಷ್ಣ'ನಾಗಿ ಇದೆ. ಇದು ನನ್ನೊಳಗಿರುವುದರಿಂದ ನಾನು ಧನಂಜಯ, ಅರ್ಜುನ, ಪರಂತಪ, ಸವ್ಯಸಾಚಿ ಎಂದೆಲ್ಲ.. ನಿನ್ನೊಳಗೂ ಇದ್ದು ನೀನು ಕುಂತಿ; ಧರ್ಮಜನೊಳಗಿದ್ದು ಅವ ಧರ್ಮರಾಯ, ಯುಧಿಷ್ಠಿರ, ಅಜಾತಶತ್ರು; ವಾಸುದೇವನೊಳಗಿದ್ದು ಅವ ಕೃಷ್ಣ ಅಚ್ಯುತ–ಗೋವಿಂದ ಎಂದೆಲ್ಲ..ಎಲ್ಲರ ಇರುವಿಕೆ 'ಅದ'ರಿಂದಲೇ! ಪ್ರತಿಜೀವಕ್ಕೆ ಜೀವಕೊಟ್ಟು ಅದರಲ್ಲಿ ಪ್ರತ್ಯೇಕತೆ–ವಿಶಿಷ್ಟತೆ ತರುವ ಮಹಾಚೇತನ..

ಪುನಃ ಕೃಷ್ಣನನ್ನೇ ಕೇಳಿದೆ.. ಅಂದು ನಾ ಕಂಡದ್ದು ಯಾರೆಂದು. ಅವ ಗಹಗಹಿಸಿ ನಗುತ್ತಾ "ಓ.. ಮಹಾಕಾಲನೇ?" ಎಂದು ತಲೆಯಾಡಿಸಿಬಿಟ್ಟ. ಅವನು ಗಹಗಹಿಸಿ ನಗುವಾಗಲೆಲ್ಲ ವಿಚಿತ್ರ ಸೆಳೆತದಲ್ಲಿ ಸಿಕ್ಕಿಕೊಂಡಂತೆ, ನನ್ನ ಕಣ್ಣು ತಂತಾನೆ ಅವನ ಕಂಗಳತ್ತ ಅಲ್ಲಿ..ಆಗ ಏನೋ ತೆರೆ ಸರಿದಂತೆ..ಅಮ್ಮ, ಅವನ ಕಂಗಳು ಕಿಟಕಿಗಳಂತೆ..ಅವನ ಇಚ್ಛೆಯಾದರೆ ಆ ಕಿಟಕಿಗಳು ತೆರೆದು, ಅದರೊಳಗೆ ನಮ್ಮನ್ನು ಸೆಳೆಯುವುದೊಂದು ಶಕ್ತಿ! ನಮಗವನು ಏನನ್ನೋ ತೋರಿಸಲಿರುವಂತೆ.. ವರ್ಣನೆಗೆ ಸಿಗದ ತುಯಿತ. ಎಲ್ಲಿಗೋ ಬೀಸಿ ಒಗೆದಂತೆ ಅಲೌಕಿಕ ತುಯ್ದಾಟ. ಕೆಲಕ್ಷಣಗಳಲ್ಲಿ ವಿಲಕ್ಷಣ ಅನುಭವವಾಗಿ, ಮತ್ತೆ ನಾವು ಈ ಕಡೆಗೆ ಬಿದ್ದಂತೆ! ನಂತರದ ಅವನ ಕಣ್ಣುಗಳು ಅದೇ ಮೊದಲಿನ, ಪ್ರೀತಿ ವಾತ್ಸಲ್ಯದ ಹೊಳೆಹರಿಸುವ–'ನಮ್ಮ ಕೃಷ್ಣ'ನ ಕಂಗಳು. ಅವನ ಅಟ್ಟಹಾಸ, ಅಲೌಕಿಕ ದೃಷ್ಟಿ, ಅಪರಿಚಿತ ಧ್ವನಿ–ಮೂರೂ ಒಟ್ಟಿಗಾದರೆ ಅವನಾಗ ಅನಂತ, ಅಚ್ಯುತ, ಅಪಾರ..ಕೃಷ್ಣ ಬೇಕೆಂದೇ ತನ್ನ ಕಣ್ಣುಗಳಲ್ಲಿನ 'ಕಿಟಕಿ' ತೆರೆಯದೆ ಸದಾ ಅವುಗಳಿಂದ ತನ್ನೊಳಗಿನ ಪ್ರೀತಿ ಹೊರಹರಿಸುತ್ತಿರುತ್ತಾನೆ. ಅಗತ್ಯಬಿದ್ದಾಗ, ಎದುರಿನವರಿಗೆ ಮಾತ್ರ ಆ ಕಿಟಕಿ ತೆರೆದು 'ಪಾಠ' ಕಲಿಸುವ ಗುರುವಾಗುವನು.. ಜಗದ್ಗುರು! ಈ ಸಂಗತಿ

ಅರಿವಿಗೆ ಬಂದಾಗಿನಿಂದ ಏನೋ ತೃಪ್ತಿ. ತುಂಬು.. ಮುಂಚಿನಂತೆ ಕೃಷ್ಣನಿಲ್ಲದ ವೇಳೆ ವಿಹ್ವಲತೆಯಿಲ್ಲ. ಕೃಷ್ಣ ಬಳಿಯಿರಲಿ, ಇಲ್ಲದಿರಲಿ ಎರಡೂ ಒಂದೇ! ಅವನು ನನ್ನೊಳಗೆ, ನಾನು ಅವನೊಳಗೆ ಎನ್ನುವುದು ಖಚಿತವಾಗಿ, ಬಂದಿರುವ ತೃಪ್ತಿ.."

ನಿಜ. ಜೀವನದ ಲೋಕವ್ಯಾಪಾರ ಬಹುತೇಕ ನಡೆಯುವುದು ಕಣ್ಣುಗಳ ಮೂಲಕವೇ, 'ಕಣ್ಣಲ್ಲಿ ಕಣ್ಣಿಟ್ಟು' ತಾನೇ ನೇರಮಾತು. ಮನಸಿನ ಭಾವನೆಗಳು ಹೊರಹೊಮ್ಮುವುದೂ ಕಂಗಳ ಮಾರ್ಗವಾಗಿಯೇ ಕಣ್ಣು ಮುಚ್ಚಿಬಿಟ್ಟರೆ ಭಾವವೆಲ್ಲಿಯದು? ಕೇವಲ ಮುಖಸ್ನಾಯುಗಳ ಎಳೆದಾಟವಷ್ಟೆ. ಮನಸ್ಸು ಮಾತ್ರವಲ್ಲ. ಬುದ್ಧಿಯನ್ನು ತಲುಪಲು ಸಹ ಕಣ್ಣುಗಳು ಬೇಕು. ಅರ್ಜುನನೆಂದಂತೆ ಅಗತ್ಯಬಿದ್ದಾಗ ನೇರ ಸಂಪರ್ಕಿಸಲು ತನ್ನ ಕಣ್ಣಗಳ 'ಕಿಟಕಿ' ತೆರೆಯುವ ಕೃಷ್ಣನಂತಹ ಗುರುವಿಗೆ ಕಣ್ಣುಗಳ 'ಕಿಟಕಿ' ತೆರೆದು ಅರಿವು ಸಂಪಾದಿಸುವ ಶಿಷ್ಯನಾಗಬೇಕು. ಬದುಕಿನಲ್ಲಿ ಅರಿವು ಮೂಡಿಸುವ ಅನುಭವಗಳನ್ನು, ಅವಕಾಶಗಳನ್ನು, ಹಿತೈಷಿಗಳನ್ನು ಕಣ್ಣುಮುಚ್ಚಿ ತಿರಸ್ಕರಿಸುವ ಮೂಢರೇ ಹೆಚ್ಚುಮಂದಿ. ಮಾತೆಯ ಆಹ್ವಾನದಂತೆ ವ್ಯಾಸರು ಕೃಪೆತೋರಿ ಗರ್ಭದಾನ-ಜೀವದಾನ ಮಾಡಬಂದಾಗ ಪೂರ್ಣವಾಗಿ ಸಹಕರಿಸದೆ ಕಣ್ಣುಮುಚ್ಚಿಕೊಂಡರೆ ಹುಟ್ಟಿದ ಮಗು ಕುರುಡಾದುದು ಸಹಜವೇ. ಕಣ್ಣುಮುಚ್ಚದೆ ಕಿಟಕಿ ತೆರೆದು ಸ್ವಾಗತಿಸಿದ್ದರೆ ಕಾಶೀರಾಜಪುತ್ರಿಗೆ ಕ್ಷಾತ್ರತೇಜದೊಂದಿಗೆ ಬ್ರಹ್ಮತೇಜದ ಧರ್ಮಪ್ರಿಯ ಮಗು ಹುಟ್ಟುತ್ತಿತ್ತೇನೋ! ಹಿರಿಯರ ಅನುಗ್ರಹವನ್ನು ಅರೆಬರೆ ಮನಸ್ಸಿನಿಂದ ಸ್ವೀಕರಿಸಿದುದೇ ಆದಿಯಾಗಿ ಕುರುವಂಶದ ಅಧಃಪತನದ ಆರಂಭ, ದುರ್ಯೋಧನಾದಿಗಳ ಸಾವಿನಲ್ಲಿ, ಪರೀಕ್ಷಿತನ ಮರುಹುಟ್ಟಿನಿಂದ ಕೊನೆಗೊಂಡಿದ್ದು ಕೃಷ್ಣನ ಸಾಹಸದಿಂದ. ಹಿತೈಷಿಗಳ ಹಿತವನ್ನು ಪಡೆಯಲೂ ನಮ್ಮಲ್ಲಿ ತೆರೆದುಕೊಳ್ಳುವ ಮನ ಬುದ್ಧಿಯಿರಬೇಕು. ನಾನೂ ಕಣ್ಮುಚ್ಚಿಕೊಳ್ಳದೆ, ಸಹಕರಿಸಿದ್ದರೆ, ಪರೀಕ್ಷಿತನನ್ನು ನನ್ನುಡಿಯಲ್ಲಿಟ್ಟಾಗ ಕೃಷ್ಣನು ತನ್ನ ಕಿಟಕಿಗಳಿಂದ ಇನ್ನೂ ಏನೇನು ಅನುಭವ ಕೊಡಲಿದ್ದನೋ- ಕಣ್ಮುಚ್ಚಿ ಪೆದ್ದಿಯಾದೆ. ವಿದುರನೂ ಕೂಡ ಕಣ್ಣುಗಳಿಂದಲೇ ಅಲ್ಲವೇ ಧರ್ಮರಾಯನನ್ನು ಹೊಕ್ಕಿದ್ದು!

ಅರ್ಜುನನಂತೆಯೇ ಧರ್ಮರಾಯನದೂ ವಿಲಕ್ಷಣ ಅನುಭವ. ಹಸ್ತಿನಾಪುರದಿಂದ ನಮ್ಮನ್ನೆಲ್ಲ ಕಾಣಲು ಎಲ್ಲರೂ ಬರುವ ವೇಳೆಗಾಗಲೇ ವಿದುರ ನಿರಶನನಾಗಿ ಮೌನಿಯಾಗಿ, ಏಕಾಂತನಾಗಿ ಕಠಿಣವ್ರತ ಕೈಗೊಂಡಿದ್ದ. ಅಪರೂಪಕ್ಕೆ ನಮ್ಮ ಆಶ್ರಮದ ಬಳಿ ಸುಳಿದಾಡುತ್ತಿದ್ದ- ಯಾರನ್ನೋ ಕಾತರದಿಂದ ಕಾಯುವಂತಿತ್ತು. ಆ ಸುಳಿದಾಟ. ಧರ್ಮರಾಯನನ್ನು ಕಂಡಿದ್ದೇ ಕಾಡಿನ ಕಡೆಗೆ ಓಟದ ನಡಿಗೆ. ಧರ್ಮರಾಯನೂ ಹಿಂಬಾಲಿಸಿ ಹೋದಾಗ ನಿರ್ಜನ ಪ್ರದೇಶ ತಲಪಿ, ಹೆಮ್ಮರದ ಕಾಂಡವನ್ನೊರಗಿ ನಿಂತ ವಿದುರ. ಅವನೆದುರು ಏದುತ್ತಾ ನಿಂತ ಧರ್ಮರಾಯ. ವಿದುರನ ಮುಖವೆಲ್ಲ ಸೊರಗಿ ಬರೇ ಕಣ್ಣುಗಳು-ಕಣ್ಣುಗಳಲ್ಲಿನ ತೀವ್ರ ಪ್ರಕಾಶದ ನೇರದೃಷ್ಟಿ ದೃಷ್ಟಿಗಳ ಸೇತುವೆ ಮೂಲಕ ತನ್ನ ಪ್ರಾಣವನ್ನು ಧರ್ಮರಾಯನೊಳಗಿಳಿಸಿದ ವಿದುರನ ಸಾಧನೆ! ಧರ್ಮಾವತಾರನು ಧರ್ಮಪುತ್ರನಲ್ಲಿ ಮರುಹುಟ್ಟು ಪಡೆದ ರೀತಿ. ಜೀವಕ್ಕೆ ಜೀವ ಬೆರೆತುಹೋದ ರೀತಿ. ಕಣ್ಣಿನ ಮೂಲಕ... ಅಲ್ಲಲ್ಲ ಕಂಗಳ ತೆರೆದ ಕಿಟಕಿ ಮೂಲಕ!

ಸಾವಿನ-ಹುಟ್ಟಿನ ಮತ್ತೊಂದು ಮುಖ. ದೃಷ್ಟಿ ಮಿಲನವಾಗಿ ವಿದುರನು ಎವೆಯಿಕ್ಕದೆ ನೋಡುತ್ತಿದ್ದಂತೆ ಧರ್ಮರಾಯನಿಗೆ ವಿದುರನೇ ತನ್ನೊಳಗೆ ಇಳಿದುಬಂದಂತೆ-ಹೆಚ್ಚಿದ ದೇಹಶಕ್ತಿ-ಪ್ರಾಣಶಕ್ತಿ. ತನ್ನೊಳಗೇ ವಿದುರ ಧರ್ಮರಾಯ ಇಬ್ಬರೂ ಇರುವಂತೆ, ವಿದುರನಿಗೆ ಕಡೆಯದಾದ ದಹನ ಸಂಸ್ಕಾರ ಬೇಕಾಗಲೇ ಇಲ್ಲ! ಜೀವಕ್ಕೆ ಜೀವ ಬೆರೆತ ಮೇಲೆ ಸಾವೆಲ್ಲಿ? ಸಾವಿಲ್ಲದೆ ದಹನವೆಲ್ಲಿ?

ಜೀವಕ್ಕೆ ಜೀವ ಕೊಡುವ ವಾಸುದೇವ-ಜೀವಕ್ಕೆ ಜೀವ ಕೂಡುವ ವಿದುರ. ಮಾನವ ಜೀವಿತದ ಉದ್ದೇಶವೆಲ್ಲ ಇಷ್ಟೇ ತಾನೇ! ಜೀವಕ್ಕೆ ಜೀವ ಕೊಡುವ-ಕಡೆಗೆ ಅದನ್ನೇ ಕೂಡುವ ಆನಂದ. ಇದನ್ನರಿಯುವುದೇ ಅಲ್ಲವೆ ಮಾನವ ಜನ್ಮದ ಸಾರ್ಥಕತೆ! ಇಂದೇಕೆ ಈ 'ಜೀವಕ್ಕೆ ಜೀವ'... ಕೊಡುವ ಕೂಡುವ ಮಾತು ಸುಳಿಸುಳಿದು ಒಂದರೊಳಗೊಂದು ಹೆಣೆದುಕೊಂಡು ಬರುತ್ತಿದೆ? ಈ ಮಾತಿಗೆ ಏನೇನೋ ಅರ್ಥಗಳು; ಅರ್ಥಕ್ಕೆ ನಿದರ್ಶನವಾಗಿ ಏನೇನೋ ಪ್ರಸಂಗಗಳು; ಕೊಂಡಿ ಹಾಕಿಕೊಂಡ ಯಾರಾರದೋ ಅನುಭವಗಳು ಮನೋರಂಗದ ಮೇಲೆ ಪುನರಾವೃತ್ತಿ! ಇಂದೇನು ವಿಶೇಷ? ವಿಶೇಷವೇನು ಬಂತು... ನಡೆಯುವುದೆಲ್ಲ ಸಹಜವೇ. ಆರೇಳು ತಿಂಗಳ ಹಿಂದೆ ವಿದುರ ಪರಲೋಕಕ್ಕೆ ನಡೆದರೆ ಧರ್ಮರಾಯ ಹಸ್ತಿನಾಪುರಕ್ಕೆ! ಇಂದು ಬೆಳಗ್ಗೆ ಸಂಜಯ ಹಿಮಾಲಯವನ್ನೇರಿ ಹೋದರೆ ನಾನು ಕುಂತಿ-ಕೃಷ್ಣನೊಳಗೆ-ಕೃಷ್ಣನ 'ಜೀವದ ಜೀವ'ದೊಳಗೆ ಇಳಿದುಹೋದೆ-ಹರಿದುಹೋದೆ. ಸಹಜವೇ! ಮತ್ತೆ ಮೇಲೆ ಬರಲು ಕಾರಣ? ಕಣ್ಮುಂದೆ ಜೀವನದ ಕಟ್ಟಕಡೆಯ ಸಿಂಹಾವಲೋಕನ! ಮಹಾಕಾಲನಿಗೆ ವರದಿಯೊಪ್ಪಿಸುವಂತೆ ಅದೂ ಸಹಜವೇ. ವಿದುರನೇ ಹೇಳಿದ್ದು..

"ನಡೆಯುವುದೆಲ್ಲ ಸಹಜವೇ. ಆಗುವುದೆಲ್ಲ ಒಳಿತೇ... ನೀನು ಸಹಜವಾಗು..ಸಹಜವಾಗಿಯೇ ಇರು. ನೀನು ಸಹಜ ಸ್ಥಿತಿಯಲ್ಲಿದ್ದರೆ ಸಾಕ್ಷೀಭಾವದಲ್ಲಿದ್ದರೆ ಎಲ್ಲವೂ ತಂತಾನೇ ಗೋಚರಿಸುತ್ತದೆ.. ಸಾಕ್ಷಿಯಾಗಿ. ಸಹಜವಾಗು.. ಎಲ್ಲವೂ ಆಗಲೇಬೇಕಿದ್ದ ಸಂಗತಿಯೆಂದು ಅರಿವಾಗುತ್ತದೆ.."

ನನ್ನ ವಿದುರನ ಸಾಂಗತ್ಯ ಮೂವತ್ತು ವರ್ಷಗಳಿಗೂ ಮೀರಿದ ದೀರ್ಘಾವಧಿ. ನನ್ನ ಅರ್ಧಾಯುಷ್ಯವೇ ಅವನೊಡನೆ! ಯಾವ ಋಣಾನುಬಂಧವೋ ಈ ಜನ್ಮದಲ್ಲಿ ವಿಚಿತ್ರ ಸಂಬಂಧ. ಹೊರಗಿನವರಿಗೆ ಪಾಂಡವರ ಮಾತೆ ಮತ್ತು ಮಂತ್ರಿಯದು; ಅರಮನೆಯೊಳಗೆ ಅತ್ತಿಗೆ-ಮೈದುನ-ಅದರಲ್ಲೂ ಕ್ಷತ್ರಾಣಿ ದಾಸೀಪುತ್ರನ ಅಸಮ ಸಂಬಂಧ; ಪಾಂಡು ಸಂಸಾರದಲ್ಲಿ ಚಿಕ್ಕಪ್ಪನಂತೆ ಗೌರವಾದರ ವಿಶ್ವಾಸದ ವ್ಯವಹಾರ, ಸಲಹೆ-ಬುದ್ಧಿವಾದಗಳು ಅಂತೆಯೇ ಸಲುಗೆ. ಕೊಂಚ ಮಟ್ಟಿಗೆ ವಿದುರನಿಗೂ ನಮ್ಮ ಮೇಲಿನ 'ಅಧಿಕಾರ'. ಈ ಅಧಿಕಾರವನ್ನು ವಿದುರ ಎಂದೂ ತನಗಾಗಿ ಬಳಸಿಕೊಳ್ಳದೆ ನಮ್ಮದೇ ಕ್ಷೇಮಕ್ಕಾಗಿ, ಏಳಿಗೆಗಾಗಿ ಬಳಸಿದ್ದುಂಟು. ಒಟ್ಟಾರೆ ಮಕ್ಕಳಿಗೆ ತಂದೆಯ ಸ್ಥಾನದಲ್ಲಿ ನಿಂತು ನಡೆಸಿದ ವಿದುರ ಚಿಕ್ಕಪ್ಪ. ಪಾಂಡುವಿನ ಪತ್ನಿ ಕುಂತಿಯ ಕಷ್ಟಕಾಲದಲ್ಲಿ ಸಂದಿಗ್ಧ ಪರಿಸ್ಥಿತಿಯಲ್ಲಿ ಆಸರೆ, ಮಾರ್ಗದರ್ಶನ ಕೊಟ್ಟು ಪಾರುಮಾಡಿದ ಬಂಧು. ನನಗೆ ವೈಯಕ್ತಿಕವಾಗಿ ಏನು ಸಂಬಂಧ? ಇಂತೇ ಎಂದು ನಿರ್ದಿಷ್ಟವಾಗಿ.. ಸಾಧ್ಯವಿಲ್ಲ. ಎಲ್ಲ ಸಂಬಂಧಗಳನ್ನೂ ಒಳಗೊಂಡದ್ದು. ವಿದುರನಿಂದ ನನಗೆ

ಸಿಕ್ಕ ಸಹಾಯ, ನೆಮ್ಮದಿ..ಮಕ್ಕಳು ದ್ಯೂತದಲ್ಲಿ ಸೋತು ವನವಾಸಕ್ಕೆ ಹೊರಟಾಗ ನನ್ನ ಮನದಲ್ಲಿನ ದುಗುಡ, ಅವಮಾನ, ವಂಚಿತಭಾವ, ದ್ವೇಷ..ಏನೇನೋ... ಎಲ್ಲಕ್ಕೂ ಪರಿಹಾರದಂತೆ ತನ್ನ ಮನೆಯಲ್ಲಿರಲು ವಿದುರನ ಆತ್ಮೀಯ ಒತ್ತಾಯದ ಆಹ್ವಾನ. ಆ ಹದಿಮೂರು ಹದಿನಾಲ್ಕು ವರ್ಷಗಳ ಸಹವಾಸ! ಒಬ್ಬರನ್ನೊಬ್ಬರು ಆಳವಾಗಿ ಅರಿತುಕೊಂಡಂತೆಯೇ, ಪರಸ್ಪರ ವಿಶ್ವಾಸ ಬೆಳೆದು ಬಂತು. ವಿದುರನೊಡನೆ ಆರ್ಯಧರ್ಮದ ಬಗೆಗೆ ಚರ್ಚೆಗಳು ಬೇಕಾದಷ್ಟು ಆಗಲೇ, ಧರ್ಮದ ಬಗ್ಗೆ, ವೇದಗಳ ಬಗೆಗೆ, ವ್ಯಾಸ ಕೃಷ್ಣರ ಯೋಜನೆಗಳ ಬಗೆಗೆ ಕುತೂಹಲವೂ ಬೆಳೆಯಿತು. ಇದಕ್ಕೆಲ್ಲ ಕಾರಣ ವಿದುರನ ತಾಳ್ಮೆಯ ವಿವರಣೆಗಳು, ಯುದ್ಧಕಾಲದಲ್ಲಿ, ನಂತರ, ನನ್ನ ವೈಯಕ್ತಿಕ ಸಂದೇಹ ಸಂಶಯಗಳನ್ನೂ ಬಿಡಿಸಿ ವಿವರಿಸುವಾಗಲೇ ನನ್ನ ಕರ್ತವ್ಯದ ಬಗ್ಗೆ ಸ್ಪಷ್ಟತೆ ಕೊಟ್ಟವನು.. ನನ್ನ ನಾ ಅರಿಯುವಲ್ಲಿ ಸಹಕರಿಸಿದವನು ವಿದುರ. ಅವನ ಸ್ನೇಹಭರಿತ ಮಾತುಕತೆ.. ಹ್ಞಾ..ವಿದುರನ–ನನ್ನ ವೈಯಕ್ತಿಕ ಸಂಬಂಧ..ಸ್ನೇಹ ಸಂಬಂಧ! ನನ್ನಲ್ಲಿಯ ದೋಷಗಳು, ಗುಣಗಳನ್ನು ಅರಿತು ತಿದ್ದಿ ತೀಡಿದ ಆತ್ಮಸಖ್ಯದ ಸಂಬಂಧ! ನಿಜ. ವಿದುರ ಈಗಲಂತೂ ಆತ್ಮಸಖ. ಕೌಶಿಕ ಮಹಾರಾಜನಿಗೆ ವಾಮದೇವರಿದ್ದಂತೆ! ನನ್ನ ಮನಸ್ಸನ್ನು ಆಧ್ಯಾತ್ಮದೆಡೆಗೆ ತಿರುಗಿಸಿದ ಗೆಳೆಯ. ಕೃಷ್ಣ 'ತತ್ವ'ವನ್ನು ಪರಿಚಯಿಸಿದ ಗುರುವೂ ಕೂಡ.

ನನಗನಿಸುವುದು..ನಾಲ್ವರು ನನ್ನ ಬಾಳನ್ನು ರೂಪಿಸಿದವರು. ಕುಂತಿಯ ಬಾಳನದಿಗೆ ಇಳಿಜಾರು–ಪಾತ್ರವನ್ನು ಕೊಟ್ಟವನು ಕರ್ಣ. ಹೊರಗೆ ಕಾಣಿಸಿಕೊಳ್ಳದೆ ನದಿಯ ಆಳ–ಸುಳಿ–ಮಡುಗಳನ್ನು ರಚಿಸಿದವ, ನದಿಗೆ ವಿಶಿಷ್ಟತೆ ತಂದವ. ಕರ್ಣನಿಲ್ಲದ ಕುಂತಿ ಸಾಧ್ಯವೇ? ವ್ಯಾಸ ವಿದುರರು ನನ್ನ ಬಾಳನದಿಯ ಎರಡು ದಡಗಳು. ನದಿಯ ಉದ್ದಕ್ಕೂ ಸಾಗುತ್ತ ಉಕ್ಕಿ ಹರಿಯದಂತೆ ಧರ್ಮದ ಕಟ್ಟಿನೊಳಗೇ ಹರಿವಂತೆ ನೋಡಿಕೊಂಡವರು. ಪ್ರೀತಿ ವಾತ್ಸಲ್ಯದಿಂದ ತಬ್ಬಿಕೊಂಡೇ ನದಿಯ ನೀರನ್ನು ಮುಂದಕ್ಕೆ ಕಳಿಸುವ ದಡಗಳು. ನದಿಯ ದಾರಿಯಲ್ಲಿನ ಅಡ್ಡಿಗಳು–ಹೆಬ್ಬಂಡೆಗಳು–ಏರು ಏನೇ ಬಂದರೂ ತಮ್ಮಲ್ಲಿಯೇ ಜಾಗಮಾಡಿಕೊಟ್ಟು ಅಡ್ಡಿಯನ್ನು ಬಳಸಿ ಸಾಗುವಂತೆ ಅನುವು ಮಾಡಿಕೊಟ್ಟವರು ಪ್ರಪಾತಗಳಲ್ಲಿ ನನ್ನೊಡನೆ ತಾವೂ ಕೆಳಗಿಳಿದು ನದಿಯ ಇಕ್ಕೆಲವನ್ನೂ ಗುರುತಿಸಿಕೊಟ್ಟ ದಡಗಳು. ನದಿಯು ತನ್ನ ಗಮ್ಯ ಸ್ಥಾನವನ್ನು ಸೇರುವಂತೆ ನೋಡಿಕೊಂಡ ದಡಗಳೇ ವ್ಯಾಸ ವಿದುರರು. ನದಿಯ ಗಮ್ಯ ಸ್ಥಾನ? ಕೃಷ್ಣ..ವಾಸುದೇವ..ಉಹ್ಞೂ..ಅವನ ಮೂಲಕ ಎಲ್ಲರೂ ತಲುಪುವ 'ಕೃಷ್ಣತತ್ವ'! 'ಆ' ತತ್ವ! ಇಂದಲ್ಲ ನಾಳೆ–ಈ ಜನ್ಮದಲ್ಲಾಗದೆ ಹೋದರೆ ಮುಂದಿನ ಜನ್ಮ, ಮುಂದು ಮುಂದಿನ ಜನ್ಮದಲ್ಲಿ..ಅಂತೂ ಎಲ್ಲರೂ ಹರಿದು ಸೇರುವ 'ತತ್ವ'. ಜೀವನದಲ್ಲಿ ಒದಗುವ ಪ್ರತಿಯೊಂದು ಅನುಭವವೂ ಈ ತತ್ವವನ್ನು ಅರಿಯಲೆಂದೇ ರಚನೆಯಾದ 'ಪಾಠ'... ಯೋಚಿಸಿದರೆ, ಕುರುಕ್ಷೇತ್ರದಲ್ಲಿ ಯುದ್ಧವಾದಾಗ ಕೇವಲ ಹದಿನೆಂಟು ದಿನಗಳಲ್ಲಿ ಹದಿನೆಂಟು ಅಕ್ಷೋಹಿಣಿ ಸೇನೆಯ ನಾಶ ಹೊರಗೆ ಕಂಡುಬಂದ ಪರಿಣಾಮ. ಹಸ್ತಿನಾಪುರದ ರಾಜಪರಿವಾರದ ಎಲ್ಲ...ಎಲ್ಲ ಸದಸ್ಯರ ಆಂತರ್ಯದಲ್ಲಿಯೇ ನಡೆವ ತುಮುಲದಲ್ಲಿ ಹುಟ್ಟಿದಾಗಿನಿಂದಲೂ ಬಲಿಯುತ್ತ ಬಂದಿದ್ದ ಶತ್ರುಗಳೂ ನಾಶವಾದದ್ದು ಕೃಷ್ಣನ ಈ ಧರ್ಮಯುದ್ಧದ ಕಾರಣವಾಗಿಯೇ! ಎಲ್ಲ ದುಃಖದಾಯಿ ಭಾವನೆಗಳು, ವಿಘಟನಾತ್ಮಕ ಯೋಜನೆಗಳು, ಯೋಚನೆಗಳು ಸತ್ತು ಒಡಲಲ್ಲಿ

ನೆಮ್ಮದಿ ನಲೆಸಿದ್ದು ಯುದ್ಧಾನಂತರವೇ. ಹೊಟ್ಟೆನೋವೋ, ಕಿವಿಯುರಿತವೋ ರಚ್ಚೆಹಿಡಿದ ಮಕ್ಕಳು ಕಿರುಚಿ ಕಿರುಚಿ ಕಡೆಗೆ ದಣಿದು ಬಿಕ್ಕಳಿಸುತ್ತ ನಿದ್ದೆಗೆ ಸರಿಯುವಂತೆ ಧೃತರಾಷ್ಟ್ರ ಗಾಂಧಾರಿಯರೂ ಸಹ... ದುರ್ಯೋಧನಾದಿಗಳು ಇರುವವರೆಗೆ ಅವರೆಂದೂ ನೆಮ್ಮದಿಯ ಉಸಿರೆಳೆದಿರಲಿಲ್ಲ. ಶಾಂತಿಯ ನಿದ್ದೆ ಮಾಡಿರಲಿಲ್ಲ. ಮಕ್ಕಳ ರೂಪದಲ್ಲಿದ್ದ ಶೂಲಗಳನ್ನು ಕಳೆದುಕೊಂಡನಂತರ ಕೆಲದಿನ ಶೋಕಿಸಿದರೂ ಅಂತರ್ಯದಲ್ಲಿ ನೆಮ್ಮದಿ ಕಂಡರು. ನಿಜವಾದ ಪುತ್ರ ಪ್ರೀತಿ ವಿಧೇಯತೆ, ಸಹಕಾರವನ್ನು ಧರ್ಮಜನಲ್ಲಿ ಹದಿನೈದು ವರ್ಷ ಅನುಭವಿಸಿದರು. ಗಾಂಧಾರಿ ಅದೆಷ್ಟು ಬಾರಿ ನನ್ನಲ್ಲಿ ಹೇಳಿಕೊಂಡದ್ದು..

"ಕುಂತೀ, ಮಕ್ಕಳಿಂದ ಈ ಬಗೆಯ ಪ್ರೀತಿ-ವಿಶ್ವಾಸ, ವಿಧೇಯತೆ, ತಂದೆತಾಯಿಯರ ಆರೋಗ್ಯ ಸೌಖ್ಯದಲ್ಲಿನ ತತ್ಪರತೆ, ಸೇವೆ ಸಿಗುವುದು ಸಹಜ ಎನ್ನುವೆಯಾ? ಇವೆಲ್ಲವನ್ನೂ ಬಾಳಿನುದ್ದಕ್ಕೂ ಪಡೆದವಳು ನೀನು. ಪುಣ್ಯವತಿ. ನಮಗೆ ಈಗಲಾದರೂ ಪಾಂಡವರ ಮೂಲಕ ಮಕ್ಕಳ ನಿಜವಾದ ಸುಖ ಏನೆಂದು ಅನುಭವವಾಯಿತಲ್ಲ, ಅಷ್ಟೇ ಸಾಕು..."

ಕುರು ರಾಜದಂಪತಿಗಳ ಮನಸ್ಸು ಈ ಹದಕ್ಕೆ ಮಾಗಲು ಪಟ್ಟ ನೋವೆಷ್ಟು? ದಿನವೆಲ್ಲ ನಿತ್ಯಕರ್ಮದಲ್ಲಿ, ನೋಡಬರುವ ಬಂಧುಮಿತ್ರರೊಡನೆ ಸಾಮಂತರಾಜರ ಸಂದರ್ಭಗಳಲ್ಲಿ ದುಃಖವನ್ನು ಬದಿಗಿಟ್ಟರೂ ರಾತ್ರಿಯ ಏಕಾಂತದಲ್ಲಿ ತಮ್ಮ ವಿಧಿಯನ್ನು ಹಳಿಯುತ್ತ, ನೋವಿನ ನಿಟ್ಟುಸಿರಿಡುತ್ತ, ಬಿಕ್ಕಿ ಬಿಕ್ಕಿ ಅಳುತ್ತ ಒಬ್ಬರಿಗೊಬ್ಬರು ಸಾಂತ್ವನ ಹೇಳಿಕೊಳ್ಳುವ ಪರಿ.. ಪಕ್ಕದ ಕೋಣೆಯಲ್ಲಿ ಮಲಗುತ್ತಿದ್ದ ನನಗೆ ಎಲ್ಲವೂ ಕೇಳಿಸುತ್ತಿತ್ತು.

ಗಾಂಧಾರಿ ಧೃತರಾಷ್ಟ್ರರದು ಪುತ್ರಶೋಕವನ್ನು ಇಮ್ಮಡಿಗೊಳಿಸುವ ವಿಚಿತ್ರ ಪರಿಸ್ಥಿತಿ. ಅರ್ಧ ಶತಮಾನಕ್ಕೂ ಮೀರಿ ನಡೆಸಿದ ಸಂಸಾರ, ಮಕ್ಕಳು ಮೊಮ್ಮಕ್ಕಳು ಹುಟ್ಟಿಬೆಳೆದ ಅರಮನೆಯಲ್ಲಿ-ಈಗ ಅವರ ಅಂತ್ಯವನ್ನೂ ಕಂಡ ಅರಮನೆಯಲ್ಲಿ, ಕೇವಲ ಅವರ ನೆನಪುಗಳೊಡನೆ, ನೆನಪಿಸುವ ವಸ್ತುಗಳ ನಡುವೆ ದಿನರಾತ್ರಿ ದೂಡುವ ಸ್ಥಿತಿ. ಸಾಲದೆಂದು ತಮ್ಮ ಮಕ್ಕಳ ಸ್ಥಾನದಲ್ಲಿ ಅವರನ್ನು ಕೊಂದವರು! ಇಷ್ಟವಿಲ್ಲದಿದ್ದರೂ ತಮ್ಮ ಮಕ್ಕಳ ಹಂತಕರೊಡನೆ ಒಂದೇ ಸೂರಿನಡಿ.. ಅವರಿಂದಲೇ ಸೇವೆ ಮಾಡಿಸಿಕೊಳ್ಳುವ ಪರಿಸ್ಥಿತಿ. ದಿನ ಆರಂಭವಾಗುತ್ತಿದ್ದುದೇ ನಮಸ್ಕರಿಸುವ ಧರ್ಮಜಾದಿಗಳನ್ನು ಆಶೀರ್ವದಿಸುವುದರಿಂದ. ಎಂತಹ ವಿಪರ್ಯಾಸ! ಪಾಂಡು ಸ್ವರ್ಗಸ್ಥನಾಗಿ ನಾವು ಹಸ್ತಿನಾಪುರಕ್ಕೆ ಮರಳಿದಾಗಿನಿಂದಲೂ ಪಾಂಡವರಲ್ಲಿ ಪರಕೀಯ ಭಾವ ಬೆಳೆಸಿಕೊಂಡವರು ತಮ್ಮ ಕಡೆಗಾಲಕ್ಕೆ ಪಾಂಡವರ ಹಂಗಿನಲ್ಲಿ ದಿನಗಳೆವ ಅವರನ್ನೇ ಮಕ್ಕಳಾಗಿ ಸ್ವೀಕರಿಸುವ ಮನೋವೇದಕ ಪರಿಸ್ಥಿತಿ-ಸ್ವಯಂಕೃತಾಪರಾಧ! ಅವರಿಬ್ಬರ ಸಂಕಟದ ಆಳ ಅರ್ಥವಾದರೂ ಹೆಚ್ಚೇನೂ ಮಾಡಲಾಗದ ಸಂದರ್ಭ. ಅವರದೊಂದೇ ಅಳು... "ನಮಗೇ ಏಕೆ ಹೀಗಾಯಿತು?..."

'ನಮಗೇ ಏಕೆ ಹೀಗಾಯಿತು?' ಎನ್ನುವ ಪ್ರಶ್ನೆಯೇ ಕುಂಠಿತವಲ್ಲವೇ? 'ನಮಗೆ'-'ನನಗೆ' ಎನ್ನುವ ಭಾವವನ್ನು ತೆಗೆದುಬಿಟ್ಟರೆ ಉಳಿಯುವುದು, 'ಏಕೆ ಹೀಗಾಯಿತು' ಎನ್ನುವ ಶೋಧಕ ಪ್ರಶ್ನೆ ಮಾತ್ರ! ನಾವು ಎಲ್ಲಿ ತಪ್ಪಿದೆವೆಂದು ಅರ್ಥವಾಗಿ ಒಪ್ಪಿಕೊಂಡರೆ ಪರಿತಾಪವೆಂತು?

ಮಾಡಿದ್ದರ ಪರಿಣಾಮವನ್ನು ಅನುಭವಿಸುವ ತಾಳ್ಮೆ ತಾನಾಗೇ ಬರುವುದು. ಮುಂದಿರುವ ಪರಿಸ್ಥಿತಿಯನ್ನು ಅರಿತುಕೊಳ್ಳುವ ಸ್ಪಷ್ಟತೆ, ದುಃಖದ ಬದಲಿಗೆ ಸಮಾಧಾನವೂ ಬರುವುದು. ಈ ಮೂಲಭೂತ ಸಂಗತಿಯನ್ನು ಧೃತರಾಷ್ಟ್ರರಿಗೆ ವಿವರಿಸಿದವರೆಷ್ಟು ಜನ! ಪಾಂಡವರ ನಡೆನುಡಿಯಲ್ಲಿನ ಸಹಜ ಪ್ರೀತಿ-ವಿಧೇಯತೆಯನ್ನು ಅನುಭವಿಸಿದಂತೆ ತಮ್ಮ, ತಮ್ಮ ಮಕ್ಕಳ ತಪ್ಪು ಅರಿತುಕೊಂಡರಲ್ಲವೇ.. ಸಾವಿನ ಸಂಕಟದ ತೀವ್ರತೆ ಕಡಿಮೆಯಾಗಲು ವರ್ಷಗಳೇ ಹಿಡಿಯಿತು.

ನಾವು ಹಿರಿಯರೆನಿಸಿಕೊಂಡವರು ಮಾಡುವ ದೊಡ್ಡ ತಪ್ಪೆಂದರೆ ಆಶ್ರಮಧರ್ಮವನ್ನು ಪಾಲಿಸದಿರುವುದು. ಮಕ್ಕಳ ಪ್ರಾಯ ಕೂಡ ಮುಗಿಯುತ್ತ ಬಂದರೂ ನಾವು ವಾನಪ್ರಸ್ಥಾಶ್ರಮ ಸ್ವೀಕರಿಸದೆ ಸಂಸಾರಕ್ಕೇ ಅಂಟಿಕೊಂಡಿದ್ದರೆ ಮಕ್ಕಳ ಅಧಿಕಾರ ಮತ್ತು ಹೊಣೆಗಾರಿಕೆ ವಿಸ್ತರಿಸುವುದೆಂತು? ನಾವಿರುವವರೆಗೆ ಅವರ ಅಧಿಕಾರ ಸೀಮಿತವಲ್ಲವೇ? ಮಾತ ಸತ್ಯವತಿ, ಅಂಬಿಕೆ ಅಂಬಾಲಿಕೆಯರಿಗೆ ವನಪ್ರಸ್ಥಾನ ಮಾಡುವಂತೆ ಸಲಹೆಯಿತ್ತ ವ್ಯಾಸರು ಗಾಂಧಾರಿ ಧೃತರಾಷ್ಟ್ರರಿಗೂ-ನನಗೂ ವನಪ್ರಸ್ಥಾನ ಮಾಡಲು ಹೇಳಿದ್ದರೆ ಒಳಿತಾಗುತ್ತಿತ್ತೇನೋ! ಹಿಂದಿನ ಮಹಾರಾಜನಾಗಿ, ಧರ್ಮಜನಿಗೆ ತಂದೆಯ ಸ್ಥಾನದಲ್ಲಿರುವ ಧೃತರಾಷ್ಟ್ರ ಅರಮನೆಯಲ್ಲಿರುವವರೆಗೆ ರಾಜಧಾನಿಯಲ್ಲಿರುವವರೆಗೆ ಧರ್ಮಜನ ಧರ್ಮಾಡಳಿತದ ಅಧಿಕಾರ ಅಪೂರ್ಣವೇ! ಇದನ್ನು ಧರ್ಮಜ ಗಣನೆಗೆ ತಾರದಿದ್ದರೂ ಭೀಮನಿಗೆ ಕಿರಿಕಿರಿ. ತನ್ನ ಅಸಮಾಧಾನವನ್ನು ಆಗಾಗ್ಗೆ ಮಹಾರಾಜನೆದುರಿಗೆ ತೋರಿಸುತ್ತಿದ್ದುದೂ ತಿಳಿದದ್ದೇ. ಇದರಿಂದ ಮಹಾರಾಜ ಕಾಡಿಗೆ ತೆರಳುವ ನಿರ್ಧಾರ ತ್ವರಿತಗೊಂಡದ್ದು ನಿಜ. ಅರಮನೆಯಿಂದ-ರಾಜಕೀಯದಿಂದ ಹೊರಬಂದದ್ದೇ ಕಾರಣ, ಕಾನನದ ಹೊಸ ದಿನಚರಿಯಲ್ಲಿ ಹಳತೆಲ್ಲ ತೊಳೆದು ಹೊಸ ಜೀವನ ಆರಂಭವಾಗಿತ್ತು. ನಕಾರಾತ್ಮಕ ಭಾವನೆಗಳ ಬದಲಿಗೆ ಹೊಂದಿಕೆಯ, ಶಾಂತಿ ಸಮಾಧಾನದ ಮನಸ್ಥಿತಿ ನಾವು ಮೂವರಿಗೂ ಲಭಿಸಿದ್ದೂ ನನಗೆ ಸಾರ್ಥಕ್ಯದ ತೃಪ್ತಿ ತಂದಿತ್ತು.

ತಪಸಿಗೆಂದು ಕಾನನ ಸೇರಿದಮೇಲೆ ಇಲ್ಲಿನ ಪರಿಶುದ್ಧ ಪರಿಸರದಲ್ಲಿ ವ್ಯಾಸ, ವಿದುರ, ಸಂಜಯರ ಸ್ನೇಹದ ಸಹವಾಸದಲ್ಲಿ ಬಹಳ ಸ್ವಸ್ಥ ಮನಸ್ಕರು ನಾವೂ ಮೂವರೂ -ಎಪ್ಪತ್ತು ದಾಟಿದ ಗಾಂಧಾರಿಯಂತೂ ಹದಿನೇಳರ ಹುಡುಗಿಯಂತೆ ಗಿಡಮರಗಳನ್ನು ಬಳ್ಳಿಹೂಗಳನ್ನು ಹಕ್ಕಿ ಹರಿಣಿಗಳನ್ನು ಮುಟ್ಟಿ ಮುಟ್ಟಿ ನೋಡಿ ಆನಂದಿಸುವುದನ್ನು ಕಂಡರೇ ನಮಗೆಷ್ಟು ಆನಂದ! ಬಹುಕಾಲದ ನಂತರ ವೃದ್ಧರ ಗುಂಪಿನಲ್ಲಿ ನಗುವಿನ ತರಂಗ-ಮುಕ್ತಮನಸ್ಸಿನ, ಹಿಂದು ಮುಂದಿನ ನೋವು-ಆತಂಕಗಳಿಲ್ಲದ ಬೆಳ್ಳಂಬೆಳಕಿನ ನಗುವಿನಲೆ!..ಈ ನಲಿವು ಹಸ್ತಿನಾಪುರದ ಅಂತಃಪುರದಲ್ಲಿತ್ತೇ? ನಾವೆಲ್ಲ ಜೀವನವನ್ನೇ ಭಾರ್ಯೆಸಿಬಿಟ್ಟಿದ್ದೆವೇ? ಜೀವಸವನ್ನು ಎಳೆದೆಳೆದು ತಳ್ಳಿದೆವೇ? ಈಗಂತೂ ದಿಟವಾಗಿ ಹಗುರ ಹಗುರ ಮನಸು. ಕಾರಣ? ಹಸ್ತಿನಾವತಿಯಲ್ಲಿರುವವರೆಗೆ 'ಮಮತ್ವ'ದ ಕಿರುರಂಗದ ಪಾತ್ರಧಾರಿಗಳಾಗಿದ್ದೆವು. ಪಾತ್ರಧಾರಿ ಎಂಬ ಅರಿವಿಲ್ಲದೆ ಸುಖ ದುಃಖ ಅನುಭವಿಸಿದವರಿಗೆ ಜೀವನ ಭಾರವಲ್ಲದೆ ಮತ್ತೇನು? ಆದರೀಗ? 'ವಿಶ್ವ'ದ ಬೃಹದ್‌ರಂಗದ ಪಾತ್ರಧಾರಿಗಳು. ಕೇವಲ ಪಾತ್ರಧಾರಿಗಳೆಂಬ

ಅರಿವಿನಿಂದಾಗಿ ಸಿಕ್ಕಿರುವ ಹಾಸ್ಯಪ್ರಜ್ಞೆಯಿಂದಾಗಿ ಮುಳ್ಳುಚುಚ್ಚಿದರೂ ನಗು..ಮಳೆ ಬಂದರೂ ನಗು, ಚಳಿಯಾದರೂ ಸರಿ, ಬಿಸಿಲಾದರೂ ಸರಿ... ಯಾವುದಾದರೇನು ನಗುತಿರಲಿಕ್ಕೇನು ಕೊಡಬೇಕು? ಸದಾ ಹಸನ್ಮುಖಿ ಕೃಷ್ಣನ ಗುಟ್ಟೇ ಇದು!.. 'ಹಿಂದು ಮುಂದಿಲ್ಲದ' ಈ ಕ್ಷಣಕ್ಕೆ ಮಾತ್ರ ಸಜೀವವಾಗಿರುವ ಸಂತೋಷದ ಹಗುರ ಮನಸ್ಸಿನ ಗುಟ್ಟು.. ನಾನು ನಕ್ಕಿದ್ದು ಯಾವಾಗ? ಭೀಮನೊಂದಿಗೆ ಹಿಡಿಂಬೆಯ ಮರದ ಮೇಲಿನ ಮನೆಯಲ್ಲಿ? ಕೃಷ್ಣನೊಂದಿಗೆ ವಾದಕ್ಕಿಳಿದಾಗ? ವ್ಯಾಸರ ಸಂಗಡ? ಕಾಡಿಗೆ ಬಂದಂದಿನಿಂದಲೂ ನಾನು, ವಿದುರ ಬಹಳವೇ ಹಾಸ್ಯದ ಹೊನಲು ಹರಿಸಿದ್ದೇವೆ. ಅದರಲ್ಲೇ ಮಿಂದು, ಆಡಿ, ಈಜಾಡಿ.. ಈಚೆಗೆ ಗಾಂಧಾರಿಯೂ ಸೇರಿಕೊಳ್ಳುವುದುಂಟು. ನಾಲ್ಕೈದು ದಶಕಗಳೇ ಕಳೆದಿರಬೇಕು. ಮೊದಲಬಾರಿಗೆ ವನವಾಸಕ್ಕೆಂದು ಪಾಂಡು ಮಾದ್ರಿಯರೊಡನೆ ಬಂದಾಗಲೂ ಉತ್ಸಾಹವಿತ್ತು. ಅರಮನೆಯ ಬಿಗಿ ವಾತಾವರಣದಿಂದ ಬಿಡುಗಡೆ ಪಡೆದ ನಿರಾಳವಿತ್ತು. ದೇಹದಾರ್ಢ್ಯವೂ ಇತ್ತು. ಜೊತೆಯಲ್ಲೇ ಯೌವನದ ಬೇಕುಬೇಡಗಳೂ ಬೇಕಾದಷ್ಟಿದ್ದವು. ಆಸೆ ಆಕಾಂಕ್ಷೆಗಳನ್ನು ಅದುಮಿಡಬೇಕಾಗಿತ್ತು. ಈಗ?... ಈಗಲೂ ವನವಾಸವೇ! ಎರಡು ಮೂರು ವರ್ಷಗಳಿಂದ. ಆದರೆಷ್ಟು ಅಂತರ? ಬೇಕು ಬೇಡಗಳಿಲ್ಲದ ನಿರಾತಂಕವಿದೆ. ದ್ವೇಷ-ಅಸೂಯೆಗಳಿಲ್ಲದ ಪ್ರೀತಿ ವಾತ್ಸಲ್ಯವಿದೆ. ನನ್ನ ಕಡೆಯಿಂದ ಸಮಾಜಕ್ಕೆ ಸಲ್ಲಬೇಕಾದ್ದೆಲ್ಲ ಸಂದಾಯವಾದ ಮುಕ್ತಭಾವವಿದೆ. ಸಮಾಜದಿಂದಲೂ ನನಗೇನೂ ಬೇಕಿಲ್ಲದ ತೃಪ್ತಭಾವವಿದೆ. ನಾವು ಲೀಲಾಮಾತ್ರಜೀವರು ಎಂಬ ನಿರ್ಲಿಪ್ತತೆ... ಜಡಚೇತನವೆಲ್ಲದರ ಲೀಲೆಯನ್ನು ನೋಡುವ ವಿನೋದಭಾವವಿದೆ. ಈಗಲೂ ಅಂದು ಅಲೆದಾಡಿದ ಅದೇ ಕಾನು, ಅದೇ ಏರು, ಅದೇ ಇಳಿ, 'ಅದೇ' ಝುರಿ, ಅದೇ ಮಂಜು. ಅದೇ ಆಕಾಶ.. ಜೊತೆಗೆ 'ಆತ್ಮಸಖ' ವಿದುರನ ಸಾಂಗತ್ಯ. ಮಾತನಾಡಲು ವಿಷಯ? ಕೃಷ್ಣ ಇಲ್ಲವೇ 'ಅದು' 'ಇದು' 'ನಾನು'! ಏನೋ ತುಂಬು, ಏನೋ ತೃಪ್ತಿ. ಇಳಿವಯಸಿನ ಗಳಿತದೇಹದ ಪರವೆ ಕೊಂಚವೂ ಇಲ್ಲದ, ಹಕ್ಕಿಯಂತೆ ಹಾರಾಡುವಷ್ಟು ಹಗುರಭಾವ. ದೂರದ ಕಾಡಿನ ಮೇಲೆ ...ಮೇಲೆ...ಮೇಲೆ ಹಾರಿ ಹಾರಿ ನರ್ತಿಸುತ್ತಿರುವ ಕಾಳ್ಗಿಚ್ಚಿನ ಬೆಂಕಿಕಿಡಿಗಳಂತೆ. ಆಕಾಶದ ಪ್ರಕಾಶದಲ್ಲಿ ಲೀನವಾಗುವ ಭಾವ.

ತಿಂಗಳ ಮೇಲಾಯಿತು... ಗ್ರೀಷ್ಮದ ಸುಡು ಬಿಸಿಲು ಕಾಡಿನ ಜೀವರಸವನ್ನೇ ಹೀರಿ ಹೀರಿ..ಗಿಡಮರಗಳೆಲ್ಲ ಒಣಗಿ ನಿಂತು..ಕೆರೆ ಕೊಳ್ಳಗಳ ನೀರೂ ಬತ್ತಿ ಬತ್ತಿ, ಮೊಣಕಾಲೂ ನೆನೆಯುದಷ್ಟು ಇಂಗಿಹೋಗಿ.. ಹಳತಾದುದೆಲ್ಲವನ್ನೂ ಸುಟ್ಟುಬಿಡುವ ಮನಸು ಸೂರ್ಯದೇವನಿಗೆ..ಒಣಗಿಹೋದ ಬಿದಿರಿನ ಮೆಳೆಯಿಂದ ಹುಟ್ಟಿಬಂದ ಕಿಡಿಯೋ ಸ್ಫಟಿಕದ ಕಲ್ಲಿನಲ್ಲಿ ತೂರಿಬಂದ ಸೂರ್ಯರಶ್ಮಿ ಹೊತ್ತಿಸಿದ ಕಿಡಿಯೋ.. ಅಂತೂ ಸುಡಲೆಂದೇ ನಿಂತ ಉರವಲಿನಂತಾದ ಕಾಡಿಗೆ ಅಗ್ನಿಸ್ಪರ್ಶ. ಸಸ್ಯರಾಶಿಗೆ, ಪ್ರಾಣಿಲೋಕಕ್ಕೆ ಜೀವ ಕೊಟ್ಟ ರವಿಯೇ ಜೀವರಸ ಹೀರಿ ಜೀವ ತೆಗೆವವನೂ! ಜೀವಕ್ಕೆ ಜೀವ ಕೊಟ್ಟವನೇ "ನಿನ್ನದೆನ್ನುವುದಾಯಿತು.. ಬಾರೆನ್ನ ಬಳಿಗಿನ್ನು ಬಾರನ್ನೊಳಗೇ".. ಎಂದಿಹನು.

ಅಂದು ಕರ್ಣನಲ್ಲಿಗೆ ಹೋಗಿ 'ನೀನೆನ್ನ ಮಗ' ಎಂದೊಪ್ಪಿಕೊಳ್ಳಲಾರದ ಅಹಮಿಕೆಯಿಂದ.

ಹೀನಾಯದಿಂದ, ಯುದ್ಧದ ಸಲುವಾಗಿ ಕೇರಿಯಲ್ಲಿಟ್ಟಿದ್ದ ಕಿಚ್ಚಿನೊಳಗೇ ಹೊರಟುಹೋಗುವ ಮನಸಾಗಿತ್ತು. ಮನದೊಳಗಿನ ಆತಂಕ, ಅವಮಾನ, ನೂರೆಂಟು ಬೇಕಿಲ್ಲದ ಭಾವನೆಗಳು ಭೂತವರ್ತನ ನಡೆಸಿದ್ದವು. ಇಂದು 'ಆ ತತ್ವ'ದಲ್ಲಿ ಸೇರಿಸಿಕೊಳ್ಳಲು...'ಬಾರೆನೊಳಗೆ' ಎಂದವನ ಆಹ್ವಾನದ ಮೇರೆಗೆ ಅಗ್ನಿಯೊಳಗೇ ..ಭೂತನರ್ತನ ಮಾಡಿರುವ ಅಗ್ನಿಜ್ವಾಲೆಗಳೊಳಗೆ.. ಮೀಯಲೆಂದು ಹೊಳೆಗಿಳಿಯುವಷ್ಟು ಆಪ್ಯಾಯತೆಯಿಂದ ಅದಕ್ಕೂ ಮುಗಿಲಾಗಿ! ಅಗ್ನಿಯೇ ನಮ್ಮಲ್ಲಿಗೇ ಬಂದು ಸ್ಪರ್ಶಿಸವುದೆಂತು ಸೊಗಸು!

ವಿದುರದೊಂದು ರೀತಿಯ ಮುಕ್ತಾಯ. ನಾವು ಮೂವರದೊಂದು ರೀತಿಯ ಮುಕ್ತಾಯ. ವಿದುರನದು 'ಸಾವಿಲ್ಲದೇ, ದಹನವಿಲ್ಲದ' ಮುಕ್ತಾಯ. ದೇಹ ಮಣ್ಣಿನಲ್ಲಿ ಮಣ್ಣಾಗಿಹೋದ ಮುಕ್ತಾಯ. ನಮ್ಮದು ಪ್ರಕೃತಿಯೇ ಕೊಡುವ ದಹನ ಸಂಸ್ಕಾರದ ಮುಕ್ತಾಯ. ನಂತರದ ಮಳೆಯ ಜಲಾಂಜಲಿಯೂ ಕೂಡ! ಭಾಪುರೇ! ಭಾಪು! ಬೇರಾರೂ ಬೇಕಿಲ್ಲದ ತಂತಾನೇ ನಡೆವ ಅಂತ್ಯಕ್ರಿಯೆ. ಪ್ರಕೃತಿಯೇ ಕೊಡುವ ದಹನ ಸಂಸ್ಕಾರ! ಇದೇ ಇರಬೇಕು 'ಸತ್ಸಂಗ'ದ ಪರಿಣಾಮ.

ಇಂದು ನಸುಕಿನಲ್ಲೇ ಸಂಜಯ ಕಾಡಿನಂಚಿಗೆ ನಡೆದಾಗಲೇ ಇಹದೊಡನೇ ನಮಗಿದ್ದ ಕೊನೆಯ ಕೊಂಡಿ ಕಳಚಿದ್ದು, ಈಗ ನಾವು ಮೂವರೇ ...ಅತ್ತಿತ್ತ ಕದಲದೆ ಕುಳಿತವರು. ಹೊಯ್ದಾಡಿಸುವ ಗಾಳಿಯಿಲ್ಲದೆ ನಿಶ್ಚಲವಾಗಿ ಉರಿವ ದೀಪಶಿಖೆಯಂತೆ ಕಾಮನೆಗಳ ಹೊಯ್ದಾಟವಿಲ್ಲದೆ ಉರಿದಿರುವ ಶಾಂತಚಿತ್ತ ಜೀವಗಳು. ತಾರತಮ್ಯಗಳೆಲ್ಲ ಅಳಿದು ಬೆಳಗಿರುವ ಕೇವಲ ಜೀವಾಗ್ನಿಗಳು. ಬಳಿಗೆ ಬರುತ್ತಿರುವ ದಾವಾಗ್ನಿಗೆ ಆಹುತಿಯಾಗಿ ಅದರಲ್ಲೇ ಬೆರತು ಒಂದಾಗಲು ಸಿದ್ಧರಾದವರು. ಯಜ್ಞದಲ್ಲಿ ಮತ್ತೆ ಮತ್ತೆ ಅಜ್ಯ ಹುಯ್ಯುವಾಗ ದರ್ವಿಯ ತುಟಿಯಂಚಿನಲ್ಲಿ ತೂಗಾಡಿರುವ ಆಜ್ಯಬಿಂದುಗಳಂತೆ ಕುಳಿತ ಬೊಂಬೆಗಳು. ನಿಜ. ಈ ದಾವಾಗ್ನಿಯ ಯಜ್ಞದಲ್ಲಿ ಹವಿಸ್ಸಾಗಲಿರುವ ಬೊಂಬೆಗಳು.

ಅಕೋ! ಕಾಲನ ಮಹಾಯಜ್ಞದ ಒಂದು ಕಿರುನೋಟ! ತನ್ನೊಳಗೇ ಹುಟ್ಟಿಬಂದ ಅಗ್ನಿಗೆ ತನ್ನನ್ನೇ ಆಹುತಿ ಕೊಡುತ್ತಿರುವ ಕಾಡು; ಅಗ್ನಿಸ್ಪರ್ಶ ಪಡೆದು ತನ್ನನ್ನೇ ಸ್ವಾಹಾ ಮಾಡುತ್ತಿರುವ ಕಾಡು. ಊಟವೂ ಅದೇ, ಉಣುವುದೂ ಅದೇ ಕಾಡು! ಉರಿವ ಕೊರಡು ತನ್ನ ತೆಕ್ಕೆಗೆ ಬಂದುದನೆಲ್ಲ ಉರಿಸಿ ಮತ್ತೊಂದು ಕೊರಡಾಗಿಸಿ ತನ್ನನ್ನೇ ಸ್ವಾಹಾ ನೀಡಿರುವ ಯಜ್ಞ! ನಾವೂ ಅದರೊಳಗೆ 'ಸ್ವಾಹಾ' ಆಗಲಿರುವ ಯಜ್ಞ, ಎಂಥ ಭವ್ಯ ದೃಶ್ಯ! ಮಾತ್ರವಲ್ಲ. ದೇಹಾನುಭವವೂ ಆಗಲಿರುವ ಯಜ್ಞ, ಪ್ರಪಂಚದಲ್ಲಿ ನಡೆದಿರುವ ಪ್ರತಿಯೊಂದು ಸ್ಥೂಲ-ಸೂಕ್ಷ್ಮ ಕಾರ್ಯವೂ ಒಂದಲ್ಲ ಒಂದು ರೀತಿಯಲ್ಲಿ ಯಜ್ಞವೇ! 'ಕೊಟ್ಟು' 'ಪಡೆವ' ಯಜ್ಞ! ತನ್ನದೆನ್ನುವುದೊಂದನ್ನು ಕೊಟ್ಟು ತನಗೆ ಬೇಕಿರುವುದನ್ನು 'ಪಡೆವ' ವಿಧಾನವೇ 'ಯಜ್ಞವಲ್ಲವೇ? ಜಡವಾಗಲೀ ಚೇತನವಾಗಲೀ ನಡೆದಿರುವ ನಡೆಸಿರುವ ಕಾರ್ಯವೆಲ್ಲವೂ ಕೊಡಕೊಳ್ಳುವ 'ಯಜ್ಞ'ವಲ್ಲವೇ? ಈ ಎಲ್ಲ ಕಾರ್ಯಗಳ ಮೊತ್ತವೇ ಈ ಪ್ರಪಂಚ! ಮಹಾಕಾಲನ ವಿರಾಟ್ ಯಜ್ಞದ ಫಲಸ್ವರೂಪವಾದ ಈ ಜಗತ್ತು! ದೇವತೆಗಳಿಗೆ ಹವಿರ್ಭಾಗ ಕೊಟ್ಟು ಅವರ ಕೃಪೆ

ಪಡೆಯುವುದಕ್ಕೆಂದೇ ಅಲ್ಲವೇ ನಾವು ಆರ್ಯರು ದಿನದಿನವೂ ಮಾಡುವ ಅಗ್ನಿಕಾರ್ಯವಾದ ಯಜ್ಞ-ಅಂತೆಯೇ ವ್ಯವಹಾರಿಕವಾಗಿ ನಾವು ಮಾಡುವ ಪ್ರತಿ ಕಾರ್ಯವೂ... ನಮ್ಮ ದೇಹಶ್ರಮವಿರಬಹುದು, ನಮ್ಮ ವೇಳೆಯಾಗಬಹುದು, ಧನ, ಧ್ಯಾನ, ಬುದ್ಧಿ ಚಾತುರ್ಯವಾಗಬಹುದು, ಇರುವುದನ್ನು ವ್ಯಯಿಸಿ ಬೇಕಾದುದನ್ನು ಗಳಿಸುವುದೇ ಆಗಿದೆ. ಒಂದೊಂದು ಜೀವಿಯೂ ತನಗೆ ಇಷ್ಟವಾದುದನ್ನು ಗಳಿಸುವ, ಅನಿಷ್ಟವಾದುದನ್ನು ನಿವಾರಿಸುವ ಕಾರ್ಯವೆಲ್ಲವೂ ಯಜ್ಞವೇ! ತನಗಾಗಿ, ತನಿಷ್ಟಕ್ಕಾಗಿ, ಪ್ರೇಯಸ್ಸಿಗಾಗಿ ಮಾಡಿದುದಾದರೆ ಆ ಕ್ಷಣಕ್ಕೆ ಪ್ರಿಯವಾದುನ್ನು 'ಯಜ್ಞಫಲ'ವಾಗಿ ಪಡೆಯುವುದು. ಅನ್ಯರಿಗಾಗಿ ಅವರ ಹಿತಕ್ಕಾಗಿ ಶ್ರೇಯಸ್ಸಿಗಾಗಿ ಮಾಡಿದುದಾದರೆ ಶ್ರೇಯಸ್ಸಿನ ಫಲ-ಎಲ್ಲರಿಗೂ! ಅನ್ಯರಿಗೆಂದು ಮಾಡುವ ಕಾರ್ಯದ ವ್ಯಾಪ್ತಿ ಹಿರಿದಾದಷ್ಟೂ 'ಯಜ್ಞ'ದ ಶ್ರೇಯೋಫಲವೂ ಹಿರಿದಾಗುವುದು. ದೇಶ ಕಾಲಗಳೆರಡನ್ನೂ ದಾಟುವವರೆಗೆ ವ್ಯಾಪಿಸುವ ಯಜ್ಞವೇ 'ವಿಶ್ವಜಿತ್' ಯಜ್ಞವಂತೆ.. ತನ್ನ ಸರ್ವಸ್ವವನ್ನೂ ಅರ್ಪಿಸಿದ ಮೇಲೆ ತನ್ನನ್ನೇ ಅರ್ಪಿಸಿಕೊಳ್ಳುವ 'ವಿಶ್ವಜಿತ್'! ವ್ಯಾಸರು ವಿವರಿಸಿದಂತೆ ಈ ಯಜ್ಞದ ನಿಜಾರ್ಥ ಎಷ್ಟು ವಿಶಾಲ-ಉನ್ನತ... ತನ್ನದೆಲ್ಲವನ್ನೂ ಕೊಡುತ್ತ, ತನ್ನನ್ನೇ ಲೋಕಕಲ್ಯಾಣಕ್ಕೆ ಕೊಟ್ಟು ಬಿಟ್ಟ ಕೃಷ್ಣನದೂ ವಿಶ್ವಜಿತ್ ಯಜ್ಞವೇ! 'ನಾನು' 'ನನ್ನದು' ಎಂಬುದನ್ನೇ ಆಹುತಿಪೊಟ್ಟು ವಿಶ್ವವನ್ನು ಪ್ರೇಮದಿಂದಲೇ ಜಯಿಸುವ ಈ ಯಜ್ಞದ ಕಲ್ಪನೆಯೇ ಎಷ್ಟು ಪ್ರೇಮಭರಿತ... ಕಾಯಾ, ವಾಚಾ, ಮನಸಾ, ಬೇರೇನೂ ಭಾವವಿಲ್ಲದ ವಿಶ್ವಪ್ರೇಮದ ಉದ್ದೇಶವಿರುವ 'ವಿಶ್ವಜಿತ್' ಯಜ್ಞ ವೈದಿಕ ವಿಧಿಗಳಿಗೆ ಕಲಶಪ್ರಾಯ. ಪ್ರತಿಮಾನವನನ್ನು ವಿಶ್ವಪ್ರಜೆಯನ್ನಾಗಿಸಲು ರೂಪುಗೊಂಡ ವೈದಿಕಧರ್ಮವೇ... ರಕ್ಷಿಸುವುದೆಲ್ಲವನ್ನೂ! ಎಲ್ಲ ಧಾರ್ಮಿಕ ವಿಧಿಗಳ ಅಂತರಾರ್ಥ ತಿಳಿಯದೆ ಮಾಡಿದುದಾರೆ ಅವೆಲ್ಲ ವ್ಯರ್ಥ ಕಲಾಪ. ಅರ್ಥ ಉದ್ದೇಶ ತಿಳಿದು ಶ್ರದ್ಧೆಯಿಂದ ಮಾಡಿದುದಾದರೆ ಅತಿ ಚಿಕ್ಕ 'ಯಜ್ಞ' ಕಾರ್ಯವೂ ಎಷ್ಟು ಸಮಂಜಸ-ಶ್ರೇಷ್ಠವಾದೀತು! ಉದ್ದೇಶ ಲೋಕಹಿತವಾದರೆ ಮಾಡುವ ಎಲ್ಲ ಕಾರ್ಯವೂ 'ಯಜ್ಞ' ವಾಗುವುದು. ಉದ್ದೇಶ ಸ್ವಹಿತವಾದರೆ ಮಾಡುವ ಮಹಾಯಜ್ಞವೂ ಸ್ವಕಾರ್ಯದ ಮಟ್ಟಕ್ಕಿಳಿದು ಹೋಗುವುದಷ್ಟೇ.

ಮಹಾಕಾಲನ ವಿರಾಟ್‌ಯಜ್ಞವು ವಿಶ್ವವ್ಯಾಪಿಯಾದಂತೆಯೇ ಸೂಕ್ಷ್ಮಾತಿಸೂಕ್ಷ್ಮವಾಗಿ ನಮ್ಮೊಳಗೂ ನಿರಂತರ ನಡೆದಿದೆಯಲ್ಲವೇ? ಆಹಾ! ನೋಡುವ ಕಾರ್ಯದಲ್ಲಿ ಕಣ್ಣುಗಳಿಗೆ ಹವಿಸ್ಸಾಗುವುದು ದೃಶ್ಯ..ಕಿವಿಗಳಿಗೆ ಹವಿಸ್ಸು ಶಬ್ದ.. ಉಣ್ಣುವಾಗ ನಾಲಗೆಗೆ ಆಹುತಿ ರಸರುಚಿ ..ಫಲವಾಗಿ ಸಿಗುವುದು ಅನುಭವ. ಇನ್ನೂ ಒಳಹೊಕ್ಕು ಯೋಚಿಸಿದರೆ ...ಕಣ್ಣು ಕಂಡುದು, ಕಿವಿ ಕೇಳಿದುದು, ನಾಲಗೆ ಆಸ್ವಾದಿಸಿದುದು, ಗಂಧ, ಸ್ಪರ್ಶ-ಎಲ್ಲವೂ ಮನಸ್ಸಿಗೆ ಹವಿಸ್ಸು! ಈ ಯಜ್ಞಕಾರ್ಯದ ಫಲ? ಅದ ಅನುಭವಗಳ ಜ್ಞಾನ. ಮನಸ್ಸಿನ ಇಷ್ಟಾನಿಷ್ಟಕ್ಕೆ ತಕ್ಕಂತೆ ಈ ಅನುಭವಗಳಿಗೆ ಸುಖ ಅಥವಾ ದುಃಖದ ಲೇಪ. ಈ ಜ್ಞಾನ, ಅನುಭವಗಳೂ ಆಹುತಿಯಾಗುವುವು ಆತ್ಮ ಚಿಂತನೆಯಲ್ಲಿ. ಆಗ ಫಲಸ್ವರೂಪವಾಗಿ ಲಭಿಸುವುದು ಇಷ್ಟಾನಿಷ್ಟಗಳ ಹೀಜಾಟದಿಂದ ಬಿಡುಗಡೆ. ಚಿತ್ತ ಸ್ವಾಸ್ಥ್ಯ, ಮನಶ್ಶಾಂತಿ - ಇವೆಲ್ಲ ಹಂತಗಳ ಯಜ್ಞ ಸಾಧ್ಯವಾಗುವುದು ಉಸಿರಾಟದ ಯಜ್ಞದಿಂದಲ್ಲವೇ! ಭಾಪುರೇ! ಪ್ರಾಣ ಜ್ವಲಂತವಾಗಿರಲು ಉಸಿರಿನ

ಹವಿಸ್ಸು; ಜೀವಂತಕೋಶಗಳಿಗೆ ಆಹಾರದ ಹವಿಸ್ಸು; ಹಳತು ತೆಗೆದು ಹೊಸತು ಸೃಷ್ಟಿಸಲು ನಿದ್ದೆಯ ಹವಿಸ್ಸು; ಒಳಗಿರುವ 'ನಾನು' ಎನ್ನುವದು ತನ್ನದೇ 'ಲೋಕ'ವನ್ನು ಸೃಷ್ಟಿಸಲು ಮಾಡುವ ಯಜ್ಞಕ್ಕೆ ಏನೆಲ್ಲ ಪರಿಕರಗಳು ಸಿದ್ಧತೆಗಳು. ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು ಅವುಗಳ ಮೇಲಿನ ಚಿತ್ತ, ಬುದ್ಧಿ, ಮನಸ್ಸು ...ತನ್ನದೇ ರೀತಿಯಲ್ಲಿ ತನ್ನದೇ ವಿಶಿಷ್ಟ ಲೋಕವನ್ನು 'ಜ್ಞಾನ' ಅನುಭವಗಳ ಮೂಲಕ ಪಡೆಯುವ 'ನಾನು' ತನ್ನ ಇರುವಿಕೆಗಾಗಿ – ಅಸ್ತಿತ್ವಕ್ಕಾಗಿ ನಡೆಸುವ ನಿರಂತರ ಯಜ್ಞವೇ 'ಜೀವನ; ಅಚ್ಚರಿ! ಅಚ್ಚರಿ!

ಚಿಟ್ಟಿರುವೆಗಿಂತಲೂ ಚಿಕ್ಕ ಜೀವಿಯಿಂದ ಹಿಡಿದು..ದೇವೇಂದ್ರನ ವರೆಗೆ ಅವನಿಗೂ ದೊಡ್ಡವರಿದ್ದರೆ ಅವರಲ್ಲಿಯೂ.. ಒಂದೊಂದರಲ್ಲೂ 'ನಾನು' ಎಂದು ಆವಾಹಿತವಾಗಿ 'ಯಜ್ಞ' ವು ನಿರಂತರ ನಡೆಯುವಂತೆ ಪ್ರಚೋದಿಸುವುದಾವುದು? 'ನಾನು' ಯಾರು? 'ಅದು' 'ಅದು' 'ಅದೇ' ನಾನು~ ಕಾರಣವೂ 'ಅದೇ' ಕಾರ್ಯವೂ 'ಅದೇ' ಕರಣವೂ 'ಅದೇ' ಪರಿಣಾಮವೂ 'ಅದೇ'; ಅದೇ ನಾನು; ನಾನೇ ಅದು;

*ಬ್ರಹಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾಹುತಂ*
*ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ ಕರ್ಮ ಸಮಾಧಿನಾ..*
*ಓಂ ಶಾಂತಿಃ ಶಾಂತಿಃ ಶಾಂತಿಃ*
*ಶ್ರೀ ಗುರುಭ್ಯೋ ನಮಃ ಹರಿಃ ಓಂ ತತ್ಸತ್.*

* *

**ಗ್ರಂಥಸೂಚಿ :**


೧. ‘ಕರ್ಣಾಟ ಭಾರತ ಕಥಾಮಂಜರಿ’; ಕುಮಾರವ್ಯಾಸ ಮಹಾಕವಿ

೨. ‘ವಚನ ಭಾರತ’; ಎ.ಆರ್. ಕೃಷ್ಣಶಾಸ್ತ್ರಿ.

೩. ‘ಶ್ರೀಮನ್ ಮಹಾಭಾರತ’; ವ್ಯವಸ್ಥಾಪಕ ಸಂಪಾದಕ ‘ವಿಶ್ವಾಮಿತ್ರ’.

೪. ‘ಪರ್ವ’; ಎಸ್.ಎಲ್.ಭೈರಪ್ಪ.

5. ‘Krishanavatara’ (vol -1-7); K.M.Munshi

೬. ‘The Mahabharata by Vyasa’; p.lal

7. ‘Mahabharata’; Kamala Subramaniam

8. ‘Uganta’; Grawati Karve

9. Krishna & Human Relations; Harindra dave.



ಶ್ರೀಮತಿ ತಾರಾಮೂರ್ತಿ ಅವರು ದಿವಂಗತ ಪ್ರೋ ವೆಂಕಣ್ಣಯ್ಯನವರ ಕುಟುಂಬಕ್ಕೆ ಸೇರಿದವರು. ವೆಂಕಣ್ಣಯ್ಯನವರ ಕುಟುಂಬ ಎಂದರೆ ಸಾಹಿತ್ಯ ಸಂಸ್ಕೃತಿಗಳ ಒಂದು ಕೇಂದ್ರ. ಈ ವಿಶೇಷ ಗುಣಗಳು ಶ್ರೀಮತಿ ತಾರಾ ಅವರಲ್ಲಿ ವಂಶ ಪಾರಂಪರ್ಯವಾಗಿ ಮೂಡಿ ಬಂದಿದೆ. ಆದ್ದರಿಂದಲೇ ಮಹಾಭಾರತದ ಅನೇಕ ಸೂಕ್ಷ್ಮ ವಿಷಯಗಳನ್ನು ಹಿಗ್ಗಿ-ಹಿಂಜಿ ಈ ಪುಸ್ತಕದಲ್ಲಿ ವಿಮರ್ಶೆ ಮಾಡಿದ್ದಾರೆ. ಮಹಾಭಾರತದಲ್ಲಿ ಗೌಣವೆನಿಸುವ ಸೂಕ್ಷ್ಮ ವಿಚಾರಗಳನ್ನು ಇಲ್ಲಿ ವಿಮರ್ಶೆಯ ಒರೆಗಲ್ಲಿಗೆ ಇಟ್ಟಿದ್ದಾರೆ. ವಿಚಾರವಂತರಿಗೆ ಇದೊಂದು ಮಾರ್ಗದರ್ಶನವಾಗಿದೆ. ಮಾನ್ಯ ಪ್ರೊ॥ ಜಿ.ವೆಂಕಟಸುಬ್ಬಯ್ಯನವರ ಮುನ್ನುಡಿಯು ಇದಕ್ಕೆ ಕಲಶವಿಟ್ಟಂತಿದೆ. ಇಂತಹ ಪುಸ್ತಕವನ್ನು ರಚಿಸಿದ ಶ್ರೀಮತಿ ತಾರಾ ಅವರಿಗೆ ಈ ಮೂಲಕ ನನ್ನ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದೇನೆ. ವಿಚಾರವಂತ ಓದುಗರು ಇದನ್ನು ಸಾರ್ಥಕ ಪಡಿಸುತ್ತಾರೆಂದು ನಂಬಿದ್ದೇನೆ. ಇದನ್ನು ಪ್ರಕಟಿಸಿದ ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ನನ್ನ ಕೃತಜ್ಞತೆಗಳು.

೨೮-೧೦-೦೮ ಬೆಳಗೆರೆ ಕೃಷ್ಣಶಾಸ್ತ್ರಿ





ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸಂಶೋಧನ ಕೇಂದ್ರ
ಬೆಂಗಳೂರು.